# ನನ್ನ
# ಜೀವನಸ್ಮೃತಿಗಳು
## (ಉತ್ತರರಂಗ)



ಶ್ರೀ ಆಲೂರ ವೆಂಕಟರಾಯರು
[illegible]
ಧಾರವಾಡ



ಬೆಲೆ ೧ ರೂ. ೪ ಆಣೆ

# ಪರಿವಿಡಿ



# ಪ್ರಸ್ತಾವನೆ



ಇದೊಂದು ಕಿರುಕಥಾಗುಚ್ಛ, ಉಳಿದವುಗಳಂತೆ, ಸ್ವಕಪೋಲ ಕಲ್ಪಿತವಾದುದಲ್ಲ. ನನ್ನ ಸ್ವಂತ ಜೀವನದ ನಿಜವಾದ ಕಥೆಗಳಿವು. ಇದರಲ್ಲಿ, ಕರ್ನಾಟಕದ ೫೦ ವರುಷಗಳ ಸಮಗ್ರ ಸಾರ್ವಜನಿಕ ಇತಿಹಾಸವು ಸಂಕ್ಷೇಪವಾಗಿ ಬಂದಿರುವುದು, ಮತ್ತು ಕರ್ನಾಟಕದ ಏಳ್ಗೆಯ ಮುಂದಿನ ದಾರಿಯೂ ಸೂಚಿತವಾಗಿರುವುದು. ಆದುದರಿಂದ ಇದು ವಾಚಕರಿಗೆ ಮನೋರಂಜಕವೂ ಬೋಧಪ್ರದವೂ ಆಗಿ, **ಭಾವೀ ಕರ್ನಾಟಕದ ಕೈಪಿಡಿ** ಆಗುವುದೆಂದು ತಿಳಿದಿದ್ದೇನೆ.

"ನನ್ನ ಜೀವನಸ್ಮೃತಿಗಳು" ಎಂಬೀ ಗ್ರಂಥದ ಹೆಸರನ್ನೋದಿ, ಇದೇನು ಅಹಂಕಾರದ ಸೊಕ್ಕು! ಅದರ ಮೇಲ್ಗಡೆಗೆ 'ನಾಹಂ ಕರ್ತಾ' ಎಂದು ಹೇಳುವುದೇನು? **ನನ್ನ** ಜೀವನ ಸ್ಮೃತಿಗಳು ಎಂದು ಹೆಮ್ಮೆಯಿಂದ ಹೇಳಿಕೊಳ್ಳುವುದೇನು? ಇದು ಪರಸ್ಪರ ವಿರುದ್ಧವಲ್ಲವೋ—ಎಂಬುದಾಗಿ ವಾಚಕರು ಶಂಕಿಸುವುದು ಸಹಜ. ಅದರ ರಹಸ್ಯ ಹೇಳುವುದಕ್ಕೆ ಈ ಮುನ್ನುಡಿ.

ಅಹುದು. ಇವು **ನನ್ನ** ಜೀವನಸ್ಮೃತಿಗಳು. **ನನ್ನ**ವೆಂಬುದು **ನಾಹಂ** ಎಂಬುದಕ್ಕೆ ವಿರುದ್ಧವೇನೂ ಅಲ್ಲ. ಪರಮಾತ್ಮನು ಆತ್ಮನನ್ನು ಮುಂದಿಟ್ಟುಕೊಂಡೇ ಕೆಲಸಮಾಡುತ್ತಾನೆ. ಆತ್ಮ

ಚರಿತ್ರೆಗಿಂತಲೂ ಹೆಚ್ಚಿಗೆ ಉಪಯುಕ್ತವಾದವುಗಳು ಏಕೆಂದರೆ "ನಮ್ಮ ನಿಮ್ಮಂತೆಯೇ ಇರುವ ವ್ಯಕ್ತಿಯ, ನಮ್ಮ ನಿಮ್ಮ ಅನುಭವಕ್ಕೆ ಬರುವ ಸ್ಮೃತಿಗಳು ಇವು" ಎಂದು ಇವನ್ನು ಓದಿದವರು ಅನ್ನಬಹುದು. ಅವತಾರ ಅಥವಾ ಆದರ್ಶ ಪುರುಷರ ಚರಿತ್ರೆಗಳಿಗೆ ಒಂದು ತರಹದ ಮಹತ್ವವಿದ್ದರೆ ಸಾಮಾನ್ಯ ಪುರುಷರ ಚರಿತ್ರೆಗೆ ಮತ್ತೊಂದು ತರಹದ ಮಹತ್ವವಿರುತ್ತದೆ ಲೋಕವಿಲಕ್ಷಣ ಪುರುಷರ ಅನುಭವಗಳು ಲೋಕವಿಲಕ್ಷಣವಾಗಿರುವುದರಿಂದ, ಅವು ಸಾಮಾನ್ಯರಿಗೆ ಅಸಂಭಾವ್ಯವಾಗಿ ತೋರುವ ಸಂಭವವಿದೆ. ಹಾಗೆ, ನನ್ನ ಸ್ಮೃತಿಗಳ ಬಗ್ಗೆ ಎನಿಸುವುದಿಲ್ಲ ಆದಕಾರಣ, ಕಾಲಸ್ಥಿತಿ ಭೇದದಿಂದ ಪ್ರತಿಯೊಬ್ಬನೂ ಇವು 'ನನ್ನ' ಸ್ಮೃತಿಗಳು ಎಂದು ಹೇಳಿಕೊಳ್ಳಬಹುದು

ಹೆಚ್ಚಿಗೆ ಹೇಳತಕ್ಕದ್ದೆಲ್ಲವನ್ನೂ ಸ್ಮೃತಿಗಳಲ್ಲಿಯೇ ಹೇಳಿರುವುದರಿಂದ ಇಲ್ಲಿ ಮತ್ತೆ ಹೇಳುವ ಕಾರಣವಿಲ್ಲ

ಕೊನೆಗೆ, ನನ್ನ ಒಗನೆಯ ಹುಟ್ಟಿದ ಹಬ್ಬದ ನಿಮಿತ್ತಮಾಡಿಕೊಂಡು, ಜಯಕರ್ನಾಟಕದಲ್ಲಿ ೧॥ ವರುಷಗಳಿಂದ ಈ ಲೇಖಮಾಲೆ ಬರೆಯಲು ಹಚ್ಚಿದ ಶ್ರೀ ಬೆಳಗಾಂವಿ ರಾಮಚಂದ್ರರಾಯರನ್ನು ಸ್ಮರಿಸಿ ಈ ಪ್ರಸ್ತಾವನೆ ಮುಗಿಸುತ್ತೇನೆ.

ಧಾರವಾಡ<br>ವೃಷಸಂವತ್ಸರ<br>ಆಷಾಢ ಶುದ್ಧ ಪಂಚಮಿ<br>೨೯—೬—೧೯೪೧ } ಆಲೂರ ವೆಂಕಟರಾಯ

# ಸ್ಮೃತಿಗಳಿಗೆ ಅನುಕ್ರಮಣಿಕೆ



# II

ಪ್ರಕರಣ | ಪುಟ

ಪ್ರಕರಣ ಪುಟ

# ನನ್ನ ಜೀವನಸ್ಮೃತಿಗಳು

## (ಉತ್ತರರಂಗ)

"ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ
ಕರ್ಮ ಚಾಖಿಲಂ"

"ಸಕಲವೆಲ್ಲವೂ ಹರಿಸೇವೆ ಎನ್ನಿ"

—ಪುರಂದರದಾಸರು



೧ನೆಯ ಪ್ರಕರಣ

## ನನ್ನ ಮುಂದಿನ ಜೀವನದ ಮುನ್ನೋಟ

ಈ ಗ್ರಂಥದ ಪೂರ್ವರಂಗದಲ್ಲಿ ೧೯೦೫-೬ನೆಯ ಇಸ್ವಿಯ ವರೆಗಿನ ನನ್ನ ಜೀವನದ ಸ್ಮೃತಿಗಳನ್ನು ಕೊಟ್ಟದ್ದಾಯಿತು. ಇನ್ನು ಮುಂದೆ ನನ್ನ ಸಾರ್ವಜನಿಕ ಜೀವನದ ಸ್ಮೃತಿಗಳನ್ನು ಕೊಡಲಿಕ್ಕೆ ಪ್ರಾರಂಭ ಮಾಡತಕ್ಕದ್ದು ಆದರೆ, ಅದಕ್ಕೆ ಮುಂಚೆ ಈ ಪ್ರಕರಣದಲ್ಲಿ, ನಾನು ೧೯೦೫-೬ರಿಂದ ಮುಂದಿನ ನನ್ನ ಜೀವನದ ಸ್ಮೃತಿಗಳ ಮುನ್ನೋಟವನ್ನು ವಾಚಕರ ಕಣ್ಣ ಮುಂದೆ ನಿಲ್ಲಿಸುವೆನು. ಆದರಿಂದ, ನನ್ನ ಇಡೀ ಸಾರ್ವಜನಿಕ ಜೀವನದ ಸಂಕ್ಷಿಪ್ತ ಚಿತ್ರವು ಅವರೆದುರಿಗೆ ಕಟ್ಟಿದಂತಾಗು ವುದು.

ಹಿಂದೆ ಹೇಳಿದ ಸ್ಮೃತಿಗಳಿಗೂ ಮುಂದೆ ಕೊಡುವ ಸ್ಮೃತಿಗಳಿಗೂ ಒಂದು ಭೇದವಿದೆ. ಅದೇನೆಂದರೆ, ಅವನ್ನು ಹಿಂದೆ ಕೊಟ್ಟಂತೆ ವಿವರವಾಗಿ ಕೊಡುತ್ತಹೋದರೆ, ನನ್ನ ಈ ಗ್ರಂಥವು ಮಿತಿಮೀರಿ ಬೆಳೆಯುವುದರಿಂದ, ನಾನು ಇನ್ನು ಮುಂದೆ ಅವುಗಳ ಸಂಖ್ಯೆಯನ್ನು ಕಡಿಮೆಮಾಡುತ್ತಹೋಗುವೆನು. ಮತ್ತು ಆಯಾ ವಿಷಯಗಳ ವಿಕಾಸವು ಹೇಗಾಯಿತೆಂಬುದನ್ನು ತಿಳಿಸುವ ಮಟ್ಟಿಗೆ ಅಲ್ಲಲ್ಲಿ ಹಲಕೆಲವು ಸ್ಮೃತಿಗಳನ್ನು ಕೊಡುವೆನು ಮಿಕ್ಕದ್ದೆಲ್ಲವೂ ಒಂದು ಬಗೆಯಿಂದ ಆಯಾ ವಿಷಯಗಳ ಇತಿಹಾಸವೆಂದೇ ಹೇಳಬಹುದು. ಇತಿಹಾಸಕ್ಕೂ ಇದಕ್ಕೂ ಭೇದವೇನೆಂದರೆ, ಇವು ನನ್ನ ಸ್ಮೃತಿಗಳಾದುದರಿಂದ, ಜೇಡಹುಳದಂತೆ ನಾನು ನನ್ನನ್ನು ಕೇಂದ್ರವಾಗಿಟ್ಟುಕೊಂಡು ಸುತ್ತಲು ನನ್ನ ಸ್ಮೃತಿಗಳ ಜಾಳಿಗೆಯನ್ನು ಹೆಣೆಯುವೆನು. ಹೀಗೆ ವಿಷಯಾನ್ವಯವಾಗಿ ಸ್ಮೃತಿಗಳನ್ನು ಕೊಡುವುದರಿಂದ, ವಿಷಯವು ಒಮ್ಮೆಲೆ ಆಕಲನವಾಗುವುದೆಂಬ ಮಾತು ನಿಜವಿದ್ದರೂ, ಈ ಸ್ಮೃತಿಗಳಲ್ಲಿ ಒಂದು ದೋಷವು ಅನಿವಾರ್ಯವಾಗಿ ಸೇರುತ್ತದೆ. ಅದೇನೆಂದರೆ ಆ ವಿಷಯದ ಕಡೆಗೆ ಮನಸ್ಸು ಇಲ್ಲದವರಿಗೆ ಅವು ನೀರಸವಾಗಿ ತೋರುವ ಸಂಭವವಿದೆ. ಅದಕ್ಕೆ ಉಪಾಯವಿಲ್ಲ ಹಿಂದೆ ಕೊಟ್ಟ ನನ್ನ ನೆನಪಿನ ಚುಟಕೆಗಳಲ್ಲಿ ಒಂದು ಬಗೆಯ ವೈವಿಧ್ಯವಿದೆ. ಆ ಚುಟಕೆಗಳಲ್ಲಿ ನಾನಾ ವಿಷಯಗಳು ಮಿಲಿತವಾಗಿ ಬಂದಿರುವುದರಿಂದ, ಆ ಚುಟಕೆಗಳಿಗೆ ಚಿತ್ರವಿಚಿತ್ರವಾದ ಬಣ್ಣಬಂದಿದೆ. ಹಾಗೆ ಇನ್ನು ಮುಂದಿನ ಸ್ಮೃತಿಗಳ ಸ್ಥಿತಿಯಿರುವುದಿಲ್ಲ.

೧೯೦೫-೬ನೆಯ ಇಸ್ವಿಯ ಮುಂದಿನ ನನ್ನ ಜೀವನವು ಸಾರ್ವಜನಿಕ ಜೀವನವು. ಈ ಅವಧಿಯಲ್ಲಿ ನಾನು ಅನೇಕಾ

ನೇಕ ವಿಷಯುಗಳನ್ನು ಆಕ್ರಮಣ ಮಾಡಿರುವೆನು. ನಾನು ಹಿಂದೆ ಹೇಳಿದಂತೆ, ಕರ್ನಾಟಕದ ಉನ್ನತಿಗೆ ಬೇಕಾಗುವ ಯಾವತ್ತು ವಿಷಯುಗಳಲ್ಲಿ ಒಮ್ಮೆಲೆ ಕೈಹಾಕಿದೆನು. ಆದರೂ ಸ್ಥೂಲವಾಗಿ ವಿಭಾಗಮಾಡುವುದಾದಲ್ಲಿ ಮೊದಲಿನ ಅರ್ಧ ಜೀವನವು, ಎಂದರೆ ೧೯೦೫-೬ರಿಂದ ೧೮-೨೦ ವರ್ಷಗಳ ಜೀವನವು ರಾಷ್ಟ್ರೀಯತ್ವಪ್ರಧಾನ ಜೀವನವೆಂದೂ ಮುಂದಿನ ಜೀವನವು ಕರ್ನಾಟಕತ್ವಪ್ರಧಾನ ಜೀವನವೆಂದೂ ವಿಂಗಡಿಸಬಹುದು ಇವನ್ನು ಹೆಚ್ಚು ಸ್ಪಷ್ಟವಾಗಿ ಮಾಡುವ ಉದ್ದೇಶದಿಂದ, ನಾನು ಆ ಸಂಬಂಧದ ನನ್ನ ಕಲ್ಪನೆಗಳು ಯಾವುವೆಂಬುದನ್ನು ಸ್ವಲ್ಪದರಲ್ಲಿ ಕೊಡುವೆನು.

ನನ್ನ ಅಭಿಪ್ರಾಯದಲ್ಲಿ, ರಾಷ್ಟ್ರೀಯತ್ವದಲ್ಲಿ ಎರಡು ಮುಖ್ಯ ಭೇದಗಳು. (೧) ಪ್ರಾದೇಶಿಕ ರಾಷ್ಟ್ರೀಯತ್ವ (೨) ಸಾಂಸ್ಕೃತಿಕ ರಾಷ್ಟ್ರೀಯತ್ವ. ಪ್ರಾದೇಶಿಕ ರಾಷ್ಟ್ರೀಯತ್ವವು ದೇಹವಿದ್ದಂತೆ. ಸಾಂಸ್ಕೃತಿಕ ರಾಷ್ಟ್ರೀಯತ್ವವು ಜೀವವಿದ್ದಂತೆ. ನಮ್ಮ ರಾಷ್ಟ್ರವು ಇವೆರಡೂ ತರಹದ ರಾಷ್ಟ್ರೀಯತ್ವಗಳನ್ನು ಕಳೆದುಕೊಂಡಿದೆ. ರಾಜಕೀಯ ಪಾರತಂತ್ರ್ಯದ ಮೂಲಕ, ನಮಗೆ ನಮ್ಮದೊಂದು ಬೇರೆ ರಾಷ್ಟ್ರವಿದೆ ಎಂಬ ಕಲ್ಪನೆಯೇ ಹಾರಿಹೋಗಿದೆ. ಸಂಪೂರ್ಣ ರಾಜಕೀಯ ಸ್ವಾತಂತ್ರ್ಯವನ್ನು ಗಳಿಸುವುದೇ ಪ್ರಾದೇಶಿಕ ರಾಷ್ಟ್ರೀಯತ್ವದ ಮುಖ್ಯ ಗುರಿ. ಅಲ್ಲದೆ, ನಮ್ಮ ತಲೆಯೂ ಮನಸ್ಸೂ ಕೂಡ ಪರವಶವಾಗಿವೆ. ನಾವು ಪಾಶ್ಚಾತ್ಯ ಸಂಸ್ಕೃತಿಯ ಮೋಹಕ್ಕೆ ಬಿದ್ದಿದ್ದೇವೆ. ಅದಕ್ಕೋಸ್ಕರ, ಪೌರ್ವಾತ್ಯ ಸಂಸ್ಕೃತಿಯ ಮರ್ಮವನ್ನು ಕಂಡುಹಿಡಿದು, ಪಾಶ್ಚಾತ್ಯ ಸಂಸ್ಕೃತಿಯನ್ನು ಅರಗಿಸಿಕೊಂಡು ನಮ್ಮ ಸಂಸ್ಕೃತಿಯನ್ನು ಪುಷ್ಟಿಗೊಳಿಸಬೇಕಾಗಿದೆ. ಆದಕಾರಣ,

ಸ್ವಾತಂತ್ರ್ಯಸಂಗ್ರಾಮವೇ ಈಗಿನ ನಮ್ಮ ಯುಗಧರ್ಮವು ಆ ಸಂಗ್ರಾಮವು ಎರಡು ಮುಖ್ಯ ಕ್ಷೇತ್ರಗಳಲ್ಲಿ ಸಾಗತಕ್ಕದ್ದು. (೧) ರಾಜಕೀಯ ರಣಕ್ಷೇತ್ರ (೨) ಸಾಂಸ್ಕೃತಿಕ ಧರ್ಮ ಕ್ಷೇತ್ರ. ರಾಜಕೀಯ ರಣಕ್ಷೇತ್ರದಲ್ಲಿ ಕರ್ನಾಟಕವು ಸ್ವತಂತ್ರ ವಾಗಿ ಯುದ್ಧಹೂಡುವಷ್ಟು ಇನ್ನೂ ಸಮರ್ಥವಾಗಿಲ್ಲ ಆದು ದರಿಂದ, ಕರ್ನಾಟಕದ ರಾಜಕಾರಣಕ್ಕೆ ಪ್ರತ್ಯೇಕವಾದ ಅಸ್ತಿ ತ್ವವು ಇನ್ನೂ ಪ್ರಾಪ್ತವಾಗಿಲ್ಲ ಆ ಕ್ಷೇತ್ರದಲ್ಲಿ ಅದು ಮಾಡ ತಕ್ಕ ಮುಖ್ಯ ಕಾರ್ಯವೆಂದರೆ, ಹಿಂದುಸ್ಥಾನದ ಧುರೀಣರು ಹಾಕಿಕೊಟ್ಟ ಮಾರ್ಗದಲ್ಲಿ ಸಾಗಿ, ಕರ್ನಾಟಕವನ್ನು ಮಿಕ್ಕ ಪ್ರಾಂತಗಳಿಗೆ ಸರಿಜೋಡಿಯಾಗಿ ಸಲ್ಲಿಸುವುದು ಇಲ್ಲಿಯೂ ಕೇವಲ ಅನುಕರಣವು ಉಪಯೋಗದ್ದಲ್ಲವೆಂದೂ, ಆ ಸಾಮಾನ್ಯ ಚಟುವಟಿಕೆಗಳಿಗೆ ಕರ್ನಾಟಕತ್ವದ ವಿಶಿಷ್ಟ ಸ್ವರೂಪವನ್ನು ಕೊಡುವುದು ಅತ್ಯವಶ್ಯವೆಂದೂ ನಾನು ಕನ್ನಡಿಗರಿಗೆ ಮನ ಗಾಣಿಸಿಕೊಡಲು ಪ್ರಯತ್ನಿಸಿದ್ದೇನೆ ಇದೇ ನಾನು ಆ ಕ್ಷೇತ್ರ ದಲ್ಲಿ ಮಾಡಿದ ವಿಶಿಷ್ಟಕಾರ್ಯ ಈ ಉದ್ದೇಶವನ್ನನುಸರಿಸಿ, ನಾನು ಎಲ್ಲಕ್ಕೂ ಮುಂಚೆ ಧುಮುಕಿದ್ದು ರಾಜಕಾರಣದಲ್ಲಿ. ಧುಮುಕಿದೆನು ಎನ್ನುವುದಕ್ಕಿಂತ ೧೯೦೫-೬ನೆಯ ಇಸ್ವಿಯ ಸುಮಾರಕ್ಕೆ ರಾಷ್ಟ್ರದಲ್ಲೆದ್ದ ತೆರೆಗಳು ನನ್ನನ್ನು ಪೂರಾ ಕೊಚ್ಚಿ ಕೊಂಡು ಹೋದವೆಂದೇ ಅನ್ನಬೇಕು ಕರ್ನಾಟಕದಲ್ಲಿ ಆ ತೆರೆಗಳನ್ನು ನಾನು ಚಿಮ್ಮಲಿಕ್ಕೆ ಪ್ರಯತ್ನಿಸಿದೆನು. ಹೀಗೆ ಈ ತೆರೆಗಳನ್ನು ಚಿಮ್ಮುತ್ತಿರುವಾಗಲೇ, ನನ್ನ ಮನದಲ್ಲಿ ಕರ್ನಾಟಕತ್ವದ ವಿಚಾರಗಳು ಪ್ರಬಲವಾಗುತ್ತ ನಡೆದವು; ಮತ್ತು, ನನ್ನ ಚಟುವಟಿಕೆಗಳಿಗೆ ಕರ್ನಾಟಕತ್ವದ ಸ್ವರೂಪವು ಉಂಟಾಯಿತು. ನಿಜವಾಗಿ, ನನಗೆ ರಾಷ್ಟ್ರೀಯತ್ವಕ್ಕೂ ಕರ್ನಾಟ

ಕತ್ವಕ್ಕೂ ವಿಶೇಷ ಭೇದ ತೋರುವುದಿಲ್ಲ ಇಡೀ ರಾಷ್ಟ್ರಕ್ಕೆ ಸಾಮಾನ್ಯವಾಗಿರುವ ಚಳವಳಿಗಳನ್ನು ಕರ್ನಾಟಕ್ಕೆ ಅನ್ವಯಿಸಿ ಕೊಂಡು ಕೆಲಸಮಾಡಿವ ನನ್ನ ಜೀವನಕ್ಕೆ ರಾಷ್ಟ್ರೀಯತ್ವ ಪ್ರಧಾನ ಜೀವನವೆಂದೂ, ಕೇವಲ ಕರ್ನಾಟಕಕ್ಕೆ ವಿಶೇಷವಾಗಿ ಸಂಬಂಧಿಸಿ, ರಾಷ್ಟ್ರೀಯತ್ವಕ್ಕೆ ಪರಿಪೋಷಕವಾಗುವ ಜೀವ ನಕ್ಕೆ ಕರ್ನಾಟಕತ್ವ ಪ್ರಧಾನ ಜೀವನವೆಂದೂ ಕರೆಯುತ್ತೇನೆ ವಸ್ತುತಃ ಅವು ಒಂದರಲ್ಲೊಂದು ಹಾಸುಹೊಕ್ಕಾಗಿ ಹೆಣೆದು ಕೊಂಡಿವೆ ಅವುಗಳೊಳಗಿನ ಒಳಭಾಗಗಳನ್ನು ಹೀಗೆ ತೋರಿಸಬಹುದು

**ರಾಷ್ಟ್ರೀಯತ್ವ** (ಪ್ರಾದೇಶಿಕ)

(೧) ರಾಜಕಾರಣ (೨) ಸ್ವದೇಶಿ+ ಬಹಿಷ್ಕಾರ (೩)ರಾಷ್ಟ್ರೀಯ ಶಿಕ್ಷಣ (೪) ಸ್ವರಾಜ್ಯ ಚಳವಳಿ ಅಥವಾ ಹೋಮ್‌ರೂಲ ಲೀಗ ಚಳವಳಿ (೫) ಅಸಹಕಾರ ಚಳವಳಿ (೬) ಕಾಯದೆ ಭಂಗ ಚಳವಳಿ (೭) ಇತರ ಚಳವಳಿಗಳು

**ಕರ್ನಾಟಕತ್ವ** (ಸಾಂಸ್ಕೃತಿಕ ರಾಷ್ಟ್ರೀಯತ್ವ)

(೧) ವಾಙ್ಮಯ (೨) ಇತಿಹಾಸ (೩) ಕರ್ನಾಟಕ ರಾಜಕೀಯ ಏಕೀಕರಣ (೪) ಅಖಿಲಕರ್ನಾಟಕ ವಿಶ್ವವಿದ್ಯಾಲಯ (೫) ಕಿರುಕುಳ ಚಳವಳಿಗಳು.

ನನ್ನ ಜೀವನದ ವೈಶಿಷ್ಟ್ಯವೆಂದರೆ—ನಾನು ಮೇಲ್ಕಾಣಿ ಸಿದ ಯಾವತ್ತು ಚಟುವಟಿಕೆಗಳಲ್ಲಿ ಹೆಚ್ಚುಕಡಿಮೆ ಮಾನ ದಿಂದ ಪಾತ್ರವಹಿಸಿದ್ದು. ನಾನು ನನ್ನ ಅಭಿಪ್ರಾಯದಂತೆ, ದಿನದಿನಕ್ಕೆ ಹೆಚ್ಚುಹೆಚ್ಚಿಗೆ ಮಹತ್ವವಾಗಿರುವ ವಿಷಯಗಳ ಕಡೆಗೆ ಸಾಗಿದ್ದೇನೆ. ಮುಂದೆ ಮುಂದೆ ಅಥವಾ ಮೇಲಮೇಲಕ್ಕೆ ಹೋಗುವುದು ನನ್ನ ರೀತಿ ಈ ತರಹದ ಪದ್ಧತಿಗೆ ಸರ್

ಜೇಮ್ಸ್ ಜೀನ್ಸನೆಂಬವನ ಮಾತಿನಲ್ಲಿಹೇಳುವುದಾದಲ್ಲಿ ಗುಣೋತ್ಕರ್ಷ ಪದ್ಧತಿ (Excelsior) ಎಂದು ಹೇಳಬಹುದು. ಅದನ್ನು ಮುಂದೆ ವಿವರಿಸುವೆನು. ಇಲ್ಲಿ ಹೇಳುವುದೇನಂದರೆ ನಾನು ರಾಷ್ಟ್ರೀಯತ್ವದ ಚಳವಳಿಗಳನ್ನು ಬರುಬರುತ್ತ ಕಡಿಮೆಮಾಡುತ್ತ ಹೋಗಿ ಕೇವಲ ಕರ್ನಾಟಕತ್ವದ ಚಳವಳಿಗಳಿಗೆ ಬಂದೆನು ಮುಂದೆ, ಕರ್ನಾಟಕತ್ವದ ಚಳವಳಿಗಳಿಗೂ ಗೌಣಸ್ಥಾನವನ್ನು ಕೊಟ್ಟು, ಈಗ ಧಾರ್ಮಿಕ ಜೀವನಕ್ಕೆ ಅಥವಾ ಏಕಾಂತಿಕ ಜೀವನಕ್ಕೆ ಪ್ರಾಧಾನ್ಯವನ್ನು ಕೊಡುತ್ತಿರುವೆನು. ಇದು ನನ್ನ ಮುಂದಿನ ರಾಜಕೀಯ ಜೀವನದ ಮುನ್ನೋಟ



೨ನೆಯ ಪ್ರಕರಣ

# ನನ್ನ ಸಾರ್ವಜನಿಕ ಜೀವನದ ರಹಸ್ಯ

ನನ್ನ ಸಾರ್ವಜನಿಕ ಜೀವನವು ಅನೇಕರಿಗೆ ವಿಕ್ಷಿಪ್ತವಾಗಿ ತೋರುತ್ತಿರುವುದು ಅದು ಸ್ವಾಭಾವಿಕವು ಏಕೆಂದರೆ, ನಾಲ್ಕು ಜನರ ಸಾರ್ವಜನಿಕ ಜೀವನದಂತೆ ನನ್ನ ಜೀವನ ವಿಲ್ಲದಿರುವುದೇ ಅದಕ್ಕೆ ಮುಖ್ಯ ಕಾರಣ. ನಾನು ನನ್ನ ಸಾರ್ವಜನಿಕ ಕಾರ್ಯದಲ್ಲಿ ಕೆಲವು ವಿಶೇಷ ತತ್ವಗಳನ್ನು ಇಟ್ಟುಕೊಂಡಿರುವೆನು. ಆ ತತ್ವಗಳು ಎಷ್ಟರಮಟ್ಟಿಗೆ ಸರಿಯಾದವು ಎಂಬುದನ್ನು ಹೇಳುವುದು ನನ್ನ ಕೆಲಸವಲ್ಲ ಅವುಗಳಲ್ಲಿ ನನಗೆ ಶ್ರದ್ಧೆಯಿದೆಯೆಂದು ಮಾತ್ರ ಹೇಳುತ್ತೇನೆ ಆ ತತ್ವಗಳ ಉಲ್ಲೇಖವನ್ನು ಪ್ರಸಂಗಬಂದಾಗ ಅಲ್ಲಲ್ಲಿ ಮಾಡಿರುವೆನು — ಮಾಡುವೆನು. ಇಲ್ಲಿ ನನ್ನ ಸಾರ್ವಜನಿಕ ಜೀವನದ ಸಾಮಾನ್ಯ ರಹಸ್ಯವನ್ನು ಮಾತ್ರ ಹೇಳುವೆನು.

ವಾಚಕರು ನೆನಪಿನಲ್ಲಿಡತಕ್ಕ ಮೊದಲನೆಯ ಮಾತೇನೆಂದರೆ, ನಾನು ಮುಂದೆ ಹೇಳುವ ಚಟುವಟಿಕೆಗಳನ್ನು 'ನಾನು' ಮಾಡಿದೆನೆಂದು ಹೇಳುವಾಗ, ನಾನೊಬ್ಬನೇ ಆ ಚಟುವಟಿಕೆಗಳನ್ನು ಮಾಡಿದೆನೆಂದು ಯಾರೂ ತಿಳಿಯಕೂಡದು. ಯಾವ ಚಟುವಟಿಕೆಗಾದರೂ ಮಿತ್ರರ ಬೆಂಬಲ ಬೇಕು; ಜನತೆಯ ಸಹಾನುಭೂತಿಯು ಬೇಕೇಬೇಕು. ಆದಕಾರಣ ನಾನು ಇಂಥ ಚಟುವಟಿಕೆಯನ್ನು ಮಾಡಿದೆನೆಂದು ಹೇಳುವುದರಲ್ಲಿ ನನ್ನ ಮುಖ್ಯ ಉದ್ದೇಶವು, ಆ ಚಟುವಟಿಕೆಯಲ್ಲಿ ನಾನು

ಪ್ರಾಮುಖ್ಯದಿಂದ ಭಾಗವಹಿಸಿದೆನು ಎಂದು ಅರ್ಥ. ಕೆಲವು ನನ್ನ ಸ್ವತಂತ್ರ ಕಲ್ಪನೆಯಿಂದ ಉದ್ಭವಿಸಿದವುಗಳು, ಕೆಲವು ಅನ್ಯರ ಪ್ರೇರಣೆಯಿಂದ ಕೈಕೊಂಡವುಗಳು

ನನ್ನ ಜೀವನದಮೇಲೆ ವಿಶೇಷವಾಗಿ ಪರಿಣಾಮಮಾಡಿದ ಮುಖ್ಯ ಮಹಾವಿಭೂತಿಗಳೆಂದರೆ ನಾಲ್ವರು (೧) ಶ್ರೀಮಧ್ವಾಚಾರ್ಯರು (೨) ಶ್ರೀವಿದ್ಯಾರಣ್ಯರು (೩) ಅರವಿಂದಘೋಷರು (೪) ಟಿಳಕರು ಏಕೋ ಏನೋ ಮ ಗಾಂಧಿಯವರ ಜೀವನದಲ್ಲಿಯ ಅನೇಕ ತತ್ವಗಳು ನನ್ನ ಮನವನ್ನು ಹಿಡಿಯಲಿಲ್ಲ, ಅವರ ತಪಶ್ಚರ್ಯವು ಮಾತ್ರ ನನ್ನ ಮನಸ್ಸನ್ನು ಬೆರಗುಮಾಡಿತು ಇರಲಿ ಇಲ್ಲಿ ಹೇಳತಕ್ಕದ್ದೇನೆಂದರೆ, ಮೇಲ್ಕಾಣಿಸಿದ ನಾಲ್ಕು ವಿಭೂತಿಗಳ ಮಹಾಪ್ರಸಾದದಿಂದ ಪುಷ್ಟಿಗೊಂಡ ಜೀವನವು ನನ್ನದು. ಆದರೆ ಆ ಮಹಾವ್ಯಕ್ತಿಗಳನ್ನೂ ನಾನು ಅಂಧವಾಗಿ ಅನುಕರಣಮಾಡಿಲ್ಲ ಶ್ರೀಮಧ್ವಾಚಾರ್ಯರ ತತ್ವಗಳು ನನ್ನ ಜೀವನದಮೇಲೆ ಎಲ್ಲಕ್ಕೂ ಹೆಚ್ಚಿನ ಪರಿಣಾಮವನ್ನುಂಟುಮಾಡಿವೆ ಅಥವಾ ನನ್ನ ಜೀವನವೆಂದರೆ ಅವರ ಕೆಲವು ತತ್ವಗಳನ್ನು ನನ್ನ ಜೀವನದಲ್ಲಿ ಪ್ರತ್ಯಕ್ಷವಾಗಿ ಅರಗಿಸಿಕೊಂಡದ್ದು. ನನಗೆ ಅವರ ಎಲ್ಲ ತತ್ವಗಳು ಇನ್ನೂ ಮನದಟ್ಟಾಗಿಲ್ಲ ಆ ಕೆಲವನ್ನು ಮಾತ್ರ, ಈಗ ಅಂಧಶ್ರದ್ಧೆಯಿಂದ ನಂಬುತ್ತಿರುವೆನು ಅವುಗಳ ಮರ್ಮವು ಚೆನ್ನಾಗಿ ತಿಳಿಯಬಹುದೆಂಬ ಆಶೆಯನ್ನಿಟ್ಟುಕೊಂಡಿರುವೆನು ಮನದಟ್ಟಾಗಿರುವ ಅಲ್ಪಸ್ವಲ್ಪ ತತ್ವಗಳನ್ನು ನಾನು ನನ್ನ ಜೀವನಕ್ಕೆ ಅನ್ವಯಿಸಿಕೊಂಡಿರುವೆನು. ಅದೇ ಮೇರೆಗೆ ಮಿಕ್ಕ ವಿಭೂತಿಗಳ ವಿಚಾರ. ನನ್ನ ಸ್ವತಂತ್ರ ವಿಚಾರಕ್ಕೆ ಒಗ್ಗದ ವಿಚಾರಗಳನ್ನು ನಾನು ಸ್ವೀಕರಿಸಿರುವುದಿಲ್ಲ ಇತ್ತೀಚಿಗೆ ನನಗೆ

ಗೊತ್ತಾಗಿರುವುದೇನೆಂದರೆ ಶ್ರೀಮಧ್ವಾಚಾರ್ಯರ ವಿಚಾರ ಗಳಿಗೂ ಮಿಕ್ಕ ಆಚಾರ್ಯರೇ ಮುಂತಾದವರ ವಿಚಾರ ಗಳಿಗೂ ಬಲುಮಟ್ಟಿಗೆ ಸಾಮ್ಯವಿದೆ ಸನಾತನ ಸಂಸ್ಕೃತಿಯ ದೃಷ್ಟಿಯಿಂದ ಅವರೆಲ್ಲರೂ ಒಂದೇ ಮೇಲ್ಕಾಣಿಸಿದ ವಿಭೂತಿಗಳ ಯಾವ ಯಾವ ತತ್ವಗಳನ್ನು ನಾನು ಎತ್ತಿಕೊಂಡಿದ್ದೇನೆಂಬುದನ್ನು ನಾನು ಬಹುಶಃ ಪ್ರತ್ಯೇಕವಾಗಿ ಹೇಳ ಹೋಗುವುದಿಲ್ಲ ಇಡೀ ಜೀವನವೇ ಅವರ ತತ್ವಗಳಿಂದ ನಿರ್ಮಿತವಾದದ್ದು ಎಂದು ಹೇಳಿಬಿಟ್ಟರೆ ಸಾಕು ವಾಚಕರು ಅದನ್ನು ತಾವೇ ಕಂಡುಹಿಡಿದುಕೊಳ್ಳಲಿ ಮೇಲ್ಕಾಣಿಸಿದ ವ್ಯಕ್ತಿಗಳಲ್ಲದೆ ಸ್ಪೆನ್ಸರ, ಮ್ಯಾಝಿನಿ ಮುಂತಾದ ಮಹನೀಯರ ಹಲಕೆಲವು ತತ್ವಗಳೂ ನನ್ನ ಜೀವನವನ್ನು ಮಾರ್ಪಡಿಸಿವೆ ಅವನ್ನು ಅಲ್ಲಲ್ಲಿ ಉಲ್ಲೇಖಿಸಿರುವೆನು ನನ್ನ ರಾಜಕೀಯ ಜೀವನವನ್ನು ಮಾರ್ಪಡಿಸಿದ ಮುಖ್ಯ ಗ್ರಂಥಗಳೆಂದರೆ ಗೀತೆ, ಮತ್ತು ಮಹಾಭಾರತ ಮಹಾಭಾರತವು ನನ್ನ ರಾಜಕೀಯ ವಿಚಾರಗಳಿಗೆ ಮತ್ತು ಅನೇಕ ವಿಚಾರಗಳಿಗೆ ಪ್ರಮಾಣ ಗ್ರಂಥವಾಗಿದೆ ನನಗೆ ಮಹಾಭಾರತಕ್ಕಿಂತ ಹೆಚ್ಚಿನ ರಾಜಕಾರಣಗ್ರಂಥವೇ ಕಾಣುವುದಿಲ್ಲ ಅದರಲ್ಲಿ ಹಿಂದುಸ್ಥಾನದ ಇಂದಿನ ಮತ್ತು ಮುಂದಿನ ರಾಜಕಾರಣವನ್ನು ನಾವು ಕಾಣಬಹುದೆಂದು ನನ್ನ ವಿಶ್ವಾಸ.

ನನ್ನ ಮುಖ್ಯ ಧ್ಯೇಯವು ಆತ್ಮಜೀವನದ ಪರಮಾವಧಿ ಪಾವಿತ್ರ್ಯ ಅಥವಾ ಆತ್ಮದ ಪರಮಾವಧಿ ವಿಕಾಸ. ಈ ಮುಖ್ಯ ಧ್ಯೇಯವನ್ನು ಕೇಂದ್ರವಾಗಿಟ್ಟುಕೊಂಡೇ ನಾನು ನನ್ನ ಯಾವತ್ತು ಚಟುವಟಿಕೆಗಗಳನ್ನು ನಡಿಸಿರುವೆನೆಂಬುದು ಸೂಕ್ಷ್ಮವಾಗಿ ಅವಲೋಕಿಸುವವರಿಗೆ ಸಹಜವಾಗಿ ಕಂಡುಬರುವುದು.

ನಾನು ಮೂಲತಃ ರಾಜಕಾರಣಪುರುಷನೂ ಅಲ್ಲ; ಸಾಹಿತಿಯೂ ಅಲ್ಲ; ಇತಿಹಾಸಜ್ಞನೂ ಅಲ್ಲ; ರಾಷ್ಟ್ರೀಯನೂ ಅಲ್ಲ, ಕರ್ನಾಟಕಿಯೂ ಅಲ್ಲ; ಧಾರ್ಮಿಕಪುರುಷನು ಕೂಡ ಅಲ್ಲ. ಅವೆಲ್ಲ ಚಟುವಟಿಕೆಗಳನ್ನು ನಾನು ಕೈಕೊಂಡಿದ್ದರೆ, ಅವು ನನ್ನ ಆತ್ಮವಿಕಾಸಕ್ಕೆ ಸಹಾಯಕವೆಂದು, ಮತ್ತು ಸಹಾಯಕವಾಗುವ ಮಟ್ಟಿಗೆ ಮಾತ್ರ. ಅವು ಎಂದು ಅಡ್ಡಬರುವವೋ ಅಂದು ಅವನ್ನು ಬೀಸಾಡಿರುವೆನು; ಬೀಸಾಡುವೆನು. ಆದಕಾರಣ, ಆಧ್ಯಾತ್ಮವು ನನ್ನ ಜೀವನದ ಮಲಸೂತ್ರ (ಮೂಲಸೂತ್ರ)ವು. ಅದು ನನ್ನ ಯಾವತ್ತು ಚಟುವಟಿಕೆಗಳಲ್ಲಿ ಅಂತರ್ಯಾಮಿಯಾಗಿದೆ. ನನ್ನ ಯಾವತ್ತು ಆಧಿಭೌತಿಕ, ಆಧಿದೈವಿಕ ಚಟುವಟಿಕೆಗಳಿಗೆ ಅಧ್ಯಾತ್ಮಜೀವನವು ಆಧಾರವು. ಈ ಮೂರೂ ತರಹದ ಜೀವನಗಳಿಂದ ಕೂಡಿದ ಜೀವನವೇ ಪೂರ್ಣ ಜೀವನವೆಂದು ನನ್ನ ಮತ. ಆದಕಾರಣವೇ, ಕೇವಲ ವೇದಾಂತದ ಗುಡ್ಡದಂಥ ತತ್ವಗಳನ್ನು ಹೇಳಿ, ಜೀವನವನ್ನು ಬೇರೆ ರೀತಿಯಾಗಿ ನಡೆಯಿಸುವವರ ಬಗ್ಗೆ ನನಗೆ ತಿರಸ್ಕಾರವಿದೆ. ಜೀವನವು ತತ್ವಗಳ ಪ್ರಯೋಗಶಾಲೆಯು; ಪರೀಕ್ಷೆಯ ಮಂದಿರವು. ವೇದಾಂತತತ್ವಗಳ ಸತ್ಯತೆಯು ಜೀನನದ ಒರೆಗಲ್ಲಿಗೆ ಹಚ್ಚಿ ನೋಡಿದಾಗ ನಿಚ್ಚಳವಾಗಿ ಗೊತ್ತಾಗುತ್ತದೆ. ಅಲ್ಲಿಯವರೆಗೆ ಇಲ್ಲ. ಧಾತುಗಳ ಕಣಿಗಳಲ್ಲಿ ಬೆಳ್ಳಿ, ಬಂಗಾರ, ವಜ್ರ ಮುಂತಾದವುಗಳ ಕಣಗಳು ಇದ್ದರೇನಾಯಿತು ? ಅವುಗಳ ಉಪಯೋಗವಾಗಬೇಕಾದರೆ, ಜಗತ್ತಿನಲ್ಲಿಯೇ ಅಲ್ಲವೆ ? ಹಾಗೆಯೇ ತತ್ವಗಳ ವಿಚಾರ. ಜೀವನದಿಂದ ಬೇರ್ಪಡಿಸಿದ ತತ್ವಗಳು ತತ್ವಗಳಲ್ಲ; ತತ್ವಗಳಿಂದ ಬೇರ್ಪಡಿಸಿದ ಜೀವನವು ಜೀವನವಲ್ಲ. ವೇದಾಂತದ ಉದಾತ್ತವಾದ ತತ್ವಗಳನ್ನು ವ್ಯಷ್ಟಿ ಮತ್ತು ಸಮಷ್ಟಿ

ಜೀವನದ ವಿವಿಧ ಅಂಗಗಳಿಗೆ ಅನ್ವಯಿಸಿ ನೋಡುವುದೊಂದು ಚಟವೇ ನನಗೆ ಬಿದ್ದಿದೆ. ಇದನ್ನು ಮುಂದೆ ವಾಚಕರು ನನ್ನ ರಾಜಕಾರಣ, ವಾಙ್ಮಯ, ಇತಿಹಾಸ ಮುಂತಾದ ಪ್ರತಿಯೊಂದು ವಿಷಯದಲ್ಲೂ ಕಾಣಬಹುದು.

ಅದೇ ಮೇರೆಗೆ, ಕರ್ಮ, ಜ್ಞಾನ ಮತ್ತು ಭಕ್ತಿ ಇವು ಮೂರುಗಳ ಮಿಶ್ರಣವೇ ನನ್ನ ಯೋಗವು ಭಕ್ತಿಯು ಯಂತ್ರಕ್ಕೆ ಉಗಿಯಿದ್ದಂತೆ ಅದು ಮನುಷ್ಯನಲ್ಲಿ ಅಧ್ಯಾತ್ಮ ಶಕ್ತಿಯನ್ನು ಹುಟ್ಟಿಸುತ್ತದೆ ಆ ಶಕ್ತಿಯು ಸರ್ವಾವಯವಗಳಲ್ಲಿ ಪ್ರಾಣಸಂಚಲನವನ್ನು ಮಾಡಿಸುತ್ತದೆ. ಅದೇ ಆಧಿದೈವಿಕ ಶಕ್ತಿಯು. ಆಗ, ಸರ್ವ ಸಣ್ಣಪುಟ್ಟ ಚಕ್ರಗಳೂ ಸರಸರನೆ ಚಲಿಸಹತ್ತುತ್ತವೆ ಅದೇ ಆಧಿಭೌತಿಕ ಶಕ್ತಿಯು. ಅಂಥ ಆಧಿಭೌತಿಕ ಶಕ್ತಿಗೆ ಕರ್ಮಯೋಗವೆನ್ನುವರು. ಕೇವಲ ಕರ್ಮವೀರತ್ವವು ಕರ್ಮಯೋಗವಲ್ಲ. ಹೀಗೆ ಭಕ್ತಿಬಲದಿಂದ, ಜ್ಞಾನಶಕ್ತಿಯಿಂದ ಉತ್ಪನ್ನವಾದ ಕರ್ಮವೇ ಕರ್ಮಯೋಗವು. ಭಕ್ತಿಯ ಹತ್ತುಪಟ್ಟು ಜ್ಞಾನ, ಜ್ಞಾನದ ಹತ್ತುಪಟ್ಟು ಕರ್ಮ ಹೀಗೆ ಅದರ ಸ್ಥೂಲಪ್ರಮಾಣವಿದೆ ಆಪಕಾರಣ, ನನ್ನ ಸಾರ್ವಜನಿಕ ಜೀವನದಲ್ಲಿ ಬಾಹ್ಯ ಆಚರಣೆಗೆ ನಾನು ಮೊದಲಿನಿಂವಲೂ ಗೌಣಸ್ಥಾನವನ್ನು ಕೊಡುತ್ತ ಬಂದಿರುವೆನು. ಅಂದರೆ, ನಾನು ಕರ್ತೃತ್ವಶಕ್ತಿಗೆ ಹೆಚ್ಚು ಪ್ರಾಧಾನ್ಯವನ್ನು ಕೊಟ್ಟಿಲ್ಲ. ವಿಚಾರಶಕ್ತಿಗೆ ಅದಕ್ಕಿಂತಲೂ ಹೆಚ್ಚಿಗೆ ಪ್ರಾಧಾನ್ಯವನ್ನು ಕೊಟ್ಟಿರುವೆನು. ಅದಕ್ಕಿಂತಲೂ ಹೆಚ್ಚಿಗೆ ಧ್ಯಾನಕ್ಕೆ ಪ್ರಾಧಾನ್ಯವನ್ನು ಕೊಟ್ಟಿರುವೆನು. ಸಾರಾಂಶ, ನಾನು ಮುಖ್ಯತಃ ಹರಿದಾಸನು; ಅದರ ತರುವಾಯ ಮುಖ್ಯಪ್ರಾಣನ ಉಪಾಸಕನು. ಆ ನನ್ನ ಮುಖ್ಯಪ್ರಾಣನು ರಾಜ

ಕಾರಣ, ವಾಙ್ಮಯ, ಇತಿಹಾಸ, ಕರ್ನಾಟಕತ್ವ ಮತ್ತು ಧರ್ಮ ಇವೈದು ರೂಪಗಳನ್ನು ಧಾರಣಮಾಡಿ ಪಂಚಮುಖಿ ಪ್ರಾಣೇಶ ನಾಗಿ ನನ್ನಿಂದ ಕಾರ್ಯಮಾಡಿಸಿರುತ್ತಾನೆ ಆದಕಾರಣ, ನನ್ನ ಯೋಗಕ್ಕೆ **ಸಾಧನಸಮುಚ್ಚಯ ಯೋಗ**ವೆನ್ನಬಹುದು.

ಇನ್ನು ನಾನು ಕಾರ್ಯಮಾಡುವ ಪದ್ಧತಿಯನ್ನು ತುಸು ಹೇಳಿ ಈ ಪ್ರಕರಣವನ್ನು ಮುಗಿಸುವೆನು ಮೇಲ್ಕಾಣಿಸಿದಂತೆ ನನ್ನ ತತ್ವಗಳಿರುವುದರಿಂದ, ನಾನು ಯಾವುದೊಂದು ಚಳವಳಿಗೆ ಪೂರ್ಣವಾಗಿ ಅಂಟಿಕೊಂಡಿರುವುದಿಲ್ಲ; ಪ್ರೇರಕಶಕ್ತಿಯನ್ನು ಮಾತ್ರ ಕೊಟ್ಟು ಹಿಂದಕ್ಕೆ ಸರಿದುನಿಂತು ಕೆಲಸಮಾಡುವುದು ನನ್ನ ಪದ್ಧತಿ ಇದರಿಂದ, ಆ ವಿಷಯದಲ್ಲಿ ಕಾರ್ಯಮಾಡುವ ಮಹತ್ವಾಕಾಂಕ್ಷೆಯುಳ್ಳವರಿಗೆ ಆಸ್ಪದವುಂಟಾಗುವುದು ಅಂದರೆ, ನಾನು ಯಾವಾಗಲೂ ಹಿಮ್ಮೇಳದಲ್ಲಿರುವವನು. ಮುಂದೆ ಬಂದು ಕುಣಿಯುವವನಲ್ಲ. ಯಾವ ಕಾಲಕ್ಕೆ ಯಾವ ವಿಷಯ ದಲ್ಲಿ ಬಿತ್ತುವ ಹದವು ಬರುತ್ತದೋ ಆ ವಿಷಯ ಕ್ಷೇತ್ರ ದಲ್ಲಿ ನನ್ನ ಬೀಜಗಳನ್ನು ಬಿತ್ತುವವನು. ಸಾರ್ವಜನಿಕ ಕಾರ್ಯಮಾಡುವಾಗ ಸ್ಪರ್ಧೆಗೆ ತಿಲಪ್ರಾಯವೂ ಅವಕಾಶ ವಿರಕೂಡದೆಂಬುದು ನನ್ನ ತತ್ವ. ಒಬ್ಬನು ಒಂದು ಕಾರ್ಯ ಮಾಡತೊಡಗಿದರೆ, ತಾನು ಮತ್ತೊಂದು ಕಾರ್ಯ ಮಾಡಿದರೆ ತೀರಿತು. ಇದರಿಂದ ಮತ್ಸರಾಸೂಯೆಗಳಿಗೂ ಎಡೆ ಉಳಿಯು ವುದಿಲ್ಲವೆಂದು ನನ್ನ ಮತ. ಹಾಗೆಯೇ, ಸಾರ್ವಜನಿಕ ಕಾರ್ಯ ಮಾಡುವವರು ಸಂಸ್ಥೆಯ ಮೋಹವನ್ನೂ ಬಿಟ್ಟುಕೊಡ ಬೇಕು. ವೇದಾಂತವು ಹೆಂಡಿರು ಮಕ್ಕಳ ಮೋಹವನ್ನಷ್ಟೇ ಬಿಡಲು ಹೇಳುವುದಿಲ್ಲ; ಎಲ್ಲ ತರಹದ ಮೋಹಗಳನ್ನು ಬಿಡ ಹೇಳುತ್ತದೆ. ಈ ವೇದಾಂತತತ್ವವನ್ನು ಸಾರ್ವಜನಿಕ

ಕಾರ್ಯಕ್ಕೂ ಹಚ್ಚಬೇಕು; ಅಂದರೆ ಸಾರ್ವಜನಿಕಕಾರ್ಯ ಮಾಡುವವನು ತಾನು ಕೊನೆಯವರೆಗೆ ಆ ಸಂಸ್ಥೆಯಲ್ಲಿದ್ದೇ ಕಾರ್ಯಮಾಡಬೇಕೆಂಬ ಅಭಿಮಾನವನ್ನೂ ಹಿಡಿಯ-ಬಾರದು. ಯಾವುದೊಂದು ಸಾರ್ವಜನಿಕ ಕಾರ್ಯವು "ಆಗಬೇಕು" ಎಂಬುದು ನನ್ನ ಮುಖ್ಯಧ್ಯೇಯ, ಅದನ್ನು ನಾನೇ "ಮಾಡ ಬೇಕು" ಎಂಬುದು ನನ್ನ ಮುಖ್ಯಧ್ಯೇಯವಲ್ಲ ನನ್ನ ಸಾರ್ವ ಜನಿಕ ಕಾರ್ಯಮಾಡುವ ಪದ್ಧತಿಯ ಮತ್ತೊಂದು ತತ್ವವೆಂ ದರೆ, ಕೃತ್ರಿಮ ಚಳವಳಿಯು ಏನೂ ಉಪಯೋಗದ್ದಲ್ಲ ವೆಂಬುದು. ನನ್ನ ಆಯುಷ್ಯದಲ್ಲಿಯೇ ಕೃತ್ರಿಮತೆಗೆ ಸ್ಥಾನ ವಿಲ್ಲ. ಕೃತ್ರಿಮ ಚಳವಳಿಯನ್ನು ಮಾಡುವುದೆಂದರೆ ಕಸಕು ಕಾಯಿಯನ್ನು ಒತ್ತಿ ಹಣ್ಣುಮಾಡಲಿಚ್ಛಿಸುವುದು ಆದಷ್ಟು ತೀವ್ರ ತಾನು ಯಾವುದೊಂದು ಚಳವಳಿಯ ಫಲಗಳನ್ನು ಕಾಣಬೇಕೆಂಬ ಅತಿರೇಕವಾದ ಆತುರತೆಯೇ ಇಂಥ ಕೃತ್ರಿಮ ತೆಗೆ ಕಾರಣವಾಗುತ್ತದೆ. ಇಂದು ಬಿತ್ತಿದ ಬೀಜಗಳ ಫಲ ವನ್ನು ಇಂದೇ ಅಪೇಕ್ಷಿಸದೆ, ಅದಕ್ಕೆ ಕಾಲಾವಧಿಯನ್ನು ಕೊಟ್ಟುಬಿಟ್ಟರೆ, ಅದರಿಂದ ಸ್ವಾಭಾವಿಕವಾದ ಫಲಗಳನ್ನು ಕಾಣಬಹುದು. ಸಣ್ಣಪುಟ್ಟ ಗಿಡಗಳ ಬೀಜಗಳಿಗೆ, ಬೇಗನೆ ಮೊಳಕೆಯೊಡೆದು ಗಿಡಗಳಾಗಿ ಹಲವು ವರ್ಷಗಳಲ್ಲಿಯೇ ಫಲ ದೊರೆಯಬಹುದು ಅಕ್ರೋಡದ ಬೀಜಗಳನ್ನು ಬಿತ್ತಿದರೆ ತನ್ನ ಜನ್ಮದಲ್ಲಿಯೇ ಫಲಗಳನ್ನು ಉಣ್ಣುವೆನೆಂಬ ಆಕಾಂಕ್ಷೆಯನ್ನೇ ಬಿಟ್ಟುಕೊಡಬೇಕಾಗುವುದು ಸಾರ್ವಜನಿಕ ಚಳವಳಿಗಳೆಂದರೆ ಆತ್ಮಪ್ರಕಟನೆಯ ಸಂಧಿಗಳೆಂದು ಅನೇ ಕರ ತಿಳುವಳಿಕೆ. ಇಷ್ಟೇ ಅಲ್ಲ, ಆತ್ಮಪ್ರಕಟನೆಯು ಈಗ ಒಂದು ಶಾಸ್ತ್ರವೇ ಆಗಿದೆ. ಆದರೆ, ಅದಕ್ಕೆ ನಾನು ವಿರೋಧ

ಕನು. ಈ ರೀತಿಯಾಗಿ, ನಾನು ಇಲ್ಲಿ ನನ್ನ ಕಾರ್ಯಮಾಡುವ ಪದ್ಧತಿಯನ್ನು ಕುರಿತು ಅತಿ ಸಂಕ್ಷೇಪವಾಗಿ ಹೇಳಿರುವೆನು. ಅವು ಕಾಣಲಿಕ್ಕೇನೋ ತೀರ ಸಾಮಾನ್ಯತತ್ವಗಳಾಗಿ ತೋರುತ್ತವೆ ಆದರೆ, ಅವನ್ನು ಆಚರಣೆಯಲ್ಲಿ ತರುವುದು ಎಷ್ಟು ಕಠಿನವಿದೆಯೆಂಬುದೂ ಅವು ಸಾಮಾನ್ಯವಾಗಿ ಅನ್ಯರು ಸ್ವೀಕರಿಸುವ ತತ್ವಗಳಿಗಿಂತ ಭಿನ್ನವಾಗಿವೆಯೆಂಬುದೂ ಆಯಾ ವಿಷಯಗಳನ್ನು ಕುರಿತು ಹೇಳುವಾಗ ಸ್ಪಷ್ಟವಾಗಬಹುದು. ಮೇಲ್ಕಾಣಿಸಿದ ತತ್ವಗಳಲ್ಲದೆ, ಇನ್ನೂ ಅನೇಕ ವಿಶಿಷ್ಟ ತತ್ವಗಳನ್ನು ವಾಚಕರು ನನ್ನ ಜೀವನದಲ್ಲಿ ಕಾಣಬಹುದು. ಅವನ್ನು ಇಲ್ಲಿಯೇ ಹೇಳಿ ವಾಚಕರನ್ನು ಬೇಸರಗೊಳಿಸದೆ, ಆಯಾ ಸಂದರ್ಭಗಳಲ್ಲಿಯೇ ಉಲ್ಲೇಖಿಸುವೆನು.



೩ನೆಯ ಪ್ರಕರಣ

# ನನ್ನ ರಾಜಕೀಯ ಜೀವನ (೧೯೦೫--೧೯೨೫)

ವಸ್ತುತಃ ನಾನು ರಾಜಕಾರಣದಲ್ಲಿ ಮೊದಲಿಗೆ ಸೇ(
ಬೇಕೆಂದು ಇಚ್ಛಿಸಿದವನಲ್ಲ.ಆದರೆ, ಆಗಿನ ಕಾಲದ ಮಹಿಮೆಯ
ಮೂಲಕ, ನನಗೆ ಒಮ್ಮೆಲೆ ರಾಜಕಾರಣದಲ್ಲಿಯೇ ಪ್ರಾಮುಖ್ಯ
ದಿಂದ ಬೀಳಬೇಕಾಯಿತು, ಬಿದ್ದೆನು. ೧೫-೨೦ ವರುಷ
ಅದನ್ನು ಭರದಿಂದ ನಡಿಸಿದೆನು. ಆದರೆ, ನನ್ನ ಪದ್ಧತಿ
ಯಂತೆ ಮಿಕ್ಕ ಅನೇಕ ಚಳವಳಿಗಳನ್ನೂ ನಡಿಸಿಯೇ ಇದ್ದೆನು.
ಮತ್ತು ನನ್ನ ಸಂಕಲ್ಪದಂತೆ ಮನೆಯಲ್ಲಿ ರಾಜಕಾರಣದ
ಅಭ್ಯಾಸವನ್ನೂ ಮಿಕ್ಕ ವಿಷಯಗಳ ಅಭ್ಯಾಸವನ್ನೂ ಸಾಗಿ
ಸಿಯೇ ಇದ್ದನು ಅದಲ್ಲದೆ, ಇವೆಲ್ಲಕ್ಕೂ ಆಧಾರಭೂತವಾದ
ಧಾರ್ಮಿಕ ಸಾಧನೆಯನ್ನು ಬಿಟ್ಟಿರಲಿಲ್ಲ; ಇರಲಿ.

ಕರ್ನಾಟಕದಲ್ಲಿಯ ರಾಜಕಾರಣದ ಇತಿಹಾಸದಲ್ಲಿಯ
ಯುಗಗಳನ್ನು ಕೆಳಗೆ ಬರೆದಂತೆ ವಿಂಗಡಿಸಬಹುದು.

೧೮೯೫ರ ಪೂರ್ವದಲ್ಲಿ—ಕತ್ತಲೆಯುಗ

೧೮೯೫-೧೯೦೫—ಅರುಣೋದಯಯುಗ

೧೯೦೫-೧೯೧೦—ಜಾಗ್ರತಿಯುಗ, ಸ್ವದೇಶಿಚಳವಳಿ

೧೯೧೦-೧೯೧೫—ಗುಪ್ತಯುಗ

೧೯೧೫-೧೯೨೦—ಸ್ವರಾಜ್ಯಚಳವಳಿ ಅಥವಾ ಹೋಮರೂಲ್
ಲೀಗದ ಯುಗ

೧೯೨೦-೧೯೨೫—ಅಸಹಕಾರಯುಗ

೧೯೨೫-೧೯೩೫—ಕಾಯದೆಭಂಗಯುಗ
೧೯೩೫-೧೯೪೦—ಕಾಂಗ್ರೆಸ್ಸ ಸರಕಾರಯುಗ

ನನ್ನ ಜೀವನದ ಸಂಬಂಧವು ಮೊದಲಿನೆಯ ಯುಗವೊಂದನ್ನು ಬಿಟ್ಟು (೧೮೯೫ರ ಪೂರ್ವದ ಯುಗ) ಮಿಕ್ಕೆಲ್ಲ ಯುಗಗಳೊಡನೆ ಬಂದಿರುತ್ತದೆ. ಅವುಗಳಲ್ಲಿ, ಅರುಣೋದಯ ಯುಗ (೧೮೯೫-೧೯೦೫)ದ ಕಾಲಕ್ಕೆ ನಾನು ವಿದ್ಯಾರ್ಥಿದಸೆಯಲ್ಲಿ ಇದ್ದುದರಿಂದ, ನಾನು ಆಗ ಗೌಣದಿಂದ ಕಾರ್ಯ ಮಾಡಿದೆ. ೧೯೦೫ ರಿಂದ ೧೯೨೫ರ ವರೆಗೆ ನಾನು ರಾಜಕಾರಣದಲ್ಲಿ ಪ್ರಾಮುಖ್ಯವಾಗಿ ಕೆಲಸಮಾಡಿರುವೆ. ಮ. ಗಾಂಧಿಯವರ ರಾಜಕೀಯ ತತ್ವಗಳೊಡನೆ ತಾದಾತ್ಮ್ಯಹೊಂದುವುದು ಶಕ್ಯವಾಗದ್ದರಿಂದ ಮತ್ತು ಮತ್ತೆ ಕೆಲವು ಕಾರಣಗಳ ಮೂಲಕ ನಾನು ಬರಬರುತ್ತ ರಾಜಕಾರಣದಿಂದ ಹಿಂದೆ ಸರಿದಿರುವೆನು. ಆದರೂ ೧೯೨೫ ರಿಂದ ೧೯೩೫ರ ವರೆಗೆ ರಾಜಕಾರಣದಲ್ಲಿದ್ದವರಿಗೆ ಸಹಾಯಮಾಡುತ್ತಿದ್ದೆನು. ನಾನು ೧೯೪೦ರಿಂದ ಏಕಾಂತಜೀವನವನ್ನು ಕೈಕೊಂಡದ್ದರಿಂದ, ಇತ್ತೀಚೆಗೆ ಪ್ರತ್ಯಕ್ಷವಾದ ರಾಜಕಾರಣದಿಂದ ಅಲಿಪ್ತನಾಗಿ ನಿಂತಿರುವೆನು. ಇದಾಯಿತು, ನನ್ನ ಇಡೀ ರಾಜಕೀಯ ಜೀವನದ ಸಂಕ್ಷಿಪ್ತ ಸಮಾಲೋಚನೆ.

**ಕರ್ನಾಟಕದ ರಾಜಕಾರಣದ ಪೂರ್ವೇತಿಹಾಸ**— ೧೮೯೫ರ ವರೆಗಿನ ರಾಜಕಾರಣದ ಸ್ಥಿತಿಯನ್ನು ಹೀಗೆ ಬಣ್ಣಿಸಬಹುದು. ರಾಜಕಾರಣದ ಉಗಮವಾವರೂ ನದಿಯ ಉಗಮದಂತೆ ಬಹುಶಃ ಅದೃಶ್ಯವೇ ಇರುತ್ತದೆ. ಮುಂಚೆ "ಕರ್ನಾಟಕ"ವೆಂಬುದಕ್ಕೆ ಬೇರೆ ಅಸ್ತಿತ್ವವೇ ಇರಲಿಲ್ಲ. ಮುಂಬಯಿ ಕರ್ನಾಟಕದಲ್ಲಿಯ ಬೆಳಗಾವಿ, ಧಾರವಾಡ, ವಿಜಾಪುರ

ಮತ್ತು ಕಾರವಾರ ಈ ನಾಲ್ಕು ಜಿಲ್ಹೆಗಳಲ್ಲಿ ಕೂಡ ಜ
ಸ್ಪರ ಬಳಕೆ ವಿಶೇಷವಿರಲಿಲ್ಲ ಅಂದಬಳಿಕ, ಬಳ್ಳಾ
ಮಂಗಳೂರು, ಕೊಡಗು ಮೈಸೂರು, ನಿಜಾಂ ಕರ್ನಾಟ
ಇವುಗಳ ಮಾತಂತೂ ದೂರೇ ಉಳಿಯಿತು ಕರ್ನಾಟಕ
ಉತ್ತರಭಾಗದ ವಿಶೇಷ ಸಂಬಂಧವೆಂದರೆ, ಸಹಜವಾಗಿ ಮಹ
ರಾಷ್ಟ್ರದೊಡನೆ ಇತ್ತು ಮುಂಬಯಿ ಪುಣೆಗಳು ಮುಂಬ
ಇಲಾಖೆಯ ರಾಜಧಾನಿಗಳು ಆದಕಾರಣ, ಅರ್ಥಾತ
ಅವೇ ರಾಜಕಾರಣದ ಕೇಂದ್ರಗಳಾದವು ನಮ್ಮ ಕರ್ನಾ
ಟಕದ ಜಿಲ್ಹೆಗಳಾದರೋ ಮುಂಬಯಿ ಇಲಾಖೆಯ ಒಂ
ಮೂಲೆಯಲ್ಲಿ. ಆದಕಾರಣ, ಈ ಜಿಲ್ಹೆಗಳ ರಾಜಕಾರಣ
ಮೊದಲಿಗೆ ಏನೂ ಇಲ್ಲದಿರುವುದು ಆಶ್ಚರ್ಯವಲ್ಲ ಈ ನಾಲ
ಜಿಲ್ಹೆಗಳಲ್ಲಿ ಬೆಳಗಾವಿಯ ಸಂಬಂಧವು ಮಹಾರಾಷ್ಟ್ರದೊಡ
ವಿಶೇಷ ಮಹಾರಾಷ್ಟ್ರದ ರಾಜಕಾರಣದ ಉಗಮವೆಂದ
ಮುಖ್ಯತಃ ಲೋಕಮಾನ್ಯ ಟಿಳಕರ ಕೇಸರಿ ಪತ್ರದಲ್ಲಿ
ಪತ್ರದ ಪ್ರಸಾರವು ಬೆಳಗಾವಿ ಜಿಲ್ಹೆಯಲ್ಲಿ ಹೆಚ್ಚಿಗೆ. ಆ
ಕಾರಣ, ಸ್ವಾಭಾವಿಕವಾಗಿಯೇ, ಬೆಳಗಾವಿಯು ರಾಜಕಾರ
ದಲ್ಲಿ ಆಗಲೂ ಮುಂದೆಯೇ ಇತ್ತು, ಈಗಲೂ ಮುಂದೆ ಇ
ಬೆಳಗಾವಿಯ ಪ್ರಮುಖರ ಸ್ನೇಹಸಂಬಂಧವೂ ಪುಣೆಯ
ರೊಡನೆ ಇದ್ದುದು ಅದರ ಬೆಳವಣಿಗೆಗೆ ಅನುಕೂಲವ
ಆಯಿತು. ಧಾರವಾಡ ಜಿಲ್ಹೆಯ ಸ್ಥಿತಿಯು ಭಿನ್ನವಾಗಿತ್ತು
ಧಾರವಾಡದಲ್ಲಿಯ ಮರಾಠಿಗರಾದ ಗುರುನಾಥ ರಾ
ಘಾಟಕರಂಥ ಅದ್ವಿತೀಯ ಸಾರ್ವಜನಿಕ ಕಾರ್ಯಕರ್ತ
ಕೂಡ ಆಗ ಪುಣೆಯ ರಾಜಕಾರಣದ ಸಂಬಂಧವು ಬರಲಿ
ಇಂಥ ಸ್ಥಿತಿಗೆ ಭಾಷಾಭೇದವೂ ಪುಷ್ಟಿಯನ್ನು ಕೊಟ್ಟಿತ

ಗುರುನಾಥರಾಯರು ಮೂಲತಃ ಮರಾಠಿಗರಾದರೂ ಕರ್ನಾಟಕದೊಡನೆ ತಾದಾತ್ಮ್ಯವನ್ನು ಹೊಂದಿದ ಮರಾಠಿಗರು, ಇಲ್ಲಿಯ ಕರ್ನಾಟಕ ವಿದ್ಯಾವರ್ಧಕ ಸಂಘಕ್ಕೆ ಮುಂದೆ ಅಧ್ಯಕ್ಷರಾದವರು ಸಂಸ್ಕೃತ ಪಾಠಶಾಲೆ ಮುಂತಾದ ಚಳವಳಿಗಳಲ್ಲಿ ಅಗ್ರಗಣ್ಯರು, ರಾಜಕಾರಣಪಟುಗಳು ಆದರೆ, ಅಂಥವರಿಗೂ ಕೂಡ ಪುಣೆಯವರೊಡನೆ ಏನೂ ಪರಿಚಯವಿರಲಿಲ್ಲ. ಹೀಗಿದ್ದರೂ ಕೇಸರೀ ಪತ್ರವು ಈ ಜಿಲ್ಹೆಯಲ್ಲಿಯೂ ಕೆಲಮಟ್ಟಿಗೆ ಕಾರ್ಯವನ್ನು ಮಾಡುತ್ತಲೇ ಇತ್ತು. ಪೇಶ್ವೆಕಾಲದಿಂದಲೂ ಈ ಜಿಲ್ಹೆಯ ಮುಖ್ಯ ಪಟ್ಟಣಗಳಲ್ಲಿ ಮರಾಠೀ ಬಲ್ಲವರ ಪ್ರಾಬಲ್ಯವಿತ್ತು. ಕನ್ನಡಿಗರಿಗೂ ಮರಾಠಿ ಕಲಿಯುವುದು ಶಿಷ್ಟಾಚಾರವಾಗಿತ್ತು ಕನ್ನಡಿಗರಿಗೆ ತಮ್ಮ ಪ್ರತ್ಯೇಕ ಅಸ್ತಿತ್ವದ ಅರಿವೇ ಇರಲಿಲ್ಲ ಆದಕಾರಣ, ಧಾರವಾಡ ಜಿಲ್ಹೆಯ ಆಗಿನ ರಾಜಕಾರಣವೆಂದರೆ ಮ್ಯುನಿಸಿಪಾಲಿಟಿ ಲೋಕಲ್ ಬೋರ್ಡುಗಳಲ್ಲಿ ಬಣಗಳನ್ನು ಕಟ್ಟಿಕೊಂಡು ಒಡೆದಾಡುವುದು ಆದರೂ, ಧಾರವಾಡ ಜಿಲ್ಲೆಯ ಒಂದು ವೈಶಿಷ್ಟ್ಯವೆಂದರೆ, ಇಲ್ಲಿ ಮೊದಲಿನಿಂದಲೂ ಸ್ಥಾನಿಕ ಸಂಸ್ಥೆಗಳ ಉದಯವಾದುದು; ಸ್ವತಂತ್ರ ಚಳವಳಿಗಳ ಪ್ರಾದುರ್ಭಾವವಾದುದು ಕರ್ನಾಟಕ ವಿದ್ಯಾವರ್ಧಕ ಸಂಘ, ವ್ಹಿಕ್ಟೋರಿಯಾ ಹಾಯಸ್ಕೂಲು, ಲಿಂಗಾಯತ ಎಜ್ಯುಕೇಶನ್ ಸೊಸಾಯಿಟಿ, ಸಂಸ್ಕೃತ ಪಾಠಶಾಲೆ, ಗೋರಕ್ಷಣ ಚಳವಳಿ ಇವೇ ಮುಂತಾದವುಗಳು ಈ ಪ್ರವೃತ್ತಿಯ ಫಲಗಳು. ಇರಲಿ, ಇದು ಧಾರವಾಡ ಜಿಲ್ಹೆಯ ಸ್ಥಿತಿಯಾಯಿತು.

ವಿಜಾಪುರ ಜಿಲ್ಹೆಯು ಧಾರವಾಡ ಜಿಲ್ಹೆಗಿಂತಲೂ ರಾಜಕಾರಣದಲ್ಲಿ ಹಿಂದಿನದು. ವಸ್ತುತಃ ಅದು ಪುಣೆಯ ಪಟ್ಟಣಕ್ಕೆ ಹೆಚ್ಚು ಸಮೀಪವಿರುವುದರಿಂದ, ಅಲ್ಲಿ ರಾಜಕಾರಣವು ತೀವ್ರ

ವಾಗಿ ಬೆಳೆಯಬೇಕಾಗಿತ್ತು. ಹಾಗೆ ಆಗಲಿಲ್ಲ. ಇದಕ್ಕೆ ಆ
ಜಿಲ್ಲೆಯು ಶಿಕ್ಷಣದಲ್ಲಿ ತೀರ ಹಿಂದುಳಿದದ್ದೇ ಕಾರಣವಾಗಿರ
ಬಹುದು. ಕಾರವಾರ ಜಿಲ್ಲೆಯು ಹೆಸರಿಗೆ ಮಾತ್ರ ಕರ್ನಾ
ಟಕದ ಭಾಗವಾಗಿತ್ತು. ಅದು ಮಿಕ್ಕ ಜಿಲ್ಲೆಗಳಿಂದ ದೂರವಾಗಿ,
ಅದರ ಬಹುಭಾಗವು ಘಟ್ಟದ ಕೆಳಗೆ ಸಿಡಿದುಬಿದ್ದಿರುವುದ
ರಿಂದ, ಅದಕ್ಕೂ ಮಿಕ್ಕ ಕರ್ನಾಟಕಕ್ಕೂ ವಿಶೇಷ ಸಂಬಂಧವೇ
ಬರುತ್ತಿರಲಿಲ್ಲ. ಆಗಂತೂ ಪ್ರವಾಸದ ಸೌಕರ್ಯಗಳು ತಿಲ
ಪ್ರಾಯವೂ ಇದ್ದಿಲ್ಲ. ಮೊನ್ನೆಮೊನ್ನಿನ ಚಳವಳಿಯ ವರೆಗೆ
ಅದು ಎಲ್ಲಕ್ಕೂ ಹಿಂದೆ ಬಿದ್ದ ಭಾಗವಾಗಿತ್ತು. ಹೀಗೆ ಎಲ್ಲಕ್ಕೂ
ಹಿಂದೆ ಉಳಿದ ಜಿಲ್ಲೆಯು ಕಾಯದೆ ಭಂಗದ ಕಾಲಕ್ಕೆ ಎಲ್ಲಕ್ಕೂ
ಮುಂದಿನ ಜಿಲ್ಲೆಯು ಹೇಗೆ ಆಯಿತೆಂಬುದು ರಾಜಕಾರಣದ
ಲ್ಲಿಯ ಒಂದು ದೊಡ್ಡ ಗೂಢವಾಗಿಯೇ ತೋರಬಹುದು.
ಆದರೆ, ಅದಕ್ಕೆ ನನಗೆ ತೋರುವ ಕಾರಣವೆಂದರೆ ಬಹಳ
ದಿವಸ ಪಡಬಿದ್ದ ಭೂಮಿಯನ್ನು ಹರಗಿ ಹಸನಮಾಡಿದ ವರ್ಷ
ದಲ್ಲಿ, ಅದರಲ್ಲಿ ಅತಿಶಯ ಬೆಳೆಯು ಹೇಗೆ ಬರುತ್ತದೆಯೋ
ಹಾಗೆ, ಅದನ್ನು ರಾಜಕಾರಣದ ರಂಟೆಯಿಂದ ಉತ್ತ
ಕೂಡಲೆ ಅಲ್ಲಿ ಅತಿಶಯ ಬೆಳೆಬಂದಂತೆ ತೋರುತ್ತದೆ.
ಇರಲಿ. ಈ ಪ್ರಕಾರವಾಗಿ ನಾನು ಇತ್ತಕಡೆಯ ನಾಲ್ಕು ಜಿಲ್ಲೆಗಳ
ಸಾಮಾನ್ಯ ಸ್ವರೂಪವನ್ನು ಹೇಳಿದೆನು. ಬಳ್ಳಾರಿ ಜಿಲ್ಲೆಯ
ಸ್ಥಿತಿಯು ಒಂದು ರೀತಿಯಿಂದ ಇದಕ್ಕೂ ಕೀಳು ಇತ್ತು. ಅದು
ರಾಜಧಾನಿಯ ಪಟ್ಟಣವಾದ ಮದ್ರಾಸಿನಿಂದ ಅತ್ಯಂತ ದೂರ
ದಲ್ಲಿದ್ದುದಲ್ಲದೆ, ಅದು ಒಂಟಿಯಾಗಿತ್ತು. ಮಂಗಳೂರು
ಜಿಲ್ಲೆಯು ಪಶ್ಚಿಮ ಕರಾವಳಿಯಲ್ಲಿ. ಆದಕಾರಣ, ಮದ್ರಾಸ
ಇಲಾಖೆಯ ಅಂಚಿನಲ್ಲಿರುವ ಈ ಬಳ್ಳಾರಿ ಜಿಲ್ಲೆಯಲ್ಲಿ, ಆಂಧ್ರರ

ಪ್ರಾಬಲ್ಯದ ಮೂಲಕ ಕನ್ನಡಿಗರ ಆಟವು ಏನೂ ಸಾಗದಾ
ಗಿತ್ತು; ಇನ್ನೂ ಸಾಗದಾಗಿದೆ. ಅಲ್ಲಿಯ ಕನ್ನಡ ಮುಖಂಡರು
ಸಹ, ತೆಲುಗಿನಲ್ಲಿ ನಾಟಕ ಕಂಪನಿಗಳನ್ನು ತರಿಸುವುದೇ
ಇದಕ್ಕೆ ಸಾಕ್ಷಿ. ಮಂಗಳೂರು ಜಿಲ್ಲೆಯು ಮಾತ್ರ, ಶಿಕ್ಷಣ
ದಲ್ಲಿ ಎಲ್ಲಕ್ಕೂ ಮುಂದುವರಿದ ಜಿಲ್ಲೆಯು. ಅಲ್ಲಿಯ ಮಿಶ
ನರಿಗಳು ಪ್ರಾರಂಭಮಾಡಿದ ಚಳವಳಿಗಳ ಮೂಲಕ, ಆ ಜಿಲ್ಲೆ
ಯಲ್ಲಿ ಸಾಮಾನ್ಯ ಜಾಗ್ರತಿ ಹೆಚ್ಚು. ಆದರೆ, ರಾಜಕಾರಣ
ದಲ್ಲಿ ಜಾಗ್ರತಿ ಕಡಿಮೆ. ಅಲ್ಲದೆ, ಉತ್ತರ ಕರ್ನಾಟಕಕ್ಕೆ
ಲೋಕಮಾನ್ಯ ಟಿಳಕರ ಮುಖಂಡತ್ವದ ಲಾಭ ದೊರೆತಂತೆ
ಅದಕ್ಕೆ ದೊರೆಯಲಿಲ್ಲ.

ಕೊಡಗಿನ ಸ್ಥಿತಿಯು ಎಲ್ಲಕ್ಕೂ ವಿಲಕ್ಷಣವಾದುದು. ವಸ್ತುತಃ
ಅಲ್ಲಿಯ ಕ್ಷಾತ್ರತೇಜವು ರಾಜಕಾರಣಕ್ಕೆ ಹೆಚ್ಚು ಬೇಗನೆ
ಪುಟವನ್ನು ಕೊಡಬೇಕಾಗಿತ್ತು. ಆದರೆ, ಹಾಗಾಗದಿರುವುದಕ್ಕೆ
ಅದಕ್ಕಿದ್ದ ಮಿಕ್ಕ ಅನೇಕ ಅನನುಕೂಲತೆಗಳೇ ಕಾರಣ.
ಅದು ಚಿಕ್ಕ ಪ್ರದೇಶವು. ಗುಡ್ಡಗಾಡಿನಲ್ಲಿರುವ ನಟ್ಟನಡು
ವಿನ ಪ್ರದೇಶವು. ಪ್ರವಾಸದ ಅನುಕೂಲತೆಗಳಿರಲಿಲ್ಲ. ಆಡಳಿ
ತದ ಸಂಬಂಧವೂ ಇರಲಿಲ್ಲ. ಕೊಡಗು ಭಾಷೆಯಿಂದ ಮಿಶ್ರ
ವಾದ ಕನ್ನಡ ಪ್ರದೇಶವು.

ಮೈಸೂರಿನ ರಾಜಕಾರಣವೇ ಬೇರೆ; ಮಿಕ್ಕ ಕರ್ನಾಟಕದ
ರಾಜಕಾರಣವೇ ಬೇರೆ. ಚಿಲ್ಲರೆ ಸಂಸ್ಥಾನಗಳಂತೂ ಬಹುಶಃ
ಮಹಾರಾಷ್ಟ್ರದ ಸಂಸ್ಥಾನಿಕರಿಗೆ ಅಧೀನವಾಗಿದ್ದುದರಿಂದಲೂ
ಅವು ಚಿಕ್ಕಚಿಕ್ಕವುಗಳಾದುದರಿಂದಲೂ, ಅವಕ್ಕೆ ರಾಜಕಾರಣವೇ
ಇರಲಿಲ್ಲ. ನಿಜಾಮಕರ್ನಾಟಕವು ದಕ್ಷಿಣ ಹಿಂದುಸ್ಥಾನದ
ನಡುವೆ ಒಂದು ದ್ವೀಪವಿದ್ದಂತೆ ಇದೆ. ಅದು ತೀರ ಹಿಂದು

ಳಿದ ಪ್ರದೇಶವು. ಮುಸಲ್ಮಾನರ ಸಂಸ್ಕೃತಿಯಿಂದ ಬದ್ಧವಾದ ಪ್ರದೇಶವು. ಆಧುನಿಕದಲ್ಲಿ ತೀರ ನಿಕೃಷ್ಟಾವಸ್ಥೆಯನ್ನು ಹೊಂದಿದ ಪ್ರದೇಶವು. ಆದಕಾರಣ ಅಲ್ಲಿಯು ಕನ್ನಡಿಗರಿಗೆ ರಾಜಕಾರಣವೆಂದರೇನೆಂಬುದೇ ಗೊತ್ತಿರಲಿಲ್ಲ.

ಹೀಗೆ ನಾನು ಇಡೀ ಕರ್ನಾಟಕದ ಆಗಿನ ರಾಜಕಾರಣದ ಸಾಮಾನ್ಯಸ್ವರೂಪವನ್ನು ತಿಳಿಸಿರುವೆನು. ಇದು ಯಿ. ತು, ೧೮೮೫ರ ವರೆಗಿನ ಸ್ಥಿತಿ. ಸಾರಾಂಶ, ಈ ಕತ್ತಲೆ ಯುಗದಲ್ಲಿ ಕರ್ನಾಟಕದಲ್ಲಿ ಯಾವ ತರಹದ ರಾಜಕೀಯ ಚಟುವಟಿಕೆಯೂ ಇದ್ದಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ಇದರ ಮುಂದಿನ ಯುಗವೆಂದರೆ, ೧೮೮೫-೧೯೦೫ರ ವರೆಗಿನ ಅರುಣೋದಯ ಯುಗವು. ಈ ಯುಗದಲ್ಲಿ ರಾಜಕಾರಣದ ಕಿರಣಗಳು ಅಲ್ಲಲ್ಲಿ ಕಾಣಹತ್ತಿದವು. ಆಗಿನ ಕಾಲದಲ್ಲಿ, ನನಗೆ ಪ್ರತ್ಯಕ್ಷವಾಗಿಯೂ ಅಪ್ರತ್ಯಕ್ಷವಾಗಿಯೂ ಸಂಬಂಧಿಸಿದ ರಾಜಕೀಯ ಚಟುವಟಿಕೆಗಳನ್ನು ಈ ನನ್ನ ಜೀವನಸ್ಮೃತಿ ಗ್ರಂಥದ ಮೊದಲನೆಯ ಭಾಗದಲ್ಲಿ ಕೊಟ್ಟೇ ಇರುವುದರಿಂದ, ಅವುಗಳ ಬಗ್ಗೆ ಪುನಃ ಹೆಚ್ಚಿಗೆ ಹೇಳುವ ಕಾರಣವಿಲ್ಲ.

ಇನ್ನು ಮುಂದಿನ ಯುಗವೆಂದರೆ ಪ್ರಥಮ ಜಾಗ್ರುತಿಯ ಯುಗ ಅಥವಾ ಸ್ವದೇಶಿ ಚಳವಳಿಯ ಯುಗ. ಈ ಯುಗದಿಂದಲೇ ನಿಜವಾಗಿ ಹಿಂದುಸ್ಥಾನದ ರಾಷ್ಟ್ರೀಯತ್ವಕ್ಕೆ ಪ್ರಾರಂಭ. ಹಾಗೆಯೇ ನನ್ನ ರಾಷ್ಟ್ರೀಯತ್ವಕ್ಕೂ ಪ್ರಾರಂಭ. ನಾನು ಇತ್ತೀಚೆಗೆ ರಾಜಕಾರಣದಿಂದ ದೂರ ಉಳಿಯುವ ಪ್ರಸಂಗ ಬಂದದ್ದರಿಂದ, ಅನೇಕರಿಗೆ ನನ್ನ ರಾಜಕಾರಣದ ಜೀವನವು ಗೊತ್ತಿರುವುದಿಲ್ಲ. ಆದಕಾರಣ, ನಾನು ಇಲ್ಲಿ ಆ ನನ್ನ ಜೀವನದ ಸಂಗತಿಗಳನ್ನು ವಿಸ್ತಾರವಾಗಿ ಕೊಡುವೆನು.

**ಸ್ವದೇಶಿ ಚಳವಳಿಯ ಯುಗ (೧೯೦೫-೧೦)**—೧೯೦೫ ರಿಂದ ೧೯೧೦ನೆಯ ಇಸ್ವಿಯ ವರೆಗಿನ ಕಾಲದಲ್ಲಿ ಹಿಂದು ಸ್ಥಾನದ ರಾಜಕಾರಣಕ್ಕೆ ಹೊಸದೊಂದು ರೂಪವು ಪ್ರಾಪ್ತ ವಾಯಿತು. ಈ ಕಾಲದಲ್ಲಿ ರಾಷ್ಟ್ರವು ಚಳವಳಿಗಳನ್ನು ಮಾಡಿದಷ್ಟು ಹಿಂದೆ ಎಂದೂ ಮಾಡಿರಲಿಲ್ಲ ಸ್ವತಂತ್ರ ಹಿಂದುಸ್ಥಾನವು ಪರತಂತ್ರವಾಗಿ ಪರದಾಸ್ಯಕ್ಕೆ ಒಳಗಾದಾಗ, ಆ ದಾಸ್ಯವಿಮೋಚನೆಗಾಗಿ ಶಸ್ತ್ರಾಸ್ತ್ರಗಳ ಸಹಾಯದಿಂದ ಮಾಡಿದ ಕೊನೆಯ ಪ್ರಯತ್ನವೆಂದರೆ ೧೮೫೭ನೆಯ ಇಸ್ವಿ ಯಲ್ಲಿ ಹೂಡಿದ ಸ್ವಾತಂತ್ರ್ಯಸಂಗ್ರಾಮವು ಆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ರಾಷ್ಟ್ರವು ಸೋತು, ಅದರ ಕೈಯೊಳಗಿನ ಕೈದುಗಳು ಬಲಾತ್ಕಾರದಿಂದ ಕಸಿದುಕೊಳ್ಳಲ್ಪಟ್ಟ ಬಳಿಕ, ಶಸ್ತ್ರಾಸ್ತ್ರಗಳಿಂದ ಸ್ವಾತಂತ್ರ್ಯವನ್ನು ದೊರಕಿಸಬೇಕೆಂಬ ಬುದ್ಧಿಯು ತಾನಾಗಿಯೇ ತಣ್ಣಗಾಗುತ್ತನಡೆಯಿತು. ಮತ್ತು ಆಗ ರಾಷ್ಟ್ರವು ಸ್ವಾಭಾವಿಕವಾಗಿಯೇ ಶಾಂತಿಯುದ್ಧದ ಕಡೆಗೆ ಹೊರಳಹತ್ತಿತು. ಸುಮಾರು ೫೫ ವರುಷಗಳ ಹಿಂದೆ ಆದ ರಾಷ್ಟ್ರೀಯ ಸಭೆಯ ಸ್ಥಾಪನೆಯ ದಿವಸವೇ ಈ ಶಾಂತಿ ಯುದ್ಧದ ಹುಟ್ಟಿದ ದಿನ. ಅಂದಿನಿಂದ ಇಂದಿನವರೆಗೆ ಅದರ ಅನೇಕ ಪ್ರಯೋಗಗಳು ನಡೆದೇ ಇವೆ. ಮೊದಲನೆಯ ಯುಗ ದಲ್ಲಿ, ಬ್ರಿಟಿಶ ಸರಕಾರದವರನ್ನು ಬೇಡಿಕೊಂಡರೆ ಹಕ್ಕುಗಳು ದೊರೆಯುಬಹುದೆಂಬ ಆಶೆ ಪ್ರಬಲವಾಗಿತ್ತು. ೧೯೦೫ನೆಯ ಇಸ್ವಿಯಲ್ಲಿ ಆ ಆಶೆಯು ಮಾಯವಾಯಿತು. ಆಗ, ದೇಶವು ಸ್ವಾವಲಂಬನದ ಮಾರ್ಗವನ್ನು ಅವಲಂಬಿಸಿತು ೧೯೦೫ ರಿಂದ ೧೦ನೆಯ ಇಸ್ವಿಯವರೆಗೆ ಈ ಸ್ವಾವಲಂಬನಮಾರ್ಗವು ಅತ್ಯಂತ ಉತ್ಕಟವಾಗಿ ಅವಲಂಬಿಸಲ್ಪಟ್ಟಿತು. ೧೯೦೫ನೆಯ

ಇಸ್ವಿಯಲ್ಲಿ, ಇಡೀ ಹಿಂದುಸ್ಥಾನದಲ್ಲಿಯ ರಾಜಕಾರಣವು ಏಕೀಕೃತವಾಗಿ ನಿಜವಾದ ರಾಷ್ಟ್ರೀಯತ್ವವು ಉದಯವಾಯಿತು.

ಸ್ವದೇಶಿ ಚಳವಳಿಯು ವಂಗಭಂಗದಿಂದ ಹೇಗೆ ಹುಟ್ಟಿತೆಂಬು ದನ್ನು ಹಿಂದೆ ಹೇಳಿರುವೆನಷ್ಟೆ. ಈ ಚಳವಳಿಯು ಹಾಹಾ ಎನ್ನುವುದರಲ್ಲಿ ಹಿಂದುಸ್ಥಾನದಲ್ಲೆಲ್ಲ ಹಬ್ಬಿತು (೧) ಸ್ವದೇಶಿ (೨) ಬಹಿಷ್ಕಾರ (೩) ರಾಷ್ಟ್ರೀಯ ಶಿಕ್ಷಣ (೪) ಮದ್ಯಪಾನ ನಿಷೇಧ ಇವೇ ಮುಂತಾದವುಗಳು ಇದರ ನಾನಾ ರೂಪ ಗಳು. ೧೯೦೫ನೆಯ ಇಸ್ವಿಯ ಆಗಸ್ಟ ತಿಂಗಳಿನಲ್ಲಿ ಬಂಗಾಲ ದಲ್ಲಿ ಪ್ರಾರಂಭವಾದ ಈ ಚಳವಳಿಯ ಮುದ್ರೆಯು, ಅದೇ ವರ್ಷ ಕೂಡಿದ ಕಾಂಗ್ರೆಸ್ಸಿನ ಮೇಲೆಯೂ ಬಿದ್ದಿತು. ೧೯೦೫ನೆಯ ಇಸ್ವಿಯ ಮೇ ತಿಂಗಳಿನಲ್ಲಿ ನಾ ಗೋಖಲೆ ಯವರು ಸ್ವದೇಶೀ ಉಡುಪನ್ನು ಧರಿಸಿ ಇಂಗ್ಲಂಡಕ್ಕೆ ಹೋಗಿ, ಅಲ್ಲಿ ಹಿಂದುಸ್ಥಾನದ ಸಂಬಂಧವಾಗಿ ಉತ್ಕೃಷ್ಟ ಕೆಲಸಮಾಡಿ ನವಂಬರದಲ್ಲಿ ತಿರುಗಿಬಂದಿದ್ದರು ಬನಾರಸ ದಲ್ಲಿ ಅವರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ಸು ಕೂಡಿತು ಆಗಿನ ಅವರ ಭಾಷಣವು ಉಗ್ರವಾಗಿತ್ತು. ಸ್ವದೇಶಿ-ಬಹಿಷ್ಕಾರದ ಗೊತ್ತುವಳಿಗಳು ಅಂಗೀಕೃತವಾದವು. ಪಂಡಿತ ಮದನ ಮೋಹನ ಮಾಲವೀಯರು ತಮ್ಮ ವಕೀಲಿವೃತ್ತಿಯನ್ನು ಬಿಟ್ಟುಕೊಟ್ಟು, ಹಿಂದೂ ವಿದ್ಯಾಪೀಠದ ಕಲ್ಪನೆಯನ್ನು ೩೧-೧೨-೧೯೦೫ನೆಯ ದಿವಸ ಜನರ ಮುಂದೆ ಇಟ್ಟರು. ಪ್ರೊ. ವಿಜಾಪುರಕರ ಮತ್ತು ಪ್ರೊ. ಭಾನು ಇವರು ರಾಷ್ಟ್ರೀಯ ಶಿಕ್ಷಣಕ್ಕಾಗಿ ತಮ್ಮ ಸರ್ವಸ್ವವನ್ನು ಅರ್ಪಿಸುವುದಕ್ಕೆ ಸಿದ್ಧ ರಾದರು. ಮುನಸಿ ಮಾಧವಲಾಲ ಎಂಬವರು ಹಿಂದೂ ವಿದ್ಯಾ

ಪೀರಕ್ಕೆ ೩ ಲಕ್ಷ ರೂಪಾಯಿ ಕೊಟ್ಟರು. ಅಲ್ಲಿಂದಲ್ಲಿ ೯ ಲಕ್ಷ ರೂಪಾಯಿಗಳು ಕೂಡಿದವು ಅತ್ತ ಇಂಗ್ಲಂಡದಲ್ಲಿ ಪಂಡಿತ ಶ್ಯಾಮಜಿ ಕೃಷ್ಣ ವರ್ಮಾ ಇವರು ೧೧/೨ ಲಕ್ಷ ರೂಪಾಯಿಗಳನ್ನು ಕೊಟ್ಟು ಹೋಮರೂಲ ಸೊಸಾಯಿಟಿ, ಇಂಡಿಯಾ ಹಾವುಸ ಮುಂತಾದವುಗಳನ್ನು ಅದೇ ವರ್ಷ (೧-೭-೧೯೦೫) ತೆಗೆದು ತರುಣರನ್ನು ಹುರಿದುಂಬಿಸಿದ್ದರು ಹೀಗೆ ೧೯೦೫ ನೆಯ ಇಸ್ವಿಯು ನಿಜವಾಗಿಯೋ, ಇಡೀ ಹಿಂದುಸ್ಥಾನದಲ್ಲಿ ರಾಷ್ಟ್ರೀಯತ್ವವು ಉದಯವಾದ ವರ್ಷವು ಆಗ ಹುಟ್ಟಿದ ಈ ರಾಷ್ಟ್ರೀಯತ್ವದ ಪ್ರವಾಹವು ಒಮ್ಮೆ ಮಂದವಾಗಿಯೂ ಒಮ್ಮೆ ರಭಸದಿಂದಲೂ ಒಮ್ಮೆ ಗುಪ್ತವಾಗಿಯೂ—ಆದರೂ ಎಂದೂ ಹರಿಗಡಿಯದೆ, ಒಂದೇ ಸಮನೆ ಸತತವಾಗಿ ಇಂದಿನ ವರೆಗೆ ಹರಿಯುತ್ತಲೇ ಬಂದಿರುವುದು, ಪುಷ್ಟಿಹೊಂದುತ್ತಲೇ ಇರುವುದು, ವಿಶಾಲವಾಗುತ್ತಲೇ ಹೋಗಿರುವುದು, ಆಳವಾಗುತ್ತಲೇ ನಡೆದಿರುವುದು ಸಂಕುಚಿತವಾದ ರಾಜಕೀಯ ಜೀವನಕ್ಕೆ ವಿಶಾಲವಾದ ರಾಷ್ಟ್ರೀಯತ್ವದ ಸ್ವರೂಪವು ಪ್ರಾಪ್ತವಾದ ಕಾಲವು ಇದು ೧೯೦೬ರಲ್ಲಿ ಕಾಂಗ್ರೆಸ್ಸಿನ ಚಳವಳಿಯು ಜೋರಾಗುವುದಕ್ಕೆ ಕೆಲವು ವಿಶೇಷ ಕಾರಣಗಳುಂಟಾದವು. ಬನಾರಸ ಕಾಂಗ್ರೆಸ್ಸಿನಲ್ಲಿ ಮಂದಪಕ್ಷ ಮತ್ತು ವೀರಪಕ್ಷ ಎಂಬ ಪಂಗಡಗಳು ಸ್ಪಷ್ಟವಾಗಿರಲಿಲ್ಲ. ಆದರೂ ತರುಣರ ಮನೋರಚನೆಯಲ್ಲಿಯೂ ಹಿರಿಯರ ಮನೋರಚನೆಯಲ್ಲಿಯೂ ಇರುವ ಭೇದವು ಅಲ್ಲಿಯೇ ಒಡಮೂಡಿತ್ತು. ಬಹಿಷ್ಕಾರವನ್ನು ಬಂಗಾಲದ ಮಟ್ಟಿಗೆ ಮಾತ್ರವೇ ಬನಾರಸ ಕಾಂಗ್ರೆಸ್ಸು ಅಂಗೀಕರಿಸಿತು. ಆದರೆ, ಒಮ್ಮೆ ಮನೋವೃತ್ತಿಯು ಬದಲಾದ ಬಳಿಕ ಅದಕ್ಕೆ ಒಡ್ಡು ಹಾಕುವುದೆಂತು? ಅಲ್ಪಾವಧಿಯಲ್ಲಿ ಬಹಿಷ್ಕಾರದ

ಬೇಗೆಯು ಹಿಂದುಸ್ಥಾನದಲ್ಲೆಲ್ಲ ಹಬ್ಬಿತು. ಬಾಬೂ ಬಿಪಿನ
ಚಂದ್ರಪಾಲ ಮತ್ತು ಖಾಪರ್ಡೆಯವರು ಇವರು ರಂಗವನ್ನು
ತೆಗೆದುಕೊಂಡು, ಆ ವರ್ಷದ ಕಾಂಗ್ರೆಸಿಗೆ ತರುಣರ ಗುರು
ದೇವತೆಯಾದ ಲೋಕ ಟಿಳಕರನ್ನು ಅಧ್ಯಕ್ಷರನ್ನಾಗಿ ಮಾಡ
ಬೇಕೆಂಬ ಚಳವಳಿಯನ್ನು ಹೂಡಿದರು. ಕೂಡಲೆ, ಆಗಿನ
ಕಾಂಗ್ರೆಸ್ಸಿನ ಸೂತ್ರಚಾಲಕರು ಗಾಬರಿಗೊಂಡರು. ಅವರಿಗೆ
ತರುಣರನ್ನು ಹಿಂದಕ್ಕೆ ಜಗ್ಗುವುದು ಬೇಕಾಗಿತ್ತು, ಆದರೆ
ಸಾಧ್ಯವಾಗಲಿಲ್ಲ. ಟಿಳಕರು ಕಾಂಗ್ರೆಸ್ಸಿನ ಅಧ್ಯಕ್ಷರಾಗುವ ಲಕ್ಷಣ
ತೋರಿದ ಕೂಡಲೆ, ಕಾಂಗ್ರೆಸ್ಸಿನ ಸೂತ್ರಚಾಲಕರು ದಾದಾ
ಭಾಯಿ ನವರೋಜಿಯವರನ್ನು ಅಧ್ಯಕ್ಷರನ್ನಾಗಿ ಸೂಚಿಸಿದರು.
ಆಗ ತರುಣರ ಬಾಯಿ ಕಟ್ಟಿತು. ನಿರ್ವಾಹವಿಲ್ಲದೆ, ಸುಮ್ಮನೆ
ಕುಳಿತುಕೊಳ್ಳಬೇಕಾಯಿತು. ಆದರೆ, ದೈವವಿಲಾಸವು ವಿಚಿತ್ರ!
೧೯೦೬ನೆಯ ಕಾಂಗ್ರೆಸ್ಸಿನಲ್ಲಿ ದಾದಾಭಾಯಿ ನವರೋಜಿಯ
ವರು "ಸ್ವರಾಜ್ಯ"ದ ಘೋಷಣೆ ಮೊಟ್ಟಮೊದಲನೆಯ ಸಲ
ಮಾಡಿದರು. ಆ ಕಾಂಗ್ರೆಸ್ಸಿನಲ್ಲಿ ಸ್ವದೇಶಿ, ರಾಷ್ಟ್ರೀಯ ಶಿಕ್ಷಣ,
ಬಹಿಷ್ಕಾರ ಮತ್ತು ಸ್ವರಾಜ್ಯ ಇವು ನಾಲ್ಕು ಮಂಜೂರಾ
ದವು. ೧೯೦೭ನೆಯ ಇಸ್ವಿಯ ಕಾಂಗ್ರೆಸ್ಸಿನ ಮುಖ್ಯ ಚಳವಳಿ
ಯೆಂದರೆ, ಮಂದಪಕ್ಷದವರು ವೀರಪಕ್ಷದವರನ್ನು ಹಿಮ್ಮೆಟ್ಟಿಸುವು
ದಕ್ಕೆ ಪ್ರಯತ್ನಮಾಡಿದ್ದು. ಅದರ ಪರ್ಯವಸಾನವು ಸೂರತ
ಕಾಂಗ್ರೆಸ್ಸು ಮುರಿದುಹೋಗುವುದರಲ್ಲಿ ಆಯಿತು. ೧೯೦೮ನೆಯ
ಇಸ್ವಿಯಲ್ಲಿ ದಬ್ಬಾಳಿಕೆ ಪ್ರಾರಂಭವಾಯಿತು. ಕಾಂಗ್ರೆಸ್ಸು
ಹೆಸರಿಗೆ ಮಾತ್ರ ಉಳಿಯಿತು. ಬಂಗಾಲದಲ್ಲಿ ಅತ್ಯಾಚಾರ
ಗಳಾದವು. ಟಿಳಕರನ್ನು ಮಂಡಾಲೆಗೆ ಅಟ್ಟಿದರು. ವೀರ
ಪಕ್ಷದವರು ಕಾಂಗ್ರೆಸ್ಸಿನಿಂದ ಅಲಿಪ್ತರಾಗಿ ಉಳಿದರು. ಆ

ಸ್ಥಿತಿಯು ಮುಂದೆ ೧೯೧೬ರ ವರೆಗೆ ಇತ್ತು. ಇದಾಯಿತು ಕಾಂಗ್ರೆಸ್ಸಿನ ಕಥೆ—ಕಾಂಗ್ರೆಸ್ಸಿನ ಹಣೆಯ ಬರೆಹ

ಆದರೆ, ಈ ಅವಧಿಯಲ್ಲಿ ಸ್ವದೇಶಿ ಚಳವಳಿಯು ಮಾತ್ರ ಜೋರಿನಿಂದಲೇ ನಡೆಯಿತು ವರ್ಷವರ್ಷಕ್ಕೆ ಅದರ ಉಕ್ಕು ಏರಹತ್ತಿತು. ೧೯೦೬ನೆಯ ಇಸ್ವಿಯ ಮೇ ತಿಂಗಳಲ್ಲಿ ಟಿಳಕರು ಮುಂಬಯಿ ಸ್ವದೇಶಿ ಸ್ಟೋರ್ಸ ಸ್ಥಾಪಿಸಿದರು. ಸ್ವದೇಶಿಯ ಮೇಲೆ ಲೇಖಗಳನ್ನು ಬರೆದೂ ಉಪನ್ಯಾಸಗಳನ್ನು ಕೊಟ್ಟೂ ದೇಶವನ್ನು ಗದಗಮಿಸಿಬಿಟ್ಟರು. ೨೨-೮-೧೯೦೬ನೆಯ ಇಸ್ವಿಯ ದಿವಸ ಪುಣೆಯಲ್ಲಿ ಪರದೇಶಿ ವಸ್ತ್ರದ ದೊಡ್ಡ ಹೋಳಿ ಆಯಿತು ಸಾವರಕರರು ಮೊದಲನೆಯ ಸಲ ಸಾರ್ವಜನಿಕವಾಗಿ ಮುಂದೆ ಬಂದದ್ದು ಆ ದಿವಸವೇ. ಬಂಗಾಲವಲ್ಲಿಯೂ ಮಿಕ್ಕ ಅನೇಕ ಕಡೆಗೂ ದೊಡ್ಡ ದೊಡ್ಡ ಗಿರಣಿಗಳು ಹೊರಟವು. ಹೊಸ ಉದ್ಯೋಗ ಧಂದೆಗಳು ಪ್ರಾರಂಭವಾದವು ಬಂಗಾಲದಲ್ಲಿ ರಾಷ್ಟ್ರೀಯ ಕಾಲೇಜು ಹಾಯಸ್ಕೂಲುಗಳು ಸ್ಥಾಪಿತವಾದವು. ಮಹಾರಾಷ್ಟ್ರದಲ್ಲಿ ಸಮರ್ಥ ವಿದ್ಯಾಲಯವು ಹೊರಟಿತು. ಬಡೋದೆಯಲ್ಲಿ ಗಂಗನಾಥ ಭಾರತೀಯ ವಿದ್ಯಾಲಯು ಸ್ಥಾಪಿತವಾಯಿತು. ಬಾಬೂ ಅರವಿಂದರು 'ವಂದೇ ಮಾತರಂ' ಎಂಬ ದೈನಿಕ ಪತ್ರಿಕೆಯ ಮುಖಾಂತರ ಹಿಂದುಸ್ಥಾನವನ್ನೆಲ್ಲ ಖಡಬಡಿಸಿಬಿಟ್ಟರು. ಸುರತ ಕಾಂಗ್ರೆಸ್ಸು ಮುರಿದ ಕೂಡಲೆ ದಬ್ಬಾಳಿಕೆಗೆ ಪ್ರಾರಂಭವಾಯಿತು. ಅದು ಹೆಚ್ಚಾದ ಕೂಡಲೆ ಅರಾಜಕ ಚಳವಳಿಯು ಹುಟ್ಟಿತು. ಯುರೋಪಿಯನ್ನರ ಕೊಲೆಗಳಾಗಹತ್ತಿದವು. ಬಾಂಬುಗಳು ಹುಟ್ಟಹತ್ತಿದವು. ಟಿಳಕರು ಮತ್ತು ಅರವಿಂದರು ಹಿಡಿಯಲ್ಪಟ್ಟರು. ಆಗ, ದೇಶದಲ್ಲೆಲ್ಲ ಹಾಹಾಕಾರವೆದ್ದಿತು. ದಬ್ಬಾಳಿಕೆಯ ಜೋರಿನಿಂದ, ಚಳ

ವಳಿಯು ತಣ್ಣಗಾಗಹತ್ತಿತು ಆಗ ಅದು ಗುಪ್ತಗಾಮಿನಿ ಯಾಯಿತು. ಕರ್ನಾಟಕದಲ್ಲಿ ಈ ಚಳವಳಿಯು ಮುಂಚೆ ಕುಗ್ಗಿತು, ಮುಂದೆ ಮುಗ್ಗಿತು.

**ಕರ್ನಾಟಕದ ಚಳವಳಿಗಳು** — ಈ ಅವಧಿಯಲ್ಲಿ ಇಲ್ಲಿ ಅನೇಕ ಚಟುವಟಿಕೆಗಳು ನಡೆದವು ಬೆಳಗಾವಿಯಲ್ಲಿ ಗ ಣೇ ಶ ವಿ ದ್ಯಾ ಲ ಯ ವೆಂ ಬ ರಾಷ್ಟ್ರೀಯ ಶಾಲೆಯನ್ನು ಗುಣಾಜಿ ಮತ್ತು ಕಾಲಿಲಕರರು ತೆಗೆದಿದ್ದರು ಅದರ ಶಿಕ್ಷಣ ಮುರಾರಿಯಲ್ಲಿ ಧಾರವಾಡದಲ್ಲಿ ನಾನು ಕರ್ನಾಟಕ ನೂತನ ವಿದ್ಯಾಲಯವೆಂಬ ರಾಷ್ಟ್ರೀಯ ಶಾಲೆಯನ್ನು ತೆಗೆದೆನು ಹುಬ್ಬಳ್ಳಿ, ನವಲಗುಂದ, ನರಗುಂದ, ಹಾನಗಲ್ಲ, ಅಗಡಿ, ಬಾಗಲಕೋಟೆ, ಬಾದಾಮಿ ಮುಂತಾದ ಕಡೆಗೂ ರಾಷ್ಟ್ರೀಯ ಶಾಲೆಗಳು ಹೊರಟಿದ್ದವು. ಇವೆಲ್ಲವೂ ಕನ್ನಡದ ಮುಖಾಂತರವೇ ಶಿಕ್ಷಣಕೊಡುವ ಶಾಲೆಗಳು ದೀಪದಕಡ್ಡೀ ಕಾರಖಾನೆ, ಸೀಸಪೆನ್ಸಿಲಿನ ಕಾರಖಾನೆ, ಪೆನ್ಸಿಲ ಕಾರಖಾನೆ, ಮಂಗಳೂರು ಹಂಚಿನ ಕಾರಖಾನೆ, ಸಕ್ಕರಿ ಕಾರಖಾನೆ, ಸ್ವದೇಶಿ ವಸ್ತ್ರದ ಕಾರಖಾನೆ, ಸ್ವದೇಶಿ ಅಂಗಡಿಗಳು, ಸ್ವದೇಶಿ ಬಳೆಗಳು, ಶೀಗೆಕಾಯಿಪುಡಿ, ಇವೇ ಮುಂತಾದ ತರತರದ ಸ್ವದೇಶೀ ಉದ್ಯೋಗಗಳು ಹೊರಟದ್ದು ಇದೇ ಕಾಲದಲ್ಲಿ. ಅವು ಹೊರಟವು, ಅನೇಕ ಕಾರಣಗಳ ಮೂಲಕ ಬಹುಶಃ ಮುಗ್ಗಿಯೂ ಹೋದವು. ಆದರೆ ಈ ಎಲ್ಲ ಚಳವಳಿಗಳ ಮೂಲಕ ರಾಷ್ಟ್ರದಲ್ಲಿ ಉಂಟಾದ ಚೈತನ್ಯವು ಮಾತ್ರ ಅಸ್ತವಾಗದೆ ಸ್ಥಿರವಾಗಿ ಉಳಿಯಿತು. ಬಹಿಷ್ಕಾರದ ಪ್ರಭಾವವೂ ಎಲ್ಲ ಕಡೆಗೆ ಕಂಡುಬಂದಿತು. ವಿಲಾಯತಿಯ ವಸ್ತ್ರವು ಅಸ್ಪೃಶ್ಯ ಕೋಟಿಯಲ್ಲಿ ಸೇರಿತು. ಪರದೇಶಿ ಸಕ್ಕರೆಗೆ ಬಹಿಷ್ಕಾರ

ಬಿದ್ದಿತು ಆಗಿನ ಬಹಿಷ್ಕಾರದ ಸ್ವರೂಪವು ವ್ಯಾಪಕವಾಗಿತ್ತು. ಚಿಮಣಿ ಎಣ್ಣೆಗೂ ಆಗ ಬಹಿಷ್ಕಾರ ಬಿದ್ದಿತ್ತು; ನಾವು ಮನೆಯಲ್ಲಿ ಹುಲಗಲ ಎಣ್ಣೆಯನ್ನು ಉಪಯೋಗಿಸುತ್ತಿದ್ದೆವು ಹೆಣ್ಣು ಮಕ್ಕಳು ಪರದೇಶಿ ಬಳೆಗಳನ್ನು ಒಡೆಯುವ ಕೆಲಸವು ಭರದಿಂದ ನಡೆದಿತ್ತು ಟ್ರೇನಿಂಗ ಕಾಲೇಜಿನಲ್ಲಿ ಗ್ಲಾಸಿನ ದೀಪಗಳು ಮಾಯವಾದವು, ಒಳ್ಳೆಯೆಣ್ಣೆ, ಹುಲಗಲ ಎಣ್ಣೆಯ ಸಮೆಗಳು ಕಂಗೊಳಿಸಿದವು.

ಈ ಅವಧಿಯಲ್ಲಿಯು ಕರ್ನಾಟಕದ ರಾಜಕಾರಣವೆಂದರೆ ಮಹಾರಾಷ್ಟ್ರದ ಅನುಕರಣಮಾತ್ರವಾಗಿದ್ದಿತು ಇಡೀ ಹಿಂದುಸ್ಥಾನದ ಸಂಬಂಧವಾಗಿ ವಿಚಾರಮಾಡಿ,ಇಡೀಹಿಂದುಸ್ಥಾನಕ್ಕೆಮೇಲ್ಪಂಕ್ತಿಯನ್ನು ಹಾಕಿ ಕೊಡುವಷ್ಟು ಸಾಮರ್ಥ್ಯವು ಕರ್ನಾಟಕಕ್ಕೆ ಆಗ ಬಂದಿದ್ದಿಲ್ಲ, ಈಗಲೂ ಬಂದಿರುವುದಿಲ್ಲ ಹಿಂದುಸ್ಥಾನದ ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ಹೋಗುವುದೊಂದೇ ಕರ್ನಾಟಕದ ರಾಜಕಾರಣದ ಮುಖ್ಯಸ್ವರೂಪವಾಗಿತ್ತು, ಈಗಲೂ ಹಾಗೆಯೇ ಇದೆ. ಅಲ್ಲದೆ, ಟಿಳಕರಂಥ ಅದ್ವಿತೀಯ ಮುಖಂಡರ ಕೆಳಗೆ ಕೆಲಸ ಮಾಡುವುದರಲ್ಲಿ ಕರ್ನಾಟಕಕ್ಕೆ ಆನಂದವೇ ಆಗುತ್ತಿತ್ತು ಕರ್ನಾಟಕವು ಅವರನ್ನು ಆದಷ್ಟುಮಟ್ಟಿಗೆ ಅನುಸರಿಸಿತು ಮಹಾರಾಷ್ಟ್ರದಲ್ಲಿ ಗಣಪತಿಉತ್ಸವ ಶಿವಾಜಿಉತ್ಸವಗಳು ಹೊರಟವು; ಇಲ್ಲಿಯೂ ಅವು ಪ್ರಾರಂಭವಾದವು. ಅಲ್ಲಿ ನ್ಯೂ ಇಂಗ್ಲಿಷ ಸ್ಕೂಲ ಹೊರಟಿತು; ಇಲ್ಲಿಯೂ ನ್ಯೂ ಇಂಗ್ಲಿಷ ಸ್ಕೂಲ್ (ಈಗಿನ ವ್ಹಿಕ್ಟೋರಿಯಾ ಹಾಯಸ್ಕೂಲ) ಹೊರಟಿತು. ಅಲ್ಲಿ ಪೈಸಾಫಂಡು ಪ್ರಾರಂಭವಾಯಿತು; ಇಲ್ಲಿಯೂ ಅದು ಹಬ್ಬಿತು. ಅಲ್ಲಿ ಸ್ವದೇಶಿ ಉಪನ್ಯಾಸಗಳಾದವು; ಇಲ್ಲಿಯೂ ಆದವು. ಅಲ್ಲಿ ಮದ್ಯಪಾನನಿಷೇಧ ಚಳವಳಿಯು ಎದ್ದಿತು; ಇಲ್ಲಿಯೂ

ಅದು ಕೈಕೊಳ್ಳಲ್ಪಟ್ಟಿತು ಅಲ್ಲಿ ಪ್ಲೇಗಿನ ವ್ಯೈಲಿಯ ವಿರುದ್ಧ ಚಳವಳಿಯು ಎದ್ದಿತ್ತು; ಇಲ್ಲಿಯೂ ಅದು ಹೂಡಲ್ಪಟ್ಟಿತ್ತು, ಅಲ್ಲಿ ಪಾಠಶಾಲೆಗಳು ಸ್ಥಾಪಿಸಲ್ಪಟ್ಟಿದ್ದವು, ಇಲ್ಲಿಯೂ ಸ್ಥಾಪಿಸಲ್ಪಟ್ಟಿದ್ದವು ಹೀಗೆ ಮುಂಚಿನಿಂದ ಅನೇಕ ವರುಷಗಳವರೆಗೆ ಉತ್ತರಕರ್ನಾಟಕದ ಜನಜೀವನವು ಲೋಕಮಾನ್ಯರ ಮುಖಂಡತ್ವದಲ್ಲಿ ಸಾಗಿತು

**ನನ್ನ ಚಳವಳಿಗಳು** (೧೯೦೫-೧೦)—೧೯೦೫ರಲ್ಲಿ ನಾನು ವಿಶೇಷವಾದ ಚಳವಳಿಗಳನ್ನು ಮಾಡಲಿಲ್ಲ ಬಂಗಾಲದಲ್ಲಿ ಆ ವರ್ಷದ ಕೊನೆಕೊನೆಗೆ ಚಳವಳಿಯು ಜೋರಾಗಿತ್ತು. ಅದರ ತೆರೆಗಳು ಕರ್ನಾಟಕಕ್ಕೆ ಬಂದು ತಲುಪುವುದಕ್ಕೆ ಕೆಲವು ತಿಂಗಳುಗಳು ಹಿಡಿದವು ನಾನೂ ವಕೀಲಿಗೆ ಬಂದೆ, ಆ ತೆರೆಗಳೂ ಧಾರವಾಡಕ್ಕೆ ಬಂದವು ಜನಜಾಗ್ರತಿಯು ರಾಷ್ಟ್ರೀಯತ್ವದ ಜನನಿಯು ಪಿತ್ರೆ, ಜೋಶಿ, ಮುದವೇಡೇಕರ, ಹೊನ್ನಾಪುರಮಠ, ಬಿಂದೂರಾವ ಮುಂತಾದವರು ಹಾಲಗೆರೆಯ ಮೇಲೆ ಪ್ರತಿನಿತ್ಯ ವ್ಯಾಖ್ಯಾನ ಕೊಡುತ್ತಿದ್ದರು ಪಿತ್ರೆ ವಕೀಲರು ಜನಜಾಗ್ರುತಿಯ ತಮ್ಮ ವಿಶಿಷ್ಟವಾದ ಮತ್ತು ವ್ಯವಸ್ಥಿತವಾದ ಪದ್ಧತಿಯಿಂದ ಚಳವಳಿಯನ್ನು ನಡಿಸಿದ್ದರು ಮಿಶನರಿಗಳಂತೆ ಓಣಿಓಣಿಗಳಿಗೆ ಹೋಗಿ, ಸ್ವತಃ ಗಂಟೆಯನ್ನು ಬಾರಿಸಿ, ಜನರನ್ನು ಕಲೆಹಾಕಿ ಉಪನ್ಯಾಸ ಕೊಡುತ್ತಿದ್ದರು. ನಾನು ಅವರೆಲ್ಲರ ಉಪನ್ಯಾಸಗಳನ್ನು ಕೇಳಲಿಕ್ಕೆ ಹೋಗುತ್ತಿದ್ದೆ. ಆದರೆ ರಾಜಕಾರಣದ ಅಭ್ಯಾಸವನ್ನು ಆಳವಾಗಿ ಮಾಡದೆ, ರಾಜಕೀಯ ರಣರಂಗದಲ್ಲಿ ಪ್ರವೇಶಿಸಬಾರದೆಂದು ಆಗ ಅಭಿಪ್ರಾಯವುಳ್ಳವನಾಗಿದ್ದೆ. ಆದಕಾರಣ, ರಾಜಕಾರಣದಲ್ಲಿ ಕೆಲವು ವರ್ಷ ಬೀಳಲೇಬಾರದೆಂದು ಮುಂಚೆ ಸಂಕಲ್ಪ

ಮಾಡಿದ್ದೆ. ಆದರೆ, ಯಾವುದೋ ಒಂದು ಅದೃಶ್ಯಶಕ್ತಿಯು ನನ್ನನ್ನು ಎಲ್ಲಕ್ಕೂ ಮುಂಚೆ ರಾಜಕಾರಣದಲ್ಲಿಯೇ ಎತ್ತಿ ಒಗೆಯಿತು. ನಾನೂ ಸ್ವದೇಶಿ ಚಳವಳಿಯ ಬಗ್ಗೆ ಧಾರವಾಡ ಜಿಲ್ಹೆಯಲ್ಲೆಲ್ಲ ಉಪನ್ಯಾಸಗಳನ್ನು ಕೊಡುತ್ತ ತಿರುಗಿದೆ. ಹಾಗೆ ಮಾಡಲು ನನಗೆ ಅನುಕೂಲತೆಯಿತ್ತು. ಆಗಿನ ಕಾಲಕ್ಕೆ ಸಾರ್ವ ಜನಿಕ ಕಾರ್ಯಮಾಡುವವರಿಗೆ ಖರ್ಚುಕೊಡುವವರು ಯಾರು? ತಮ್ಮ ಕೈಯಿಂದ ಖರ್ಚು ಮಾಡತಕ್ಕದ್ದು, ಹೋಗತಕ್ಕದ್ದು. ಅದು ನಮ್ಮ ತಿಂಡಿಗಾಗಿ. ನಿಜವಾಗಿ, ಸಾರ್ವಜನಿಕ ಕಾರ್ಯ ಮಾಡುವುದೂ ಒಂದು ದೊಡ್ಡ ವ್ಯಸನವೇ. ಅದು ಸರಾಯಿ ಕುಡಿ ಯುವುದೇ ಮುಂತಾದ ವ್ಯಸನಗಳಿಗಿಂತಲೂ ಹೆಚ್ಚಿನ ವ್ಯಸನ ವೆಂದು ನನ್ನ ಭಾವನೆ, ನನ್ನ ಅನುಭವ. ಆ ಚಟವು ಹತ್ತ ಲಿಕ್ಕೇನೋ ಬಹಳ ಹೊತ್ತು ಬೇಕಾಗಬಹುದು; ಬಹಳ ಶ್ರಮ ಹಿಡಿಯಬಹುದು. ಆದರೆ, ಒಮ್ಮೆ ಆ ಚಟ ಹತ್ತಿತೆಂದರೆ, ಅದರ ಹೊರತು ಮನುಷ್ಯನ ಮನಸ್ಸಿಗೆ ಸಮಾಧಾನವೇ ಎನಿಸುವುದಿಲ್ಲ. ಬೇಕಾದರೆ ತರುಣರು ಅದನ್ನು ಹಚ್ಚಿಕೊಂಡು ನೋಡಲಿ. ಇರಲಿ. ಆಗ ನನ್ನ ಆರ್ಥಿಕ ಸ್ಥಿತಿಯು ಅನು ಕೂಲವಾಗಿತ್ತು. ಆಗಿನ ನನ್ನ ಜೀವನವು ಕರ್ಮಪ್ರಧಾನ ಜೀವನವಾಗಿತ್ತು. ಈ ಅವಧಿಯಲ್ಲಿ, ನಾನು ಒಂದು ಅರ ಕ್ಷಣ ವಿರಾಮ ತೆಗೆದುಕೊಳ್ಳಲಿಲ್ಲ. ಹಗಲೆನ್ನದೆ ರಾತ್ರಿ ಯೆನ್ನದೆ ದುಡಿದೆ. ಕಾಲೇಜಿನಿಂದ ಬರುವಾಗ ಏನೋ ನನ್ನ ತಲೆಯಲ್ಲಿ ಒಂದು ಹುಚ್ಚು. ಏನೆಂದರೆ, ಕೆಲವು ಜನರು ತಮ್ಮ ಪ್ರಕೃತಿಯ ಪರಿವೆಯನ್ನು ಕೂಡ ಮಾಡದೇ ದುಡಿದರೇನೇ ದೇಶವು ಮುಂದೆ ಬರುತ್ತದೆಂದು. ಫರ್ಗ್ಯುಸನ ಕಾಲೇಜಿನ ಅನೇಕ ಪ್ರೊಫೆಸರರೂ ಟಿಳಕರ ಸಂಗಡಿಗರೂ ಹೀಗೆ ಕಾರ್ಯಾ

ತಿರೇಕವನ್ನು ಮಾಡಿಯೇ ಅಕಾಲಮೃತ್ಯುವಿಗೆ ಈಡಾದರಲ್ಲವೆ? ಪ್ರೊ. ಆಪಟೆಯವರು ಸಂಸ್ಕೃತ ಕೋಶವನ್ನು ಬರೆಯುವುದರಲ್ಲಿ ಸತ್ತು ಸುಣ್ಣಾಗಲಿಲ್ಲವೆ? ನಾಮದಾರ ಗೋಖಲೆಯವರೂ ಮುಂಚೆ ಹೀಗೆ ಕಾರ್ಯಭಾರದಿಂದ ಬಗ್ಗಿಯೇ ಮೃತ್ಯುಮುಖಕ್ಕೆ ಈಡಾಗಿರುವರಲ್ಲವೆ? ಈ ದೇಶಭಕ್ತರು ದೇಶವನ್ನು ಮುಂದ ತರುವುದಕ್ಕಾಗಿ ತಮ್ಮ ದೇಹಗಳನ್ನು ಈ ರೀತಿಯಲ್ಲಿ ಲಿಬ ಕೊಟ್ಟಾಗಲ್ಲವೇ ದೇಶವು ಮುಂದೆ ಬಂದದ್ದು? ಇರಲಿ ಈ ಅವಧಿಯಲ್ಲಿ ನಾನು ಪ್ರಕೃತಿಯನ್ನು ದುರ್ಲಕ್ಷಿಸಿದೆ, ಉಪನ್ಯಾಸ ಗಳನ್ನು ಕೊಟ್ಟೆ, ರಾಷ್ಟ್ರೀಯ ಶಿಕ್ಷಣದ ಚಳವಳಿ ಮಾಡಿದೆ ಪೈಸಾಫಂಡಿನ ಸಕ್ರೆಟರಿಯಾಗಿ ಪೈಸಾಫಂಡು ಕೂಡಿಸಿದೆ. ಮೋಹರಮ್ಮು, ಹೋಳಿಹಬ್ಬ, ದೀಪಾವಳಿ ಹಬ್ಬಗಳಲ್ಲಿ ಮೇಳೆ ಮುಂತಾದವುಗಳನ್ನು ಏರ್ಪಡಿಸಿದೆ ಅನೇಕ ಪತ್ರಿಕೆಗಳಿಗೆ ಹೆಸರು ಹಾಕದಿದ್ದರೂ ಸಂಪಾದಕನಾದೆ ಅನೇಕ ಉದ್ಯೋಗ ಧಂದೆಗಳನ್ನು ತೆಗೆಸಿದೆ ನನ್ನ ತಮ್ಮ ಲಕ್ಷ್ಮಣನನ್ನು ೧೯೧೦ರ ಪ್ರಾರಂಭದಲ್ಲಿ ಮುಂಬಯಿಗೆ ಡಾಯಿಂಗ ಕಲರಿಂಗ ಕಲಿಯ ಲಿಕ್ಕೆ ಕಳಿಸಿದೆ. 'ವಂದೇ ಮಾತರಂ' ದೈನಿಕ ಪತ್ರಿಕೆಗೆ ಸಾವಿ ರಾರು ರೂಪಾಯಿಗಳ ಶೇರ್ಸಗಳನ್ನು ಕೂಡಿಸಿಕೊಟ್ಟೆ. ಟಿಳಕ ಡಿಫೆನ್ಸ ಫಂಡ ಕೂಡಿಸಿದೆ ಗುಪ್ತಚಳವಳಿಗೆ ಸಹಾಯ ಮಾಡಿದೆ.

ಹೀಗೆ ನಾನು ರಾಷ್ಟ್ರೀಯ ಚಳವಳಿಗಳನ್ನು ತುಂಬಾ ನಡಿ ಸುತ್ತಿದ್ದರೂ, ನನ್ನ ಮೂಲಸ್ವಭಾವಕ್ಕೆ ಮತ್ತು ಸಂಕಲ್ಪಕ್ಕೆ ಅನುಗುಣವಾಗಿ, ಮನೆಯಲ್ಲಿ ವಾಙ್ಮಯ, ಇತಿಹಾಸ ಮತ್ತು ಧರ್ಮ ಇವುಗಳ ಅಭ್ಯಾಸವನ್ನು ನಡಿಸುವುದನ್ನು ಬಿಟ್ಟಿರಲಿಲ್ಲ. ಅಲ್ಲದೆ, ಆ ಕ್ಷೇತ್ರಗಳಲ್ಲಿಯೂ ಅನೇಕ ತರಹದ ಚಟುವಟಿಕೆ

ಗಳನ್ನೂ ನಡಿಸಿಯೇ ಇದ್ದೆನು. ಹಾಗೆಯೇ ಪ್ರಾತಃಸಿತ್ಯ ಪೂಜೆ ಪುನಸ್ಕಾರ ಧ್ಯಾನಾದಿಗಳ ಕಾರ್ಯಕ್ರಮವನ್ನೂ ಇಟ್ಟುಕೊಂಡೇ ಇದ್ದೆನು. ನನ್ನ ಮಿಕ್ಕ ಚಟುವಟಿಕೆಗಳ ವಿಷಯವಾಗಿ ಆಯಾ ಸಂಬಂಧವ ಪ್ರಕರಣಗಳಲ್ಲಿ ವಿಸ್ತರಿಸುವವನೇ ಇದ್ದೇನೆ. ಒಟ್ಟಿಗೆ ಹೇಳುವುದೇನೆಂದರೆ, ಈ ಅವಧಿಯು ನನ್ನ ಚಟುವಟಿಕೆಜೀವ ನದ ಪರಮಾವಧಿ ಕಾಲವು.

**ನನ್ನ ರಾಷ್ಟ್ರೀಯ ಶಿಕ್ಷಣದ ಚಳವಳಿ** - ನಾನು ಈ ಅವಧಿ ಯಲ್ಲಿ ಕೈಕೊಂಡ ಪ್ರಧಾನ ಚಳವಳಿಯೆಂದರೆ ರಾಷ್ಟ್ರೀಯ ಶಿಕ್ಷಣ. ೧೫-೮-೧೯೦೬ನೆಯ ದಿವಸ ಬಂಗಾಲದಲ್ಲಿ ರಾಷ್ಟ್ರೀಯ ಕಾಲೇಜು ಹೊರಟಿತು. ಬಾಬು ಅರವಿಂದರು ಬಡೋದೆಯ ಲ್ಲಿದ್ದ ತಮ್ಮ ಕಾಲೇಜಿನ ಪ್ರಿನ್ಸಿಪಾಲ ಜಾಗೆಗೆ ರಾಜೀನಾಮೆ ಕೊಟ್ಟು ಬಡತನದ ವ್ರತವನ್ನು ಅಂಗೀಕರಿಸಿ, ಬಂಗಾಲದ ರಾಷ್ಟ್ರೀಯ ಕಾಲೇಜಿಗೆ ಪ್ರಿನ್ಸಿಪಾಲರಾದರು. ಪ್ರೊ. ವಿಜಾಪುರ ಕರ ಇವರು ಮಹಾರಾಷ್ಟ್ರದಲ್ಲಿ ಸಮರ್ಥ ವಿದ್ಯಾಲಯವನ್ನು ತೆಗೆ ದರು. ನಾನು ವಕೀಲಿಗೆ ಬೇಸತ್ತಿದ್ದೆನೆಂದೂ ಮುಂದೇನು ಮಾಡಬೇಕೆಂಬುದು ಗೊತ್ತಾಗದ ಮೂಲಕವೇ ವಕೀಲಿ ವೃತ್ತಿ ಯನ್ನು ಸಾಗಿಸುತ್ತಿದ್ದೆನೆಂದೂ ಹಿಂದೆ ಹೇಳಿದೆನಷ್ಟೆ. ಅತ್ತ ರಾಷ್ಟ್ರೀಯ ಶಾಲೆಗಳು ಹೊರಟ ಕೂಡಲೆ, ನನಗೂ ರಾಷ್ಟ್ರೀಯ ಶಿಕ್ಷಣಕ್ಕಾಗಿ ವಕೀಲಿ ವೃತ್ತಿಯನ್ನು ಬಿಡಬೇಕೆಂದೆನಿಸಿತು. ವಕೀಲಿ ವೃತ್ತಿಯನ್ನು ಬಿಡುವ ಸಂಕಲ್ಪ ಮಾಡಿ, ದಿನದಿನಕ್ಕೆ ಅದನ್ನು ದುರ್ಲಕ್ಷ ಮಾಡುತ್ತ, ಇತ್ತ ರಾಷ್ಟ್ರೀಯ ಶಿಕ್ಷಣದ ಬಗ್ಗೆ ಪ್ರಯತ್ನಿಸುತ್ತ ನಡೆದೆ. ಆದರೆ ನನ್ನ ಪ್ರಯತ್ನಗಳು ಸಫಲವಾಗುವುದಕ್ಕೆ ಒಂದು ವರುಷ ಹಿಡಿಯಿತು. ೧೯೦೭ ನೆಯ ಇಸ್ವಿಯಲ್ಲಿ ಸುರತ ಕಾಂಗ್ರೆಸ್ಸಿನ ಚಳವಳಿಯಲ್ಲಿ ದಿನ

ಗಳು ಹೋದವು ಸ್ವಪ್ರತಿ ಚಳುವಳಿಯನ್ನಂತೂ ನಡಿಸಿಯೇ ಇದ್ದೆ ಕೊನೆಗೆ ೩-೫-೧೯೨೧ನೆಯ ಇಸ್ವಿಯ ದಿವಸ ಧಾರವಾಡದಲ್ಲಿ ರಾಷ್ಟ್ರೀಯ ಶಿಕ್ಷಣಸಂಸ್ಥೆ ಸ್ಥಾಪಿತವಾಯಿತು. ಜೂನ ತಿಂಗಳಿನಲ್ಲಿ ಶಾಲೆಯನ್ನು ಪ್ರಾರಂಭಿಸುವುದು ಗೊತ್ತಾಗಿತ್ತು. ಪ್ಲೇಗಿನ ಮೂಲಕ ಆಗ ಪ್ರಾರಂಭವಾಗಲಿಲ್ಲ ೨೬-೧-೧೯೨೧ನೆಯ ಇಸ್ವಿಯ ದಿವಸ ಪ್ರಾರಂಭವಾಯಿತು. ಅಷ್ಟರಲ್ಲಿ, ಬಂಗಾಲದಲ್ಲಿಯ ಅರಾಜಕ ಚಳವಳಿಯ ಅತ್ಯಾಚಾರಗಳ ಮೂಲಕ ದೇಶದಲ್ಲೆಲ್ಲ ದಬ್ಬಾಳಿಕೆಯು ಪ್ರಾರಂಭವಾಗಿತ್ತು. ಆದರ ಬೇಗೆಯು ಇಲ್ಲಿಯೂ ಹಬ್ಬಿತು. ೧೯೦೮ನೆಯ ಇಸ್ವಿಯ ದಸರೆಯಲ್ಲಿ ಬಾಗಲಕೋಟೆಯಲ್ಲಿ ರಾಷ್ಟ್ರೀಯ ಶಾಲೆ ಪ್ರಾರಂಭವಾಗಿತ್ತು. ಹೀಗೆಯೇ ಮಿಕ್ಕ ಅನೇಕ ಕಡೆಗೆ ಅವು ಪ್ರಾರಂಭವಾಗಿದ್ದವು ೧೯೦೮ನೆಯ ಅಕ್ಟೋಬರದಲ್ಲಿ ನಾನು ಬಾಗಲಕೋಟೆಗೆ ಹೋಗಿ, ಕರ್ನಾಟಕಕ್ಕೆ ಒಂದೇ ಮಧ್ಯವರ್ತಿ ಶಾಲೆಯನ್ನು ತೆಗೆಯೋಣವೆಂದೂ ವಕೀಲಿ ಉದ್ಯೋಗವನ್ನು ನಡಿಸಿಕೊಂಡು, ರಾಷ್ಟ್ರೀಯ ಶಾಲೆಯನ್ನು ನಡಿಸುವುದನ್ನು ಬಾಗಲಕೋಟೆಯವರು ಗೊತ್ತುಮಾಡಿದ್ದು ಅಷ್ಟು ಪ್ರಶಸ್ತವಾದುದಲ್ಲವೆಂದೂ ಹೇಳಿದೆನು. ಅಲ್ಲಿ ೪-೬ ದಿವಸ ಇದ್ದು, ಪ್ರಯತ್ನಮಾಡಿದೆನು, ಆದರೆ ನನ್ನ ಪ್ರಯತ್ನವು ಸಫಲವಾಗಲಿಲ್ಲ ೧೯೦೯ನೆಯ ಇಸ್ವಿಯ ಕೊನೆಗೆ ಅನೇಕ ರಾಷ್ಟ್ರೀಯ ಶಾಲೆಗಳು ಸರಕಾರದ ದಬ್ಬಾಳಿಕೆಯಿಂದ ಹತ್ತೊತ್ತಲ್ಪಟ್ಟವು ನನ್ನ ರಾಷ್ಟ್ರೀಯ ಶಾಲೆಯ ಶಿಕ್ಷಣವು ಅನರ್ಥಕಾರಿಯಾದುದು (Pernicious Education) ಎಂದು ಸರಕಾರದಿಂದ ಮುದ್ರೆಬಿದ್ದಿತು ಮತ್ತು ೧ನೆಯ ಫೆಬ್ರುವರಿ ೧೯೧೦ರ ಒಳಗಾಗಿ ಅಲ್ಲಿಯ ವಿದ್ಯಾರ್ಥಿಗಳು ಅಲ್ಲಿಂದ ಹೊರಬೀಳದಿದ್ದರೆ, ಅವರಿಗೆ ಮುಂದೆ ಎಲ್ಲಿಯೂ

ಶಿಕ್ಷಣವು ದೊರೆಯಲಾರದೆಂದು ಹುಕುಮು ಬಂದಿತು ಆಗ ಎಲ್ಲ ಶಾಲೆಗಳೂ ನಿಂತುಹೋದವು ನನ್ನ ಶಾಲೆಯ ವಿದ್ಯಾರ್ಥಿಗಳ ಸಂಖ್ಯೆ ಕರಗಹತ್ತಿತು ಆದರೂ ಮುಂದೆ ಒಂದು ವರ್ಷ ನನ್ನ ಶಾಲೆಯು ಟುಕುಟುಕು ಜೀವ ಹಿಡಿದಿತ್ತು ಆಮೇಲೆ ಪೂರಾ ನಿಂತುಹೋಯಿತು.

ನನ್ನ ರಾಷ್ಟ್ರೀಯ ಶಾಲೆಗೆ ಮ್ಯಾಚ್ ಫ್ಯಾಕ್ಟರಿ, ಪೆನಸಿನ್ನಿಲ ಫ್ಯಾಕ್ಟರಿ, ಹೊಜೆಯುರಿ, ಚಿತ್ರಕಲೆ, ಒಡಿಗತನ, ಮುದ್ರಣಕಲೆ ಇವೇ ಮುಂತಾದ ಉದ್ಯೋಗ ಧಂದೆಗಳು ಜೋಡಿಸಲ್ಪಟ್ಟಿದ್ದವು ಅಭ್ಯಾಸಕ್ರಮವು ೫ನು ವರ್ಷದ್ದು ಇತ್ತು ಆದರೆ ಮೇಲೆ ಹೇಳಿದ ರೀತಿಯಲ್ಲಿ ಅದರ ಇತಿಶ್ರೀಯಾಯಿತು

**ನನ್ನ ಸ್ವದೇಶಿ ಚಳವಳಿಯ ಜೀವನ:**—ಇನ್ನು ಈ ಅವಧಿಯಲ್ಲಿಯ ಕೆಲವು ಸ್ಮೃತಿಗಳನ್ನು ಕೊಡುತ್ತೇನೆ ನನ್ನ ರಾಜಕೀಯ ಜೀವನವೂ ಮಹಾರಾಷ್ಟ್ರದೊಡನೆ ಸಂಪೂರ್ಣ ಸಹಕಾರದಿಂದಲೇ ಪ್ರಾರಂಭವಾಯಿತು. ನಾನು ೧೯೦೫ರಿಂದ ೧೯೧೦ರವರೆಗೆ ಮಾಡಿದ ಚಟುವಟಿಕೆಗಳಿಗೆ ಮೂಲಸ್ಫೂರ್ತಿಯು ಲೋಕಮಾನ್ಯರಿಂದಲೇ ನನಗೆ ದೊರೆಯಿತು ಆದರೆ ನನ್ನ ಸ್ವಭಾವದ ಸ್ವತಂತ್ರ ಪ್ರವೃತ್ತಿಯ ಮೂಲಕ, ಮತ್ತು ರಾಜಕಾರಣದಲ್ಲಿ ನಾನು ಮುಖಂಡನಾಗಿದ್ದಾಗ ನನಗೆ ಪದೇಪದೇ ಬಂದ ಅನುಭವಗಳ ಮೂಲಕ, ನನ್ನ ರಾಷ್ಟ್ರೀಯ ಜೀವನಕ್ಕೆ ಮುಂದೆ ಕರ್ನಾಟಕತ್ವದ ಸ್ವರೂಪವು ತಾನಾಗಿಯೇ ಪ್ರಾಪ್ತವಾಯಿತು ಅದನ್ನು ಮುಂದೆ ಹೇಳುವೆನು. ಇಲ್ಲಿ ಹೇಳುವುದೇನೆಂದರೆ, ಈ ಅವಧಿಯಲ್ಲಿ ಕೂಡ ನಾನು ಮಹಾರಾಷ್ಟ್ರದ ಚಳವಳಿಗಳನ್ನು ಅಂಧನಾಗಿ ಅನುಕರಣಮಾಡಲಿಲ್ಲ. ಅವು

ಗಳಿಗೆ ರಕ್ಷಿಸುವ ಉತ್ಸವಗಳಿಗೆ ಕರ್ನಾಟಕತ್ವದ ಸ್ವರೂಪವನ್ನು ಕೊಟ್ಟೆನು ಇದೇ ನಾನು ಇಲ್ಲಿಯ ರಾಜಕಾರಣದಲ್ಲಿ ಮಾಡಿದ ಮೈಲಿಕ್ಕೆ ... ಇಷ್ಟರಲ್ಲಿ ಇಲ್ಲಿ ಸ್ವದೇಶಿ ಚಳವಳಿಯು ಜೋರಿನಿಂದ ಪ್ರಾರಂಭವಾಗಿತ್ತು ನಾನು ಅದರಲ್ಲಿ ಭಾಗ ತೆಗೆದುಕೊಂಡೆನು ಗಣಪತಿಉತ್ಸವ, ಶಿವಾಜಿ ಉತ್ಸವಗಳಲ್ಲಿ ಮೇಳಗಳು ಹೊರಡುತ್ತಿದ್ದವು ನಾನೂ ನನ್ನ ಮಿತ್ರರೂ ಮೇಳವನು ಮತ್ತು ದೇಶೀ ಪದ್ಯಗಳಲ್ಲಿಯೂ ಅಂಥ ಮೇಳಗಳನ್ನು ಹೊರಡಿಸಹತ್ತಿದೆವು ... ಯಲ್ಲಿಯ ದೇಶ್ಯಾನುಕ್ರಮ ಅಲ್ಲ ಆಟಗಳನ್ನೂ ಕೋಲಾಟ ಗಳನ್ನೂ ಸ್ವದೇಶಿ ಚಳವಳಿಗೆ ಉಪಯೋಗಮಾಡಿಕೊಂಡೆವು ಹೂವೀಳ್ಯಗಳ ದ್ವಾರಾ ಹೆಂಗಸರಲ್ಲಿ ಸ್ವದೇಶಿಯ ಬಗ್ಗೆ ಪ್ರೀತಿ ಯನ್ನು ಹುಟ್ಟಿಸಲಿಕ್ಕೆ ಪ್ರಾರಂಭಿಸಿದೆವು ಮನ್ಯನಾಸ ನಿಷೇಧ ಚಳವಳಿಯು ಕರ್ನಾಟಕಕ್ಕೆ ಅಷ್ಟೊಂದು ತೀಕ್ಷ್ಣವಾದ ಪ್ರಶ್ನೆ ಯಾಗಿಲ್ಲವೆಂದು ನನ್ನ ಸ್ವಂತದ ಅಭಿಪ್ರಾಯ. ಸರ ಕುಡಿಯು ವವರೇನೋ ಎಲ್ಲ ಕಡೆಗೂ ಇದ್ದೇ ಇರುತ್ತಾರೆ ಆದರೆ, ಮಹಾ ರಾಷ್ಟ್ರದಲ್ಲಿಯ ಮರಾಠಾಜಾತೀಯ ರೈತರು ಸೆರೆ ಕುಡಿಯುವಂತೆ ಇಲ್ಲಿಯ ಲಿಂಗಾಯತ ರೈತರು ಕುಡಿಯುವುದಿಲ್ಲ ಲಿಂಗಾ ಯತ ಧರ್ಮವು ಕರ್ನಾಟಕವನ್ನು ಆ ವಿಷಯದಲ್ಲಿ ಉದ್ಧಾರ ಮಾಡಿರುತ್ತದಾದುದರಿಂದ, ಮಹಾರಾಷ್ಟ್ರದವರನ್ನು ನಾನು ಅಂಧವಾಗಿ ಅನುಕರಣಮಾಡಿ ಆ ಚಳವಳಿಯನ್ನು ಕೈಕೊಳ್ಳ ಲಿಕ್ಕೆ ಒಪ್ಪಲಿಲ್ಲ. ಈ ವಿಷಯದಲ್ಲಿ ನನ್ನ ಮಿತ್ರರಿಗೂ ನನಗೂ ಮತಭೇದವಾಯಿತು. ಅವರಿಗೆ ನಾನೇನೂ ಅಡ್ಡಬರಲಿಲ್ಲ ಆದರೆ, ಆ ಚಳವಳಿಯಲ್ಲಿ ನಾನು ಅಷ್ಟೊಂದು ಉತ್ಸಾಹ ದಿಂದ ಭಾಗತೆಗೆದುಕೊಳ್ಳಲಿಲ್ಲ.

ಮಹಾರಾಷ್ಟ್ರವನ್ನು ಹಿಂಬಾಲಿಸಿವರೂ ಅಂಧವಾಗಿ ಹಿಂಬಾಲಿಸದೆ ಇರುವುದಕ್ಕೆ ಪ್ರೊ ವಿಜಾಪೂರಕರ ಇವರ ಉಪದೇಶವೂ ಪುಷ್ಟಿಯನ್ನು ಕೊಟ್ಟಿತು ಮಹಾರಾಷ್ಟ್ರದಲ್ಲಿ ರಾಷ್ಟ್ರೀಯ ಶಿಕ್ಷಣದ ಪ್ರಸಾರಮಾಡುವುದಕ್ಕಾಗಿ ಸಮರ್ಥವಿದ್ಯಾಲಯವು ಪ್ರೊ. ವಿಜಾಪೂರಕರ ಇವರಿಂದ ಸ್ಥಾಪಿಸಲ್ಪಟ್ಟಿತು. ಅದರ ಪ್ರಸಾರಾರ್ಥವಾಗಿ ಪ್ರೊ ವಿಜಾಪುರಕರ ಇವರು ಧಾರವಾಡಕ್ಕೆ ಬಂದಿದ್ದರು ಆಗ, ನಾನು ವಕೀಲಿ ಬಿಡುವ ಸಂಕಲ್ಪವನ್ನು ಮಾಡಿ ರಾಷ್ಟ್ರೀಯ ಶಿಕ್ಷಣವನ್ನು ನನ್ನ ಆಯುಷ್ಯದ ಧ್ಯೇಯವನ್ನಾಗಿ ಇಟ್ಟುಕೊಳ್ಳುವುದನ್ನು ಗೊತ್ತುಮಾಡಿದ್ದೆ ಆಗಿನ ಕಾಲದಲ್ಲಿ, ತಮ್ಮ ಜೀವಿತಸರ್ವಸ್ವವನ್ನು ಅರ್ಪಣಮಾಡುವ ಪದವೀಧರರು ಅತ್ಯಂತ ವಿರಳರಾಗಿದ್ದರು. ಆದಕಾರಣ, ಹಾಗೆ ನಾನು ಜೀವಿತಸರ್ವಸ್ವವನ್ನು ಅರ್ಪಿಸುವುದಕ್ಕೆ ಸಿದ್ಧನಾದುದನ್ನು ಕೇಳಿ, ಸಮರ್ಥವಿದ್ಯಾಲಯದ ಚಾಲಕರು ನಾನು ಆ ವಿದ್ಯಾಲಯವನ್ನು ಸೇರಬೇಕೆಂದು ಆಗ್ರಹದಿಂದ ಕೇಳಿದರು. ತುಂಡುತುಂಡಾದ ಕರ್ನಾಟಕವು ಒಂದಾಗಬೇಕೆಂಬ ಕಲ್ಪನೆಯನ್ನು ನಾನು ಮೊಟ್ಟಮೊದಲಿಗೆ ೧೯೦೭ನೆಯ ಇಸ್ವಿಯಲ್ಲಿ ವಾಗ್ಭೂಷಣದ ಮುಖಾಂತರವಾಗಿ ಕರ್ನಾಟಕದ ಮುಂದೆ ಇಟ್ಟಿದ್ದೆನೇನೋ ಸರಿ ಆದರೂ ನನಗೆ ಆಗ ಇನ್ನೂ ಕರ್ನಾಟಕತ್ವದ ಸ್ಪಷ್ಟವಾದ ಕಲ್ಪನೆಯು ಪೂರ್ಣವಾಗಿ ಬಂದಿರಲಿಲ್ಲ. ನಾನು ಆ ಬಗ್ಗೆ ಪ್ರೊ. ವಿಜಾಪುರಕರ ಇವರನ್ನು ಕೇಳಿದೆ. ಅವರು ಮಾತ್ರ ನಾನು ಸರ್ವಥಾ ಸಮರ್ಥವಿದ್ಯಾಲಯವನ್ನು ಸೇರಬಾರದೆಂದೂ, ರಾಷ್ಟ್ರೀಯ ಶಿಕ್ಷಣದ ಮುಖ್ಯ ಉದ್ದೇಶವು ದೇಶಭಾಷೆಯ ಮುಖಾಂತರವಾಗಿ ಶಿಕ್ಷಣವನ್ನು ಕೊಡುವುದೇ ಇರುವುದರಿಂದ, ನಾನು ಕರ್ನಾಟಕ

ದಲ್ಲಿಯೇ ರಾಷ್ಟ್ರೀಯ ಶಾಲೆಯನ್ನು ಸ್ಥಾಪಿಸಬೇಕೆಂದೂ ಉಪದೇಶಮಾಡಿದರು ಅದೇ ನನ್ನ ಕಣ್ಣುಗಳಿಗೆ ಅಂಜನ ವಾಯಿತು. ಮತ್ತು ಹೆಚ್ಚಿನ ಮಹತ್ವಾಕಾಂಕ್ಷೆಯ ಮೋಹ ವನ್ನು ಬಿಟ್ಟು ಎಷ್ಟೇ ಚಿಕ್ಕ ಪ್ರಮಾಣದಲ್ಲಿ ಇರಲಿ, ಇಲ್ಲಿಯೇ ಇದ್ದೇ ರಾಷ್ಟ್ರೀಯ ಶಾಲೆಯನ್ನು ತೆಗೆಯಬೇಕೆಂದು ನಿರ್ಧರಿ ಸಿದೆನು ಹೀಗೆ, ನಿಃಸ್ವಾರ್ಥಬುದ್ಧಿಯಿಂದ ಉಪದೇಶಮಾಡು ವವರು ತೀರ ಕಡಿಮೆ ಸ್ವಾರ್ಥಬುದ್ಧಿಯು ಕೇವಲ ವ್ಯಕ್ತಿಗೆ ಮಾತ್ರವೇ ಅನ್ವಯಿಸುತ್ತದೆಂತಲ್ಲ, ಸಂಸ್ಥೆಗಳಿಗೂ ಅನ್ವಯಿ ಸುತ್ತದೆ. ತಾನು ಕೆಲಸಮಾಡುತ್ತಿರುವ ಸಂಸ್ಥೆಯೊಂದೇ ಮುಂದಕ್ಕೆ ಬರಬೇಕೆಂಬ ಇಚ್ಛೆ ತಾಳುವುದೂ ಒಂದು ತರ ಹದ ಸ್ವಾರ್ಥಬುದ್ಧಿಯೇ ಸರಿ ನಾನು ನನ್ನ ಜೀವನದಲ್ಲಿ ಆಯಾ ವ್ಯಕ್ತಿಗಳಿಗೆ ಮತ್ತು ಆಯಾ ದೇಶಕಾಲಮಾನ ಗಳಿಗೆ ಸಲ್ಲುವಂಥ ಉಪದೇಶವನ್ನು ಕೊಡುವುದನ್ನು ನನ್ನ ದೊಂದು ಜೀವನದ ಮುಖ್ಯ ತತ್ವವನ್ನಾಗಿ ಇಟ್ಟುಕೊಂಡಿರು ವೆನು.

**ನಾನು ವಕೀಲಿ ವೃತ್ತಿಗೆ ಮೊದಲನೆಯ ಸಲ ಶರಣು ಹೊಡೆದದ್ದು** — ೧೯೦೬ನೆಯ ಇಸ್ವಿಯಲ್ಲಿ ಕೆಲವು ತಿಂಗಳು ವಕೀಲಿ ಮಾಡುತ್ತಿದ್ದೆ. ವಕೀಲಿ ವೃತ್ತಿಯಲ್ಲಿ ಆಗಿನ ಕಾಲಕ್ಕೆ ಹಣದ ಕೊರತೆ ಇರಲಿಲ್ಲ ಆದರೂ ಕೋರ್ಟಿನಲ್ಲಿ ಬಹು ಕಾಲವನ್ನು ವ್ಯರ್ಥವಾಗಿ ಕಳೆಯುವುದಕ್ಕೆ ಬೇಸತ್ತಿದ್ದೆ—ಎಂದು ಮುಂತಾಗಿ ಹಿಂದೆ ಹೇಳಿಯೇ ಇರುವೆನಷ್ಟೆ. ಆಗ, ನನ್ನ ಮನದಲ್ಲಿ ವಕೀಲಿಯನ್ನು ಬಿಟ್ಟು ಯಾವ ದೇಶ ಕಾರ್ಯ ವನ್ನು ಕೈಕೊಳ್ಳಬೇಕೆಂಬುದು ಸ್ಥಿರವಾಗಿದ್ದಿಲ್ಲ. ಕೊನೆಗೆ ರಾಷ್ಟ್ರೀಯ ಶಿಕ್ಷಣದ ಕಡೆಗೆ ನನ್ನ ಮನಸ್ಸು ಒಲಿಯಿತು.

ಆಗ ವಕೀಲಿಯನ್ನು ಬಿಡಬೇಕೆಂದು ಮನದಲ್ಲಿ ನಿರ್ಧರಿಸಿದೆ. ಒಮ್ಮೆಲೆ ಬಿಡುವ ಧೈರ್ಯವಾಗಲಿಲ್ಲ ಕರ್ನಾಟಕದಲ್ಲಿ, ಜನತೆಯ ಬೆಂಬಲದ ಆಶೆಯು ತಿಳಿಪ್ರಾಯವೂ ಇದ್ದಿಲ್ಲ ನಿತ್ಯದಲ್ಲಿ ನಡೆಯುವ ಉಪನ್ಯಾಸಗಳನ್ನು ಕೇಳುವುದಕ್ಕೇನೋ ಜನರು ಮುತ್ತುತ್ತಿದ್ದರು ಆದರೆ ಕಾರ್ಯತಃ ಯಾವುದೊಂದು ಸಂಸ್ಥೆಯನ್ನು ನಡಿಸುವಷ್ಟು ಜಾಗ್ರತಿಯಾಗಿದ್ದಿಲ್ಲ ನನ್ನ ಮಿತ್ರರನ್ನು ಕೇಳಿ ನೋಡಿದೆ, ಹಿರಿಯರನ್ನು ಕೇಳಿ ನೋಡಿದೆ, ಅವರೆಲ್ಲರೂ ನನಗೆ ವಕೀಲಿ ಬಿಡುವುದಕ್ಕೆ ಹುರಿದುಂಬಿಸಿದರು ಬೆಂಬಲ ಕೊಡುವುದಾಗಿ ವಚನಕೊಟ್ಟರು ಆಗ, ನಾನು ವಕೀಲಿಯನ್ನು ಒಪ್ಪಿ ರಾಷ್ಟ್ರೀಯ ಶಾಲೆಯನ್ನು ತರೆಯುವ ಸಿದ್ಧತೆಗೆ ಹತ್ತಿದೆ ಸುದೈವದಿಂದ ಆಗ ನನಗೆ ಹಣದ ಕೊರತೆ ಇರಲಿಲ್ಲ. ಮನೆಯಲ್ಲಿ ಹೊಟ್ಟೆಬಟ್ಟೆಗೆ ತಾಪತ್ರಯವಿರಲಿಲ್ಲ ವಕೀಲಿ ಪ್ರಾರಂಭಮಾಡಿದ ಮೂರು ತಿಂಗಳವರೆಗೆ, ನಮ್ಮ ತಂದೆಯವರು ಸಂಸಾರಕ್ಕಾಗಿ ನನ್ನಿಂದೇನೂ ಅಪೇಕ್ಷಿಸಲಿಲ್ಲ ಮೂರು ತಿಂಗಳಾದ ಕೂಡಲೆ, ತಿಂಗಳಿಗೆ ೨೫ ರೂಪಾಯಿ ಕೊಡಬೇಕೆಂದು ಕೇಳಿದರು. ಅಷ್ಟು ಕೊಡುವುದು ಸುಲಭವಾಗಿತ್ತು. ಮಿಕ್ಕ ಹಣವನ್ನು ಸಂಗ್ರಹಿಸಿಟ್ಟುಕೊಳ್ಳುವುದಕ್ಕೆ ಹೇಳಿದ್ದರು. ಖರ್ಚು ಮಾಡಿದರೂ ಕೇಳುತ್ತಿರಲಿಲ್ಲ ಹೀಗೆ ನನಗೆ ಸೌಕರ್ಯಗಳಿದ್ದ ಕಾರಣ, ನಾನು ವಕೀಲಿ ಬಿಟ್ಟು ದೊಡ್ಡ ಸ್ವಾರ್ಥತ್ಯಾಗ ಮಾಡಿದೆನೆಂಬ ಕಲ್ಪನೆ ಕೂಡ ನನ್ನ ಮನದಲ್ಲಿ ಬರಲಿಲ್ಲ. ಬಹಳಾದರೆ, ವಕೀಲಿಯಲ್ಲಿ ಹಣದ ರಾಶಿಯನ್ನು ಕೂಡಿಸಿಡುವ ಮಹತ್ವಾಕಾಂಕ್ಷೆಯನ್ನು ನಾನು ಬಿಡಬೇಕಾಯಿತು—ಇಷ್ಟೇ ಆಗಿನ ಸ್ಫೂರ್ತಿಯು ನನ್ನನ್ನು ನನಗೂ ತಿಳಿಯದಂತೆ ತಾನಾಗಿಯೇ ಎತ್ತಿ, ಚಳ

ವಳಿಯ ದೊಡ್ಡ ಸೆಳವಿನಲ್ಲಿ ಒಗೆಯಿತು. ಆ ಸೆಳವಿನಗುಂಟ ಹರಿದುಹೋದೆ. ಆ ಸೆಳವಿನಲ್ಲಿ ಸಿಕ್ಕ ಕೂಡಲೆ ನನ್ನ ಆಯುಷ್ಯವೇ ಬದಲಾಯಿತು ಚಹ ಕಾಫಿಗಳನ್ನು ಬಿಟ್ಟೆ, ಆಟ ನೋಟಗಳಲ್ಲಿ ಮನಸ್ಸು ಇಡಲಿಲ್ಲ ಅಂದಿನಿಂದ ಇಂದಿನ ವರೆಗೆ ಇಸ್ಪೇಟು, ಗಂಜೀಪಿ, ಪಗಡಿ ಮುಂತಾದ ಯಾವ ಆಟವನ್ನೂ ಆಡಿರುವುದಿಲ್ಲ ಅದಕ್ಕೆ ಕಾರಣ, ಮ್ಯಾಝಿನಿಯ ಒಂದು ವಾಕ್ಯ ಸಾವರಕರ ಇವರ ಮರಾಠೀ ಮ್ಯಾಝಿನಿ ಚರಿತ್ರೆಯನ್ನು ಕನ್ನಡಿಸಿದ್ದೆ ಇಟಲಿಯ ತರುಣರ ಮೋರೆಯ ಮೇಲೆ ನಗೆಕಳೆ ಇರುವುದು ಕೂಡ ಆತನಿಗೆ ಸಹನವಾಗುತ್ತಿದ್ದಿಲ್ಲವಂತೆ ದೇಶವು ಪರದಾಸ್ಯದಲ್ಲಿ ತೊಳಲುತ್ತ ಸೂತಕಾವಸ್ಥೆಯಲ್ಲಿರುವಾಗ ತರುಣರು ನಗೆಮೊಗದಿಂದ ನಲಿದಾಡುವುದೆಂದರೇನು? ಆಗಿನಿಂದ, ನಾನು ಒಂದು ಕ್ಷಣವನ್ನು ಕೂಡ ಬುದ್ಧಿಪೂರ್ವಕವಾಗಿ ವ್ಯರ್ಥ ಕಳೆದಿಲ್ಲ. ಮನಸ್ಸಿನ ದುರ್ಬಲತೆಯ ಮೂಲಕ ಹಾಗೆ ವ್ಯರ್ಥವಾಗಿ ಕಳೆದಾಗ, ಅಷ್ಟು ಆಯುಷ್ಯವು ವ್ಯರ್ಥವಾಗಿ ಹೋಯಿತಲ್ಲಾ ಎಂಬ ಭಾವನೆಯು ಇನ್ನೂ ವರೆಗೆ ಜಾಗ್ರತವಾಗಿದೆ. ಇರಲಿ. ಹೀಗೆ ನಾನು ವಕೀಲಿಯ ವ್ಯವಸಾಯವನ್ನು ಬಿಟ್ಟು ೧೯೧೧ನೆಯ ಇಸ್ವಿಯ ವರೆಗೆ ಈ ತರಹದ ದೇಶಕಾರ್ಯದಲ್ಲಿ ಸಂಪೂರ್ಣವಾಗಿ ತೊಡಗಿದೆ.

ನಾನು ವಕೀಲಿ ಬಿಟ್ಟಾಗ, ನಮ್ಮ ತಂದೆಯವರಿಂದ ದೊರೆತ ಒಂದು ಉಪದೇಶದ ಸ್ಮೃತಿಯು ಒಳ್ಳೇ ಬೋಧಪ್ರದವಾಗಿದೆ. ಇತ್ತ ನಾನು ರಾಷ್ಟ್ರೀಯ ಶಿಕ್ಷಣದ ಸಿದ್ಧತೆಯಲ್ಲಿ ತೊಡಗಿದಾಗ ನಮ್ಮ ತಂದೆಯವರು ಕಾಶೀಯಾತ್ರೆಗೆ ಹೋಗಿದ್ದರು. ಅವರಿಗೆ ಅಲ್ಲಿಗೆ ಒಂದು ಉದ್ದವಾದ ಪತ್ರ ಬರೆದು, ನಾನು ವಕೀಲಿಯನ್ನು ಬಿಟ್ಟಿರುವೆನೆಂದೂ ಅದಕ್ಕೆ ತಾವು ಸಮ್ಮತಿಸ

ಬೇಕೆಂದೂ ಕೇಳಿಕೊಂಡೆ. ಅದಕ್ಕೆ ಅವರು ಬರೆದ ಉತ್ತರವು ಅತ್ಯಂತ ಮಾರ್ಮಿಕವಾಗಿದೆ ಅದು ಕೊನೆಯ ವರೆಗೆ ನನ್ನ ಹೃದಯದಲ್ಲಿ ನೆಟ್ಟು ಉಳಿದಿದೆ. ಅವರು ಉತ್ತರಕೊಟ್ಟದ್ದೇ ನೆಂದರೆ—"ನೀನು ವಕೀಲಿಯನ್ನು ಬಿಡಲಿಕ್ಕೆ ನನ್ನದೇನೂ ಆತಂಕವಿಲ್ಲ ಆದರೆ ನಾನು ಮನೆತನದಿಂದ ಶ್ರೀಮಂತನಿರು ವೆನೆಂಬ ಭರವಸೆಯ ಮೇಲೆ ನೀನು ವಕೀಲಿ ಬಿಟ್ಟರೆ, ಅದು ನಿನ್ನ ಸ್ವಾರ್ಥತ್ಯಾಗವಾಗಲಿಲ್ಲ, ನನ್ನ ಸ್ವಾರ್ಥತ್ಯಾಗವಾಯಿತು ಆದಕಾರಣ, ಮನೆತನದ ಹಣದ ಮೇಲೆ ಅವಲಂಬಿಸಿ ಬಿಡು ವುದಾದರೆ ಬಿಡಬೇಡ ವಕೀಲಿಯನ್ನು ಬಿಟ್ಟರೂ ನಾನು ಯಾರ ಮೇಲೆಯೂ ಅವಲಂಬಿಸದೆ, ಸ್ವಂತ ಕಾಲಿನ ಮೇಲೆ ನಿಲ್ಲುತ್ತೇನೆಂಬ ಧೈರ್ಯವಿದ್ದರೆ ವಕೀಲಿಯನ್ನು ಬಿಡು. ಇಲ್ಲ ದಿದ್ದರೆ ಬಿಡಬೇಡ ನಾನೇನೂ ಹೊಟ್ಟೆಗೆ ಹಾಕುವೆನೆಂದು ತಿಳಿಯಬೇಡ. ನೀನು ಮುನಸುಫನಾಗಲೇಬೇಕೆಂದೂ ಆಗ್ರಹ ತೊಡುವುದಿಲ್ಲ, ವಕೀಲಿಯಲ್ಲಿ ಬಹಳ ಹಣ ಗಳಿಸಿ ತಮ್ಮಂದಿ ರಿಗೆ ಕೊಡಬೇಕೆಂದೂ ನಾನು ಹೇಳುವುದಿಲ್ಲ. ಸಾರಾಂಶ, ನೀನು ಗಳಿಸು, ನೀನು ಖರ್ಚು ಮಾಡು ಗಳಿಸಿದಷ್ಟರ ಲ್ಲಿಯೇ ಇರುವಂತಿದ್ದರೆ ಇರು"—ಎಂದು ಮುಂತಾದ ಅರ್ಥದ ಪತ್ರ ಬರೆದರು. ಕೂಡಲೆ ನನ್ನ ಕಣ್ಣುಗಳು ಝುಗ್ಗನೆ ತೆರೆ ದವು. ನಿಜವಾಗಿ ಹೇಳುವುದಾದಲ್ಲಿ ನಾನು ವಕೀಲಿಯನ್ನು ಬಿಡುವಾಗ, ನನ್ನ ಹೊಟ್ಟೆಗೆ ತಾಪತ್ರಯವಾಗಲಿಕ್ಕಿಲ್ಲವೆಂಬ ಒಳಭರವಸೆ ಇತ್ತು. ಈ ಅವರ ಉಪದೇಶದಿಂದ ನನ್ನ ತಪ್ಪು ನನಗೆ ಹೊಳೆಯಿತು. ಸ್ವಲ್ಪ ವಿಚಾರಮಾಡಿ ಅವರಿಗೆ ಅವರ ಉಪದೇಶದಂತೆಯೇ ಮಾಡುವೆನೆಂದು ಅಭಿವಚನಕೊಟ್ಟು ಉತ್ತರ ಬರೆದೆ. ಅಂದಿನಿಂದ, ನನ್ನ ಹೆಂಡರುಮಕ್ಕಳ ಹೊಟ್ಟೆಗೆ

ಮನೆತನದ ಆಸ್ತಿಯ ಮೇಲೆ ಅವಲಂಬಿಸಬಾರದೆಂದೂ ಗಳಿಸಿ ದಷ್ಟರಲ್ಲಿಯೇ ಇರಬೇಕೆಂದೂ ಹೊಟ್ಟೆಯ ಮಟ್ಟಿಗೆ ಗಳಿಸುವು ದಾಗದಿದ್ದರೆ, ದೇಶಕಾರ್ಯವನ್ನು ಕೂಡ ಬಿಟ್ಟುಬಿಡಬೇಕೆಂದೂ ನಿರ್ಧರಿಸಿದೆ ನಿರ್ಧರಿಸಿದೆನೇನೋ ಸರಿ; ಅದರಂತೆ ಇರಲಿಕ್ಕೆ ಪ್ರಯತ್ನವನ್ನೇನೋ ಮಾಡಿದೆ, ಮಾಡುತ್ತಿರುವೆ. ಆದರೆ, ನಾನು ನಮ್ಮ ತಂದೆಗೆ ಕೊಟ್ಟ ಅಭಿವಚನದಂತೆ ಇರುವುದಾಗಿರುತ್ತದೆಂದು ನಾನು ಹೇಳಲಾರೆ. ನನ್ನ ಕೈಮೀರಿದ ಅಡಚಣೆಗಳು ಪ್ರಾಪ್ತವಾಗಿ ಕೊಟ್ಟ ಅಭಿವಚನವನ್ನು ನಾನು ಅಕ್ಷರಶಃ ಪಾಲಿಸದಿರುವುದಕ್ಕೆ ಕಾರಣವಾಗಿವೆ. ಆದರೆ ಇಷ್ಟು ಮಾತ್ರ ಹೇಳಬಲ್ಲೆ ನಾನು ಅದಕ್ಕಿಂತ ಹೆಚ್ಚಿನ ಸ್ವಾರ್ಥ ತ್ಯಾಗವನ್ನು ಮಾಡಲು ಎಂದೂ ಇಚ್ಛಿಸಿರುವುದಿಲ್ಲ. ನನ್ನ ಹೊಟ್ಟೆಯನ್ನು ಕಟ್ಟಿಕೊಂಡು, ನನ್ನ ಹೆಂಡರು ಮಕ್ಕಳ ಹೊಟ್ಟೆಯ ಭಾರವನ್ನು ಆಪ್ತೇಷ್ಟರ ಮೇಲೆ ಹಾಕಿ ಎಂದೂ ದೇಶಸೇವೆ ಮಾಡಲು ಬಯಸಲಿಲ್ಲ ಹೀಗೆ ಮಾಡುವ ಪ್ರಸಂಗ ಒದಗಿ, ನನ್ನಿಂದ ಅದಕ್ಕಿಂತ ಹೆಚ್ಚಿನ ಸ್ವಾರ್ಥ ತ್ಯಾಗವು ಆಗಿದ್ದರೆ, ಅದರ ಪುಣ್ಯವು ನನಗಲ್ಲ ಹೀಗೆ ನಾನು ಅನ್ಯರ ಮೇಲೆ ಅವಲಂಬಿಸಬಾರದೆಂಬುದನ್ನು ನಿಶ್ಚಯಿಸಿದ ಕಾಲಕ್ಕೇನೇ ನಾನು ಮತ್ತೂ ಒಂದು ಮಾತನ್ನು ನಿರ್ಧರಿಸಿ ಕೊಂಡೆ. ಅದೇನೆಂದರೆ, ನನ್ನ ಕೈಯಿಂದಲೇ ಖರ್ಚುಮಾಡಿ ಆದಷ್ಟು ಸೇವೆಮಾಡಬೇಕಲ್ಲದೆ, ಕೇವಲ ಯಾವುದೊಂದು ವ್ಯಕ್ತಿಯ ಅಥವಾ ಸಂಸ್ಥೆಯ ಮೇಲೆ ಅವಲಂಬಿಸಿ ದೇಶ ಕಾರ್ಯಮಾಡತಕ್ಕದ್ದಲ್ಲವೆಂದು ನಿಶ್ಚಯಿಸಿದೆ. ಒಬ್ಬರ ಹಂಗಿ ನಲ್ಲಿರುವುದರಿಂದ ಕಾರ್ಯವು ಕೆಡುತ್ತದೆಂದು ನನ್ನ ಅಭಿ ಪ್ರಾಯ.

ನಾನು ವಕೀಲಿ ಬಿಡುವ ಸಂಕಲ್ಪ ಮಾಡಿದ್ದೊಂದೇ ತಡ. ನನ್ನ ಸತ್ವವನ್ನು ಪರೀಕ್ಷಿಸಬೇಕು ಎಂದೋ ಏನೋ ದೇವರು ನನ್ನನ್ನು ಆ ನಿಶ್ಚಯದಿಂದ ಪರಾವೃತ್ತನನ್ನಾಗಿ ಮಾಡುವ ಕೆಲವು ಪ್ರಸಂಗಗಳನ್ನು ನನ್ನ ಮೇಲೆ ತಂದನು ಈ ಅವಧಿಯಲ್ಲಿ ಮೂರು ಸಲ ನನಗೆ ಮೋಹಗಳು ಮುತ್ತಿದವು. ೨೩-೮-೧೯೨೧ನೆಯ ಇಸ್ವಿಯ ದಿವಸ ನನ್ನ ಆಪ್ತರಾದ ತಿರುಮಲರಾವ ದೊಡ್ಡ ವಕೀಲ ಇವರು ತೀರಿಕೊಂಡರು. ಅವರು ವಕೀಲಿಯಲ್ಲಿ ತಿಂಗಳಿಗೆ ೪೦೦-೫೦೦ ರೂಪಾಯಿಗಳನ್ನು ಗಳಿಸುತ್ತಿದ್ದರು ಅವರು ತೀರಿದೊಡನೆಯೇ ಅವರ ವಕೀಲಿ ದಪ್ತರು ನನ್ನ ಕಡೆಗೆ ಬಂದಿತು ಆವರೆ, ಅದೇ ಆಗ, ನಾನು ರಾಷ್ಟ್ರೀಯ ಶಾಲೆಯನ್ನು ತೆಗೆಯುವ ಸಿದ್ಧತೆಯಲ್ಲಿ ತೊಡಗಿದ್ದೆ ಆದಕಾರಣ, ಅತ್ತ ಲಕ್ಷ್ಯಕೊಡಲಿಲ್ಲ ಮುಂದೆ ಕೆಲವು ದಿನಗಳಮೇಲೆ, ರಾಷ್ಟ್ರೀಯ ಶಿಕ್ಷಣಸಂಸ್ಥೆ ಹೊರಟಿತು ಆಗ ಮತ್ತೊಂದು ದೊಡ್ಡ ಆಶೆಯು ನನ್ನನ್ನು ತನ್ನ ಬಲೆಯಲ್ಲಿ ಹಿಡಿಯಲೆತ್ನಿಸಿತು ನಾನು ಒಂದು ದಿವಸ ಹಳ್ಯಾಳಕ್ಕೆ ರಾಷ್ಟ್ರೀಯ ಶಾಲೆಯನ್ನು ಸ್ಥಾಪಿಸುವುದಕ್ಕೆ ಬೇಕಾಗುವ ಫಂಡನ್ನು ಕೂಡಿಸುವುದಕ್ಕೆಂದು ಹೋಗಿದ್ದೆ. ಅಲ್ಲಿ ಹೋದಾಗ ನಾನು ವಕೀಲನೆಂಬುದು ತಿಳಿದ ಕೂಡಲೆ, ೨೫-೩೦ ಜನರು ನನ್ನ ಕಡೆಗೆ ಬಂದು ತಮ್ಮೆಲ್ಲರ ಖಟ್ಲೆಗಳನ್ನು ನಾನು ಹಿಡಿಯಬೇಕೆಂದೂ, ಕೇವಲ ಅರ್ಜಗಳನ್ನು ಕೊಟ್ಟು ಮುದ್ದತು ಕೇಳಿಕೊಂಡರೆ ಸಾಕೆಂದೂ ನನಗೆ ಹೇಳಿಕೊಂಡರು ಅದಕ್ಕೆ ಕಾರಣವೆಂದರೆ, ಹಳ್ಯಾಳದಲ್ಲಿ ಕೋರ್ಟು ನಡೆಯುವುದು ಅದು ಕೊನೆಯ ವರುಷವಾಗಿತ್ತು. ಅದರ ಮುಂದಿನ ವರ್ಷ ಹಳ್ಯಾಳದಲ್ಲಿಯ ಖಟ್ಲೆಗಳೆಲ್ಲ ಧಾರವಾಡ ಕೋರ್ಟಿಗೆ ಬರತಕ್ಕವು. ಆದಕಾರಣ, ಆ ವರ್ಷ ಪ್ರತಿ

ವರ್ಷ ಬರುವಂತೆ, ಶಿರಶಿಯಿಂದ ವಕೀಲರು ಹಳ್ಯಾಳಕ್ಕೆ ಬಂದಿರ
ಲಿಲ್ಲ ಆವಕಾರಣವೇ ಯಾರೊಬ್ಬ ಧಾರವಾಡದ ವಕೀ
ಲರು ಅವರಿಗೆ ಬೇಕಾಗಿದ್ದರು ಅನಾಯಾಸವಾಗಿ ನಾನು
ಸಿಕ್ಕೆ ನನ್ನನ್ನು ಅವರು ಕೇಳಿಕೊಂಡರು. ಆಗ, ತಪಸ್ಸಿಗೆ
ಕುಳಿತಾಗ, ದೆವ್ವಭೂತಗಳೂ ಅಪ್ಸರೆಯರೂ ಬಂದು ತಪಸ್ಸು
ಕೆಡಿಸಲಿಕ್ಕೆ ಪ್ರಯತ್ನಿಸುತ್ತಾರೆಂಬುದರ ಅರ್ಥವು ನನಗೆ ಹೊಳ
ಯಿತು ನಾನು ಆ ಮೋಹವನ್ನೂ ಆವರಿಸಿದೆ ನನ್ನ
ವಕೀಲಿ ದಪ್ತರನ್ನು ಮುದವೇಡೇಕರ ವೆಂಕಟರಾಯರಿಗೆ
ಮೊದಲೇ ಕೊಟ್ಟಿದ್ದೆ. ಹಾಯಕೋರ್ಟಿನ ಸನದುಳ್ಳ ಗಾಯ
ತೊಂಡೆಯವರೊಂದಿಗೆ ಮುದವೇಡೇಕರ ಇವರು ಹೋಗಿ,
ಅಲ್ಲಿ ವಕಾಲತ್ತು ಹಾಜರು ಮಾಡಿಸಿ, ಮುದ್ದತು ತೆಗೆದು
ಕೊಂಡು ಬಂದರು ಹೀಗೆ, ಎರಡನೆಯ ಕುತ್ತಿನೊಳಗಿಂದಲೂ
ಪಾರಾದೆ ಮುಂದೆ ಸ್ವಲ್ಪ ದಿನಗಳಲ್ಲಿ ಮತ್ತೊಮ್ಮೆ ಪರೀಕ್ಷೆಯ
ಕಾಲವು ಒದಗಿತು. ೧೯೧೦ನೆಯ ಇಸ್ವಿಯಲ್ಲಿ ನನ್ನ ರಾಷ್ಟ್ರೀಯ
ಶಾಲೆಯು ಸಂಪುಷ್ಟದಲ್ಲಿ ಬಂದಿತ್ತು. ಮುಂದೇನು ಮಾಡ
ಬೇಕೆಂಬುದು ತೋಚದಾಗಿತ್ತು. ವಕೀಲಿಯನ್ನು ಕೈಕೊಳ್ಳದೆ
ಮತ್ತಾವುದೊಂದು ದೇಶಸೇವಾ ಕಾರ್ಯವನ್ನು ಕೈಕೊಳ್ಳ
ಲಿಕ್ಕೆ ಪ್ರಯತ್ನಿಸುತ್ತಿದ್ದೆ. ಇಷ್ಟರಲ್ಲಿ, ಹಾವೇರಿಯಲ್ಲಿ
ನಮ್ಮ ಕಕ್ಕ ರಾಘವೇಂದ್ರರಾಯರ ಬೀಗರಾದ ತೊರ
ಗಲ್ಲ ಕೃಷ್ಣರಾಯರೆಂಬ ವಕೀಲರು ತೀರಿಕೊಂಡ ಸುದ್ದಿ
೧೯೧೦ನೆಯ ಪ್ರಾರಂಭಕ್ಕೆ ಬಂದಿತು. ಅವರು ಆ ಊರಿನ
ದೊಡ್ಡ ವಕೀಲರಲ್ಲೊಬ್ಬರು. ಅವರ ದಪ್ತರನ್ನು ಮುಂದೆ
ನಡಿಸುವವರು ಆಗ ಯಾರೂ ಇರಲಿಲ್ಲ. ಆದಕಾರಣ, ನಮ್ಮ
ಕಕ್ಕ ರಾಘವೇಂದ್ರರಾಯರು ಆ ದಪ್ತರನ್ನು ನನಗೆ ಕೊಡು

ವುದನ್ನು ಗೊತ್ತುಮಾಡಿಕೊಂಡೇ ಬಂದರು ನಾನು ಅಲ್ಲಿಗೆ ಹೋಗಲಿಕ್ಕೆ ತಪ್ಪಿಸಹತ್ತಿದೆ. ಹೇಗೂ ಶಾಲೆಯು ಮುರಕಳಿಯು ಸ್ಥಿತಿಗೆ ಬಂದಿದೆ, ಅಂದ ಮೇಲೆ ನೀನೇಕೆ ಹೋಗಬಾರದು ಎಂದು ನನ್ನ ಮನಸ್ಸನ್ನು ಒಲಿಸಹತ್ತಿದರು. ನಾನು ಒಪ್ಪಲಿಲ್ಲ. ಎರಡು ತಿಂಗಳುಗಳ ವರೆಗೆ ಅವರು ಹಾದೀ ನೋಡಿ, ಕೊನೆಗೆ ಅದನ್ನು ಎರಡನೆಯವರಿಗೆ ಒಪ್ಪಿಸಿಕೊಟ್ಟರು ೬-೨-೧೯೧೦ನೆಯ ಇಸ್ವಿಯ ನನ್ನ ಡಾಯರಿಯಲ್ಲಿ ಈ ಮುಂದಿನ ವಾಕ್ಯಗಳಿವೆ. "ನನಗೆ ಇದರೊಳಗೇ ಆನಂದ ಹೆಚ್ಚು ಆದೆ, ನನಗೆ ವಕೀಲಿ ಬೇಡೇ ಆದ ಮೇಲೆ ಎಷ್ಟು ದುಡ್ಡು ಅಲ್ಲಿ ಸಿಕ್ಕರೇನು? ಒಮ್ಮೆ ಮನಸ್ಸು ನಿಶ್ಚಯಮಾಡೀನಿ.' ಇರಲಿ.

**ಪುನಃ ವಕೀಲಿಗೆ ಪ್ರಾರಂಭ** (೧೯೧೧)—ಆದರೆ, ಹೀಗೆ ಅನೇಕ ಸಲ ಪಾರಾದರೂ ಕೊನೆಗೆ ವಕೀಲಿಯು ನನ್ನ ಕೊರಳಿಗೆ ಬಂದೇ ಬಂದಿತು. ಇದಕ್ಕೆ ಅರ್ಥಾತ್ ನನ್ನ ಮನೋದೌರ್ಬಲ್ಯವೂ ಕಾರಣ ರಾಷ್ಟ್ರೀಯ ಶಾಲೆಯನ್ನು ಮುಳುಗಿಸಗೊಡದಿರುವುದಕ್ಕೆ ನಾನು ವಿಶ್ವಪ್ರಯತ್ನವನ್ನೇನೋ ಮಾಡಿದೆ. ಆದರೆ, ಸಂಕಲ್ಪವು ಮನುಷ್ಯಾಧೀನ, ಅದರ ಸಫಲತೆಯು ಈಶ್ವರಾಧೀನ. ಸಂಸ್ಥೆಗಳನ್ನು ನಡಿಸುವುದಕ್ಕೆ ಸುತ್ತಲಿನ ಪರಿಸ್ಥಿತಿಯ ಅನುಕೂಲತೆಯೂ ಇರಬೇಕಾಗುತ್ತದೆ ಮುಂಚೆ ಅಭಿವಚನಕೊಟ್ಟ ಧಾರವಾಡದ ಸದ್ಗೃಹಸ್ಥರು ವಚನದಂತೆ ನಡೆಯಲಿಲ್ಲ ಈ ತರಹದ ಸ್ಥಿತಿಗೆ ಬೇಸತ್ತು ನನ್ನ ಮಿತ್ರರಾದ ಕಾವ್ಯಾನಂದರು (ಪುಣೇಕರ ನರಸಿಂಹಾಚಾರ್ಯರು) ನನ್ನ ವಿಷಯವಾಗಿ ಕರ್ನಾಟಕವೃತ್ತದಲ್ಲಿ ೭—೧೨—೧೯೦೯ನೆಯ ದಿವಸ "ವಿದ್ವಾನೇವ ವಿಜಾನಾತಿ

ವಿದ್ವಜ್ಜನಪರಿಶ್ರಮಂ। ನ ಹಿ ವಂಧ್ಯಾ ವಿಜಾನಾತಿ ಗುರ್ವೀಂ ಪ್ರಸವವೇದನಾಂ " ಎಂಬ ಲೇಖವನ್ನು ಬರೆದು ಧಾರವಾಡಸ್ಥರನ್ನು ಎಚ್ಚರಿಸುವುದಕ್ಕೆ ಕೊನೆಯು ಪ್ರಯತ್ನ ಮಾಡಿದರು ಆದರೆ ಸಾಧ್ಯವಾಗಲಿಲ್ಲ ಅದಕ್ಕಿಂತ ಹೆಚ್ಚಿನ ತೊಂದರೆಯೆಂದರೆ, ವಿದ್ಯಾರ್ಥಿಗಳದೇ ಅಭಾವ ಸರಕಾರ ದವರ ದಬ್ಬಾಳಿಕೆಯ ಮೂಲಕ, ವಿದ್ಯಾರ್ಥಿಗಳೇ ಸಾಲೆಗೆ ಬರವಾದರು ಅಂದಬಳಿಕ, ಶಾಲೆಯಲ್ಲಿ ಕುಳಿತು ಉದ್ದು ಹುರಿಯುವುವೇನು ? ಆವಕಾರಣ ೧೯೧೧ರಲ್ಲಿ ಪುನಃ ನಾನು ಮುದವೇಡೆಕರ ವೆಂಕಟರಾಯರೊಂದಿಗೆ ಪಾಲಿನಿಂದ ವಕೀಲಿ ಪ್ರಾರಂಭಿಸಿದೆ

**ಬಡೋದೆಯ ಗಂಗನಾಥ ಭಾರತೀಯ ವಿದ್ಯಾಲಯದ ಸ್ಮೃತಿ:**— ವಕೀಲಿ ಪ್ರಾರಂಭಮಾಡುವ ಮುಂಚೆ, ಸನ್ನ ೧೯೧೦ನೆಯ ಇಸ್ವಿಯ ಪ್ರಾರಂಭಕ್ಕೇನೇ ಒಮ್ಮೆ ಬಡೋದೆಗೆ ಗಂಗನಾಥ ಭಾರತೀಯ ವಿದ್ಯಾಲಯಕ್ಕೆ ಹೋಗುವ ಪ್ರಸಂಗ ಬಂದಿತ್ತು. ಅದು ಬಡೋದೆಯಲ್ಲಿಯ ರಾಷ್ಟ್ರೀಯ ಶಾಲೆಯು. ಮಹಾರಾಷ್ಟ್ರದ ಕೇಂದ್ರಸಂಸ್ಥೆಯು ಅದು. ಅದಕ್ಕೆ ನಾನು ಸುಪರಿಂಟೆಂಡೆಂಟನಾಗಲಿಕ್ಕೆ ಬರಬೇಕೆಂದು ಬಡೋದೆಯಿಂದ ತಂತಿ ಬಂದಿತು. ಅಲ್ಲಿಗೆ ಹೋಗಲಿಕ್ಕೆ ೧-೧-೧೯೧೦ ನೆಯ ಇಸ್ವಿಯ ದಿವಸ ಹೊರಟೆ ಪುಣೆಯಲ್ಲಿ ಇಳಿದು ಕೇಳಕರ, ಬಾಬಾ ಪರಾಂಜಪೆ, ಲಕ್ಷ್ಮಣರಾವ ಭೋಪಟಕರ ಇವರ ಭೆಟ್ಟಿ ತೆಗೆದುಕೊಂಡೆ. ಬಡೋದೆಯ ಶಾಲೆಯನ್ನು ನಾನು ಸೇರಕೂಡದೆಂದು ಅವರು ಅಭಿಪ್ರಾಯಕೊಟ್ಟರು. ಏಕೆಂದರೆ ಇಲ್ಲಿ ನನ್ನ ಹೆಸರು ಕರೇಪಟ್ಟಿ ( Black List ) ಯಲ್ಲಿದ್ದಕಾರಣ, ನಾನು ಅಲ್ಲಿಗೆ ಹೋದರೆ ಆ ಶಾಲೆಗೂ

ಧಕ್ಕೆ ತಗಲಬಹುದೆಂದು ಅಂಜಿಕೆ. ರಾ. ಬ ಜಿ ವ್ಹಿ. ಜೋಸಿ, ವಾಸುಕಾಕಾ ಇವರೊಂದಿಗೆ ಮುಂಬಯಿಗೆ ಬಂದೆ ರಾಷ್ಟ್ರ ಮತ ಆಫೀಸಿನಲ್ಲಿ ಇಳಿದೆ. ಆ ದೈನಿಕ ಪತ್ರಕ್ಕೆ ನನ್ನ ಮಿತ್ರರಾದ ಗಂಗಾಧರರಾವ ದೇಶಪಾಂಡೆಯುವರು ಮ್ಯಾನೇಜರರಾಗಿದ್ದರು. ಕಾಲಿಲಕರ (ಈಗಿನ ಕಾಕಾ ಕಾಲಿಲಕರ) ಇವರು ಎಲ್‌ಎಲ್. ಬಿ. ಅಭ್ಯಾಸಕ್ಕೆಂದು ಬಂದು ರಾಷ್ಟ್ರ ಮತದಲ್ಲಿ ಕೆಲಸಮಾಡುತ್ತಿದ್ದರು ಮುಂಬಯಿಯಲ್ಲಿ ಡಾ॥ ಗೋಪಾಳರಾವ ದೇಶಮುಖ ಇವರ ಸಲಹೆ ತೆಗೆದುಕೊಂಡು ಬಡೋದೆಗೆ ಹೋದೆ. ಬ್ಯಾ ಕೇಶವರಾವ ದೇಶಪಾಂಡೆ ಎಂಬ ಜಡ್ಜರು ಗಂಗನಾಥ ಭಾರತೀಯ ವಿದ್ಯಾಲಯಕ್ಕೆ ತಮ್ಮ ಸಂಬಳದೊಳಗಿಂದ ತಿಂಗಳಿಗೆ ೬೦೦-೭೦೦ ರೂಪಾಯಿಗಳನ್ನು ಕೊಡುತ್ತಿದ್ದರು. ಆ ಶಾಲೆಯನ್ನು ನೋಡಿದೆ. ಸುಮಾರು ೨೦೦-೫೦ ವಿದ್ಯಾರ್ಥಿಗಳಿದ್ದರು. ನಾಲ್ಕೂ ಕಡೆಯಿಂದ, ವೀರದೇಶಭಕ್ತರಾಗುವ ತರುಣರಿಗೆ ಅದು ನೆಲೆಯಾಗಿತ್ತು. ಆ ಸಂಸ್ಥೆಯನ್ನು ನೋಡಿ ನನಗೆ ಆನಂದವಾಯಿತು. ಅಂಥ ಸಂಸ್ಥೆಗೆ ಹೆಡ್‌ಮಾಸ್ತರನಾಗಿ ಕೆಲಸಮಾಡುವುದು ಒಂದು ಮಾನವೆಂದು ಹಾಗೆ ಮಾಡುವುದಕ್ಕೆ ಮನಸ್ಸು ಹಾತೊರೆಯಿತು. ಆದರೆ, ಪುಣೆ, ಮುಂಬಯಿ ಮುಖಂಡರು ನಾನು ಆ ಶಾಲೆಯನ್ನು ಸೇರಬಾರದೆಂದು ಕೊಟ್ಟ ಸಲಹೆಯು ನನಗೆ ಅಡ್ಡಬಂದಿತು. ಆ ಸಲಹೆಯನ್ನು ಬ್ಯಾರಿಸ್ಟರ ದೇಶಪಾಂಡೆಯವರಿಗೆ ತಿಳಿಸಿದೆ. ಅವರೂ ಯೋಚನೆಯಲ್ಲಿ ಬಿದ್ದರು. ಇದಲ್ಲದೆ, ಧಾರವಾಡದ ಶಾಲೆಯು ಇನ್ನೂ ನಿಂತಿರಲಿಲ್ಲ. ಅದನ್ನು ಊರ್ಜಿತಾವಸ್ಥೆಗೆ ತರುವ ಆಶೆಯು ಇನ್ನೂ ಪೂರಾ ಅಳಿದಿದ್ದಿಲ್ಲ. ಕರ್ನಾಟಕವನ್ನು ಬಿಟ್ಟುಹೋಗಲು ಮನಸ್ಸು ಒಪ್ಪ

ಲಿಲ್ಲ ಕರ್ನಾಟಕವು ನನ್ನನ್ನು ಹೊರಗೆ ಹಾಕುವ ವರೆಗೆ ನಾನು ಮತ್ತೆಲ್ಲಿಯೂ ಹೋಗಲಿಚ್ಛಿಸುವುದಿಲ್ಲನೆಂದು ಬ್ಯಾ ದೇಶ ಪಾಂಡೆಯವರಿಗೆ ಹೇಳಿದೆ ೮-೧-೧೯೧೨ನೆಯ ದಿವಸದ ನನ್ನ ಕನ್ನಡ ಡಾಯರಿಯಲ್ಲಿ "Unless Karnatak drives me out, I shall not leave Karnatak ಎಂದು ಇಂಗ್ಲಿಷಿನಲ್ಲಿ ಬರೆದ ವಾಕ್ಯವು ನನಗೆ ಈಗ ಸಿಕ್ಕಿದೆ ಅದರಿಂದ, ಆಗಿನ ನನ್ನ ವಿಚಾರವು ತಿಳಿಯಬರುವುದು "ಹಾಗೇ ಆಗಲಿ, ಎರಡನ ಯವರು ಸಿಕ್ಕರೆ ಒಳಿತಾಯಿತು, ಇಲ್ಲದಿದ್ದರೆ ಕಂತೀಕೊಡು ತ್ತೇನೆ ಆಗ ಮಾತ್ರ ಬರಲೇಬೇಕು'' ಎಂದು ದೇಶಪಾಂಡೆ ಯರು ಹೇಳಿದರು. ನಾನು ತಿರುಗಿ ಧಾರವಾಡಕ್ಕೆ ಹೊರಟೆ ಮುಂಬಯಿಯಲ್ಲಿ ಕಾಲಿಲಕರ ಇವರಿಗೆ ಬಡೋದೆಗೆ ಹೋಗುವುದಕ್ಕೆ ಸೂಚಿಸಿದೆ. ವಿಚಾರಮಾಡುತ್ತೇನೆಂದು ಅವರು ಅಂದರು ನಾನು ತಿರುಗಿ ಧಾರವಾಡಕ್ಕೆ ಬಂದೆ; ಅವರು ಆ ವಿದ್ಯಾಲಯಕ್ಕೆ ಹೋದರು ಆದರೆ, ಮುಂದೆ ಆ ಶಾಲೆಗೂ ರಾಜದ್ರೋಹದ ಮುದ್ರೆಬೀಳುವುದು ತಪ್ಪಲಿಲ್ಲ ಅದೂ ನಿಂತುಹೋಯಿತು

ಆ ಬಳಿಕ, ಪುಣೆಯ ಡಿ ವ್ಹಿ ಆಪಟೆ ಮುಂತಾದ ನನ್ನ ಮಿತ್ರರು ಗೋವೆಯಲ್ಲಿ ಶಾಲೆ ತೆಗೆಯುವ ಪ್ರಯತ್ನಮಾಡಿದರು ಅದೂ ಹೊರಡಲಿಲ್ಲ. ಆಗ ಮುಂದೇನು ಮಾಡಬೇಕೆಂಬುದು ತೋಚದೆ, ಸುಮ್ಮನೆ ಕುಳಿತುಕೊಳ್ಳುವುದಕ್ಕೆ ಧೈರ್ಯ ಸಾಲದೆ ನಿರುಪಾಯವಾಗಿ ಪುನಃ ವಕೀಲಿ ಉದ್ಯೋಗವನ್ನು ಕೈಕೊಂಡೆ. ನನಗೆ ವಕೀಲಿ ಉದ್ಯೋಗವನ್ನು ಮಾಡುವ ಬಾಗಿಲು ತೆರೆ ದಿತ್ತೆಂದು ಅದರಲ್ಲಿ ಹೊಕ್ಕೆ ಆ ಬಾಗಿಲು ತೆರೆದಿರದಿದ್ದರೆ, ನಾನು ಮತ್ತೇನನ್ನಾದರೂ ಮಾಡುತ್ತಿದ್ದೆನೋ ಏನೋ?

**ರಾಷ್ಟ್ರೀಯ ಶಾಲೆಯ ಸ್ಮೃತಿ:**—ನಾನು ವರ್ಷಾರು ತಿಂಗಳ ವಕೀಲಿ ಮಾಡಿದ ದುಡ್ಡು ಬ್ಯಾಂಕಿನಲ್ಲಿ ಇಟ್ಟು ಕೊಂಡಿದ್ದೆ ಆದಕಾರಣ ರಾಷ್ಟ್ರೀಯ ಶಾಲೆ ನಡಿಸುವಾಗ, ಅರ್ಥಾತ್, ನಾನು ಸ್ವಂತಕ್ಕೆ ಏನೂ ಸಂಬಳ ತೆಗೆದುಕೊಳ್ಳಲಿಲ್ಲ ನಾರಾಯಣ ಸುಬ್ಬರಾವ ಹರ್ಡೀಕರ ಇವನು ಹುಬ್ಬಳ್ಳಿಯಿಂದ ಮೇಲಿಂದ ಮೇಲೆ ಬಂದು ವ್ಯಾಯಾಮ ಕಲಿಸುತ್ತಿದ್ದನು ಆತ ನಿಗೂ ನಾನು ಏನೂ ಸಂಬಳ ಕೊಡಲಿಲ್ಲ ರಾಜಪುರೋ ಹಿತರು ನಮ್ಮ ಮನೆಯಲ್ಲಿಯೇ ವಾಸಮಾಡಿಕೊಂಡು ಮನೆ ಯವರಂತೆ ಇದ್ದರು ಊಟಕ್ಕೆ ಹೊರಗೆ ಹೋಗುತ್ತಿದ್ದರು ಭಾವಿಕಟ್ಟಿ ತಮ್ಮಣಭಟ್ಟರು, ಜೋಶಿ, ದೇಶಪಾಂಡೆ ಮುಂತಾದ ೫-೬ ಜನರಿಗೆ ಅಲ್ಪಸ್ವಲ್ಪ ಸಂಬಳ ಕೊಡುತ್ತಿದ್ದೆ. ಶಾಲೆಯು ದೊಡ್ಡ ಪ್ರಮಾಣದಲ್ಲಿ ಹೊರಟದ್ದರಿಂದ ವಸತಿಗೃಹ,ಉದ್ಯೋಗ ಧಂದೆಗಳು ಮುಂತಾದವುಗಳಿಗಾಗಿ ಬಹಳ ಹಣ ಬೇಕಾಗು ತ್ತಿತ್ತು. ಶಾಲೆಗೆ ಹಣ ಕೂಡಿಸಬೇಕಾದರೆ ಸಾಕುಬೇಕಾಗಿ ಹೋಗುತ್ತಿತ್ತು ಜನದಲ್ಲಿ ಜಾಗ್ರತಿ ಇದ್ದಿಲ್ಲ; ನನ್ನ ಸ್ವಭಾವವೂ ಫಂಡು ಕೂಡಿಸಲಿಕ್ಕೆ ಅನುಕೂಲವಾದುದಲ್ಲ. ಆಗರಖೇಡದವರು ಮಾತ್ರ ನಾನೂ ಬಿಂದೂರಾಯರೂ ಹೋದಾಗ ಸುಮಾರು ಸಾವಿರರೂಪಾಯಿಗಳ ಅಭಿವಚನ ಕೊಟ್ಟು ಎಷ್ಟೋ ಹಣ ಕೊಟ್ಟರು. ಮುಂದೆ ಶಾಲೆಯೇ ನಿಂತುಹೋದಕಾರಣ, ಕೇಳುವ ಪ್ರಸಂಗವೇ ಬರಲಿಲ್ಲ. ರಾಷ್ಟ್ರೀಯಶಾಲೆ ಪ್ರಾರಂಭವಾದ ದಿವಸವೇ ಆಗ ತೀರ ಚಿಕ್ಕ ಬಾಲಕನಾಗಿದ್ದ ಬೇಂದ್ರೆ ದತ್ತು ಇವನು ಅಲ್ಲಿ ಭಾಷಣ ಮಾಡಿದುದರ ನೆನಪನ್ನು ಆತನು ಮೊನ್ನೆಮೊನ್ನೆ ಕೊಟ್ಟನು.

**ಅನಂತರಾವ ದಾಭಡೆ ಇವರ ಸ್ಮೃತಿ:—** ಸ್ವದೇಶೀ ಚಳವಳಿಯಲ್ಲಿಯೂ ರಾಷ್ಟ್ರೀಯ ಶಾಲೆಯ ಚಳವಳಿಯಲ್ಲಿಯೂ ಅನಂತರಾವ ದಾಭಡೆ ಎಂಬವರು ಅಗ್ರಗಣ್ಯರಾಗಿದ್ದರು ಅವರು ವಿಶೇಷ ಕಲಿತವರಲ್ಲ ಆದರೆ, ಅತ್ಯಂತ ಹುರುಪಿನವರು, ಮೈಮುರಿದು ಕೆಲಸಮಾಡುವವರು. ಅವರು ವಿಜಾಪುರ ಜಿಲ್ಲೆಯನ್ನು ಬಿಟ್ಟು, ನನ್ನ ಹತ್ತಿರವೇ ಇದ್ದು ರಾತ್ರಿಹಗಲು ದುಡಿಯುತ್ತಿದ್ದರು ಬಹುಶಃ ನನ್ನ ಮನೆಯಲ್ಲಿಯೇ ಇರುತ್ತಿದ್ದರು ಜನಸಾಮಾನ್ಯದಲ್ಲಿ ಜಾಗ್ರತಿ ಮಾಡುವ ಕಲೆಯು ಅವರಿಗೆ ಒಳ್ಳೇ ಸಾಧಿಸಿತ್ತು ಅವರಿಗೆ ನಾನು ಹುಬ್ಬಳ್ಳಿಗೆ ಒಂದು ಸೀಝನ್ ತಿಕೀಟು ತೆಗಿಸಿ ಕೊಟ್ಟಿದ್ದೆ ದಿನಾಲು ಯಾವತ್ತು ಗಾಡಿಗಳಲ್ಲಿ ಪ್ರವಾಸಮಾಡಿ, ಪ್ರತಿನಿತ್ಯ ೧೦-೧೫ ರೂಪಾಯಿ ಫಂಡು ವಸೂಲು ಮಾಡದೆ ಬರುತ್ತಿರಲಿಲ್ಲ ಈ ಯುಕ್ತಿಯಿಂದ ಅನಾಯಾಸವಾಗಿ ಫಂಡು ಕೂಡುತ್ತಿತ್ತು ಅವರು ನನಗೆ ಒಳ್ಳೇ ಆಧಾರನಾಗಿದ್ದರು

**ನನ್ನ ಔದ್ಯೋಗಿಕ ಚಟುವಟಿಕೆಗಳು** — ವಸ್ತುತಃ ನನಗೂ ಉದ್ಯೋಗ ಧಂದೆಗಳಿಗೂ ಸಂಬಂಧ ಬರುವ ಕಾರಣವಿದ್ದಿಲ್ಲ ಏಕೆಂದರೆ ನನ್ನ ಮುಖ್ಯ ವ್ಯವಸಾಯವು ಬೌದ್ಧಿಕ ವ್ಯವಸಾಯವು ಆದರೆ, ಸ್ವದೇಶಿ ಯುಗದ ಮುಖ್ಯ ಲಕ್ಷಣವು ಉದ್ಯೋಗ ಧಂದೆಗಳಿಗೆ ಉತ್ತೇಜನ ಕೊಡುವುದೇ ಆಗಿತ್ತು. ಈ ಕಾರಣದಿಂದ, ನನಗೂ ಉದ್ಯೋಗ ಧಂದೆಗಳಿಗೂ ಗಂಟು ಬಿತ್ತು ಅನೇಕ ಉದ್ಯೋಗ ಧಂದೆಗಳನ್ನು ತೆಗೆದೆ, ತೆಗೆಯಿಸಿದೆ. ಬಹುಶಃ ಎಲ್ಲದರಲ್ಲಿಯೂ ಮುಳುಗಿದೆ. ಬಡೋದೆಯ ಗಾಯಕವಾಡ ಮಹಾರಾಜರ ಆಶ್ರಯದಲ್ಲಿ ಘಾಸವಾಲಾ ಎಂಬವರು ಸಕ್ಕರೆ ಕಾರಖಾನೆ ತೆಗೆದರು ಕೂಡಲೆ ನಾನೂ

ತಂದೆಯವರೂ ಎರಡು ನೂರು ರೂಪಾಯಿಗಳ ಶೇರುಗಳನ್ನು ತೆಗೆದುಕೊಂಡೆವು ಆ ಕಂಪನಿಯು ದಿವಾಳಿ ತೆಗೆದು ಆ ಶೇರುಗಳು ಮುಳುಗಿಹೋದವು ೧೯೦೭ರಲ್ಲಿ ನಾವು ೬-೭ ಜನರು ಕೂಡಿ ಖಾನಾಪುರದಲ್ಲಿ ಮಂಗಳೂರ ಹಂಚಿನ ಕಾರಖಾನೆ ತೆಗೆದೆವು ನನ್ನ ತಮ್ಮ ರಾಮು ಇವನು ೨೫೦ ರೂಪಾಯಿ ಹಾಕಿ ಕಾರಖಾನೆಯ ಡಾಯರೆಕ್ಟರರಲ್ಲಿ ಒಬ್ಬನಾದನು ಕಾರಖಾನೆ ಹೊರಟಿತು ಹಂಚುಗಳು ಹುಟ್ಟಿದವು ಇಷ್ಟಾಗುವುದರೊಳಗೆ ಭಂಡವಲವೆಲ್ಲವೂ ಕರಗಿಹೋಯಿತು ಆಗ, ನಮ್ಮ ದುಡ್ಡನ್ನೆಲ್ಲ ಕಳೆದುಕೊಂಡು, ಆ ಕಾರಖಾನೆಯನ್ನು ಪೆನಶನ್ ಮಾಮಲೇದಾರ ನಾಯ್ಕ ಇವರ ಕೊರಳಿಗೆ ಕಟ್ಟಿದೆವು ಅವರು ಇನ್ನೂ ಅದನ್ನು ನಡೆಸುತ್ತಿರುವರು. ಆಲೂರಲ್ಲಿ ಜಿನ್ನು ಹಾಕಿದೆವು ಮುಂದೆ ಅದರೊಳಗಿನ ಪಾಲು ತಿರುಗಿ ತಕ್ಕೊಂಡು, ಧಾರವಾಡದಲ್ಲಿ ಜವಳಿ ಅಂಗಡಿ ಹಾಕಿದೆವು. ಆಲೂರ ಹತ್ತರ ಮೆಣಸಿಗಿಯಲ್ಲಿ ಕಬ್ಬು ಮುಂತಾದ್ದನ್ನು ಬೆಳೆದು, ಸಕ್ಕರೆ ಮಾಡುವ ಉದ್ದೇಶದಿಂದ ಬಾಗಲಕೋಟೆಯಲ್ಲಿ ಜಯರಾವ ನರಗುಂದ, ಗೋವಿಂದರಾವ ಛಬ್ಬಿ ಮುಂತಾದವರು ೧೯೦೮ ಜುಲೈಯಲ್ಲಿ ಕೃಷಿಕರ್ಮೋತ್ತೇಜಕ ಮಂಡಲವೆಂಬುದೊಂದು ಕಂಪನಿಯನ್ನು ತೆಗೆದರು. ಅವರಿಗೆ ಮುಂಚೆ ಸಾಲ ಬೇಕಾಯಿತು. ಧಾರವಾಡದ ಸದರ್ನ ಮರಾಠಾ ಬ್ಯಾಂಕಿನಲ್ಲಿ ನನ್ನ ಹೆಸರಿನಲ್ಲಿ ೨೦೦೦ ರೂಪಾಯಿ ಸಾಲ ತೆಗೆದು ಜಯರಾವ ನರಗುಂದ ಇವರಿಗೆ ಕೊಟ್ಟೆ. ಮುಂದೆ ಆ ಕಂಪನಿ ಮುಳುಗಿತು. ಸಾಲದ ಬಗ್ಗೆ ಬ್ಯಾಂಕಿನ ಒತ್ತಾಯವಾಯಿತು ಪುಣ್ಯಕ್ಕೆ ನನ್ನ ಮೈಮೇಲೆ ಬರಲಿಲ್ಲ. ನರಗುಂದ ಇವರು ಅದನ್ನು ಅಂತೂ ಇಂತೂ ತೀರಿಸಿದರು.

ಧಾರವಾಡದಲ್ಲಿ ಅಲ್ಪಧನಸಮುಚ್ಚಯ ಪರಸ್ಪರ ಸಹಾಯಕ ಮಂಡಲವೆಂಬ ಅಂಗಡಿ ಹೊರಟಿತ್ತು ಅದೂ ಮುಳುಗಿತು. ಅದಕ್ಕೆ ಮಾತ್ರ ನನ್ನ ಸಂಬಂಧವಿದ್ದಿಲ್ಲ

**ದೀಪದ ಕಡ್ಡಿಯ ಕಾರಖಾನೆ** — ೧೯೦೮ನೆಯ ಇಸ್ವಿಯ ಯುಗಾದಿಯ ದಿವಸ, ಧಾರವಾಡದಲ್ಲಿ ದೀಪದ ಕಡ್ಡಿಯ ಕಾರಖಾನೆ ಹೊರಟಿತು. ೧೯೦೯ನೆಯ ಇಸ್ವಿಯ ಯುಗಾದಿಯ ದಿವಸ ಶೀಸ್‌ಪೆನ್ಸಿಲಿನ ಕಾರಖಾನೆ ಹೊರಟಿತು. ಅವುಗಳನ್ನು ಹೊರಡಿಸುವುದರಲ್ಲಿ ನನ್ನ ಮುಖ್ಯ ಭಾಗವಿತ್ತು ನನ್ನ ಬಾಲ ಮಿತ್ರನಾದ ಆಳಗವಾಡಿ ರಾಮು ಇವನು ದೀಪದ ಕಡ್ಡಿಯ ಕಾರಖಾನೆ ತೆಗೆದವನು ಶಾಲೆಯಲ್ಲಿ ನಾವಿಬ್ಬರೂ ಕೂಡಿ ಕಲಿಯುವಾಗ ಆತನು ಅಭ್ಯಾಸದಲ್ಲಿ ದಡ್ಡನು ಆದರೆ ಕೈ ಸುಮ್ಮನೆ ಕೂಡುತ್ತಿದ್ದಿಲ್ಲ ಏನಾದರೂ ಗೊಂಬೆಯನ್ನೋ ಚಿತ್ರವನ್ನೋ ಆತನು ತೆಗೆಯುತ್ತಲೇ ಇರುತ್ತಿದ್ದನು ತೀವ್ರವೇ ಆತನು ಶಾಲೆಗೆ ಶರಣುಹೊಡೆದು ಫೋಟೋಗ್ರಾಫಿ ಧಂದೆ ಪ್ರಾರಂಭಮಾಡಿದನು ಸ್ವದೇಶಿ ಚಳವಳಿಯು ಪ್ರಾರಂಭವಾದಾಗ ನಾನೂ ನನ್ನ ಮಿತ್ರರೂ ಆತನಿಗೆ ದೀಪದ ಕಡ್ಡೀ ಉದ್ಯೋಗವನ್ನು ಕಲಿತು ಬರಲಿಕ್ಕೆ ಪ್ರೇರಿಸಿದೆವು. ಆತನು ಮುಂಬಯಿಗೆ ಹೋಗಿ ೩-೪ ತಿಂಗಳ ಇದ್ದು ಕಲಿತು ಬಂದನು. ನನ್ನ ತಮ್ಮ ರಾಮೂನೂ ಆತನೂ ಕೂಡಿ ಪಾಲಿನಿಂದ (ಬಂಡವಾಳ ನಮ್ಮದು) ಆ ಕಾರಖಾನೆಯನ್ನು ತೆಗೆಯುವುದು ಗೊತ್ತಾಯಿತು. ಕರಾರ ಪತ್ರ ಸಿದ್ಧವಾಯಿತು. ಅಷ್ಟರಲ್ಲಿ, ಇಂಥ ಹೊಸ ಧಂದೆಗಳಲ್ಲಿ ನೂರಕ್ಕೆ ನೂರರಂತೆ ಲಾಭ ಸಿಗುತ್ತದಾದ್ದರಿಂದ ಒಬ್ಬನೇ ಕಾರಖಾನೆ ತೆಗೆಯಬೇಕೆಂದು ಕೆಲವರು ಆತನ ಕಿವಿ ತಿರುವಿದರು. ಆತನು ತನ್ನ ಹೊಲಮನೆ

ಯಿಂದ ಸಾಲ ತೆಗೆದು ತಾನೊಬ್ಬನೇ ಆ ಕಾರಖಾನೆಯನ್ನು ತೆಗೆದನು. ನಾನೂ ನನ್ನ ಮಿತ್ರರೂ ಆತನಿಗೆ ಎಲ್ಲ ರೀತಿಯಿಂದಲೂ ಸಹಾಯ ಮಾಡುತ್ತಲೇ ಇದ್ದೆವು ಆ ಕಾರಖಾನೆಯು ಕೆಲವು ವರ್ಷ ನನ್ನ ಹೆಸರಿನಲ್ಲಿಯೇ ನಡೆದಿತ್ತು ರಾಮರಾಯನು ಒಳ್ಳೇ ಕಲ್ಪಕನು ಮೊದಲು ತರಿಸಿದ ತಾಂಬಟ ಬ್ರದರ್ಸ್ ಇವರ ಯಂತ್ರಗಳ ಬದಲು ತಾನೇ ಇಲ್ಲಿ ಹೊಸ ಯಂತ್ರಗಳನ್ನು ಹೊಯಿಸಿಕೊಂಡು ಕಾರಖಾನೆ ನಡಿಸಿದನು ಲಕ್ಷಾವಧಿ ಕಡ್ಡಿಪೆಟ್ಟಿಗೆಗಳು ಹೊರಟವು ಆದರೆ, ಇಷ್ಟೆಲ್ಲ ಆಗುವುದರೊಳಗೆ ಆ ರಾಮರಾಯನ ಮನೆ ತೊಳೆದುಹೋಯಿತು. ಆದರೂ ಧೈರ್ಯಬಿಡದೆ, ಆ ಕಾರಖಾನೆಯನ್ನು ಯಶಸ್ವಿಯಾಗಿ ಮಾಡಿ ತೋರಿಸಿದನು ಆ ಕಾರಖಾನೆಯ ಬಗ್ಗೆ ನನಗೆ ಸಂಬಂಧಿಸಿದ ಒಂದು ಸ್ಮೃತಿ ಹಂಚಿಕೊಡುವೆ ೧೯೧೪ನೆಯ ಇಸ್ವಿಯಲ್ಲಿ ಯುದ್ಧ ಪ್ರಾರಂಭವಾದಾಗ ಫಾಸ್ಫರಸ್ಸದ ಧಾರಣಿ ಮುಂಚೆ ೫ ರೂಪಾಯಿಗೆ ಪೌಂಡು ಇದ್ದದ್ದು ೧೦೦ ರೂಪಾಯಿಗೆ ಪೌಂಡು ಆಯಿತು ಆಗ, ಆ ಕಾರಖಾನೆ ನಿಂತು ಹೋಯಿತು ಕಡ್ಡೀಪೆಟ್ಟಿಗೆಯ ಮೇಲೆ ಹಚ್ಚುವ ಲೇಬಲುಗಳನ್ನು ಮುದ್ರಿಸಲಿಕ್ಕೆ ಇಲ್ಲಿ ಒಂದು ಲಕ್ಷಕ್ಕೆ ೩೦ ರೂಪಾಯಿ ಕೊಡಬೇಕಾಗುತ್ತಿತ್ತು ಅದೇ ಜರ್ಮನಿಯಿಂದ ಅವನ್ನು ತರಿಸಿದರೆ ೩ ರೂಪಾಯಿ ಮಾತ್ರ ಬೀಳುತ್ತಿತ್ತು ಇಂಥ ಸ್ಪರ್ಧೆಯಲ್ಲಿ ಸ್ವದೇಶಿ ಉದ್ಯೋಗಗಳು ತಲೆಯೆತ್ತುವವೆಂತು? ಆಳಗವಾಡಿ ರಾಮರಾಯನು ಆ ಬಳಿಕ ಪೆನ್ಸಿಲಿನ ಕಾರಖಾನೆ ತೆಗೆದನು. ಮಣ್ಣಿನ ಪೆನ್ಸಿಲುಗಳು ಹೊರಟವು. ಆದರೆ ಅವುಗಳನ್ನು ಹಾಕಿ ಕಳಿಸಲಿಕ್ಕೆ ಬೇಕಾಗುವ ಕಾರ್ಡುಬೋರ್ಡಿನ ಪೆಟ್ಟಿಗೆಗಳನ್ನು ಪರದೇಶದಿಂದ ತರಿಸಬೇಕಾಯಿತು. ಅಲ್ಲಿಂದ

ಆತನು ಹಂಚಿನ ಕಾರಖಾನೆ ತೆಗೆದನು. ಅದೂ ನಡೆಯಲಿಲ್ಲ. ಆತನು ಪ್ರತಿಯೊಂದು ಕಲೆಯಲ್ಲಿ ಸ್ವತಂತ್ರ ಬುದ್ಧಿಯವನು. ಗೋಡಬೋಲೆ ಎನ್ ಎನ್. ಅವರು (ಈಗ ಬನಾರಸ ಹಿಂದೂ ಯುನಿವ್ಹರ್ಸಿಟಿಯ ಟೆಕ್ನಾಲಾಜಿಕಲ್ ಕಾಲೇಜಕ್ಕೆ ಪ್ರಿನ್ಸಿಪಾಲರಾಗಿರುವರು) ಅಳಗವಾಡಿ ರಾಮರಾಯನ ಬುದ್ಧಿಕೌಶಲ್ಯಕ್ಕೆ ಮೆಚ್ಚಿ, ಚರ್ಮವನ್ನು ಹದಮಾಡುವುದೇ ಮುಂತಾದ ಕಲೆಗಳಲ್ಲಿ ಆತನಿಂದ ಸಲಹೆ ಪಡೆಯುತ್ತಿದ್ದರು ರಾಮರಾಯನಿಗೆ ತ್ರಾವಣಕೋರದ ಮಹಾರಾಜರು ತಮ್ಮಲ್ಲಿಯ ಕಟ್ಟಿಗೆಗಳನ್ನು ಪರೀಕ್ಷಿಸಲಿಕ್ಕೆ ಕೊಟ್ಟಿದ್ದರು ಆ ಪ್ರಕಾರ ಆತನು ಪರೀಕ್ಷೆ ಮಾಡಿ ಕೊಟ್ಟಿದ್ದರಿಂದ ಅವರು ಆತನಿಗೆ ಒಂದು ವಜ್ರದ ಉಂಗುರವನ್ನು ಕಾಣಿಕೆ ಕೊಟ್ಟು ಕಳಿಸಿದರು ಆ ಕಾಣಿಕೆಯು ೧೪-೧-೧೯೧೪ನೇ ದಿವಸ ಮ್ಯುನಿಸಿಪಾಲಿಟಿಯ ಮುಖಾಂತರ ಸಾರ್ವಜನಿಕ ಸಭೆಯಲ್ಲಿ ಆತನಿಗೆ ಕಲೆಕ್ಟರರಿಂದ ಅರ್ಪಣಮಾಡಲ್ಪಟ್ಟಿತು

**ಶೀಸಪೆನ್ಸಿಲಿನ ಕಾರಖಾನೆ** — ಹಣಮಂತರಾವ ಕಮಲಾಪುರ ಇವನು ಅದನ್ನು ೧೯೧೯ನೆಯ ಇಸ್ವಿಯ ಯುಗಾದಿಯ ದಿವಸ ತೆಗೆದನು ಅವನು ಒಕ್ಕಲತನದ ಖಾತೆಯಲ್ಲಿ ಕಾರಕೂನನಾಗಿದ್ದನು. ೧೯೦೭ನೆಯ ಇಸ್ವಿಯಲ್ಲಿ ನನ್ನ ಪ್ರೇರಣೆಯಿಂದ ನವಕರಿಗೆ ರಾಜೀನಾಮೆ ಕೊಟ್ಟು, ಸುರತ ಕಾಂಗ್ರೆಸಿನ ನಂತರ ಲಖನೌ ವರೆಗೆ ಹೋಗಿ ಸಕ್ಕರೆ ಮಾಡುವುದನ್ನು ಕಲಿತುಬಂದನು. ಆದರೆ, ಇಲ್ಲಿ ಆ ಕಾರಖಾನೆ ತೆಗೆಯುವುದಕ್ಕೆ ಅವನಿಗೆ ಸಾಧ್ಯವಾಗಲಿಲ್ಲ. ಆಗ ಶೀಸಪೆನ್ಸಿಲಿನ ಕಾರಖಾನೆ ತೆಗೆದನು. ಯಶಸ್ವಿಯಾಗಿ ಮಾಡಿ ತೋರಿಸಿದನು. ಸ್ಪರ್ಧೆಯ

ಮೂಲಕ, ಮತ್ತು ಪ್ರೋತ್ಸಾಹನದ ಅಭಾವದ ಮೂಲಕ ಅದೂ ಬಾಳಲಿಲ್ಲ

**ದಬ್ಬಾಳಿಕೆಯ ಕಥೆ** —ಆಗ, ರಾಜದ್ರೋಹಕ್ಕೆ ಸರಕಾರವು ಅಷ್ಟೊಂದು ಹೆದರಪೆ, ಅತ್ಯಾಚಾರಕ್ಕೆ ಬಲು ಹೆದರುತ್ತಿತ್ತು ಅದು ಪತ್ರಿಕೆಗಳ ಮೂಲಕ ಹಬ್ಬಬಾರದೆಂಬ ಬಗ್ಗೆ ಅವರು ವಿಶೇಷ ಎಚ್ಚರಪಡುತ್ತಿದ್ದರು. ಆದಕಾರಣ ಸಂಪಾದಕರನ್ನು ಸೆರೆಮನೆಗೆ ಅಟ್ಟುವುದಕ್ಕಿಂತ, ಪತ್ರಿಕೆಗಳನ್ನು ಜಾಮೀನು, ಜಪ್ತಿ ಮುಂತಾದವುಗಳ ಮೂಲಕ, ಆರ್ಥಿಕ ಅಡಚಣೆಯಲ್ಲಿ ತಂದು, ಅವು ತಾವಾಗಿ ನಿಂತುಹೋಗುವಂತೆ ಮಾಡುವುದು ಸರಕಾರದ ಧೋರಣವಾಗಿತ್ತು ಸರಕಾರದ ಅಧಿಕಾರಿಗಳಿಗೂ ನನಗೂ ಸಂಬಂಧಗಳು ಸೂರ್ಯಗ್ರಹಣಗಳಂತೆ ತೀರ ವಿರಳ ಅವರಾಗಿಯೇ ಕರೆಕಳುಹಿಸುವ ಪ್ರಸಂಗ ಬಂದಾಗ ಹೋಗುವುದು ಈ ಅವಧಿಯಲ್ಲಿ ಅಂಥ ಕೆಲವು ಪ್ರಸಂಗಗಳು ಒದಗಿದವು ಕೇವಲ ಸಾರ್ವಜನಿಕ ಸೇವೆಗಾಗಿಯೇ ವಕೀಲಿ ಬಿಟ್ಟವನು ಆಗ ನಾನೊಬ್ಬನೇ ಆದಕಾರಣ, ಆಗ ನಾನೇ ಮುಖಂಡನು! ಹುಬ್ಬಳ್ಳಿಗೆ ಒಂದು ಸಲ ಗಣಪತಿಯ ಉತ್ಸವದಲ್ಲಿ ವ್ಯಾಖ್ಯಾನಕೊಡಲಿಕ್ಕೆ ಹೋಗಿದ್ದೆ ಮರುದಿವಸ ಕಲೆಕ್ಟರರಿಂದ ಕರೆ ಬಂದಿತು ನೀನು ನಿನ್ನೆ ರಾಜದ್ರೋಹದ ಭಾಷಣಮಾಡಿದಿಯಲ್ಲವೆ ಎಂದು ಕೇಳಿದರು ಇಲ್ಲ, ನಾನು ಮಾತಾಡಿದ್ದು ಧರ್ಮವಿಷಯದ ಮೇಲೆ ಎಂದು ಹೇಳಿದೆ. ಆದಕ್ಕೆ ಅವರು ನಕ್ಕು ' ಇದು ನೋಡಿರಿ, ನನ್ನ ಮನಸ್ಸಿನಲ್ಲಿ ಬಂದರೆ, ನಾನು ಕ್ವೀನ್ ವ್ಹಿಕ್ಟೋರಿಯಾ ಇವರ ಚರಿತ್ರೆಯನ್ನು ಹೇಳುವಾಗ ಕೂಡ ರಾಜದ್ರೋಹವನ್ನು ತರಬಲ್ಲೆ' ಎಂದು ಅಂದರು.

**ಮತ್ತೊಂದು ಕಥೆ.**—ನನಗೂ ಇಂಗ್ಲಂಡದಲ್ಲಿದ್ದ ಬ್ಯಾರಿಸ್ಟರ ಸಾವರಕರ ಇವರಿಗೂ ಬಹಳ ಪತ್ರವ್ಯವಹಾರ ಮತ್ತು ಸಂಬಂಧವಿತ್ತೆಂಬುದು ಎಲ್ಲರಿಗೂ ಗೊತ್ತಿತ್ತು. ಕಲೆಕ್ಟರರಿಗೂ ಆ ಸುದ್ದಿ ಇತ್ತು ಆದರಲ್ಲಿ ಮುಚ್ಚಿಕಚ್ಚಿದ್ದೇನೂ ಇರಲಿಲ್ಲ. ಹೀಗಿರುವಲ್ಲಿ, ಮುಂದೆ ನಾಶಿಕದಲ್ಲಿ ೧೯೦೯ನೆಯ ದಿಸೆಂಬರದಲ್ಲಿ ಜಾಕ್ಸನ್ ಕಲೆಕ್ಟರರ ಕೊಲೆಯಾಯಿತು. ಇಂಗ್ಲಂಡದಲ್ಲಿ ಸಾವರಕರ ಇವರು ಹಿಡಿಯಲ್ಪಟ್ಟರು ಕೂಡಲೆ ಆ ಸುದ್ದಿ ನನಗೆ ಬಂದಿತು. ಕೆಲವು ದಿವಸಗಳಲ್ಲಿ, ಕೊಲ್ಹಾಪುರದಿಂದ ಸಿ. ಆಯ್. ಡಿ ಸುಪರಿಂಟೆಂಡೆಂಟರು ಬಂದು ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರಿಗೆ ನನ್ನಮೇಲೆ ಸರ್ಚ ವಾರಂಟು ಕೊಡಲಿಕ್ಕೆ ಕೇಳಿದರು. ಆ ಹೊತ್ತಿನಲ್ಲಿ ಬಳ್ಳಾರಿ ರಾಮರಾಯರೆಂಬ ಇಲ್ಲಿಯ ಪ್ರಸಿದ್ಧ ವಕೀಲರು ತಮ್ಮದೊಂದು ಖಟ್ಲೆಯ ಸಲುವಾಗಿ ಹೋಗಿ, ಕಲೆಕ್ಟರರ ಕೋಣೆಯ ಹೊರಮಗ್ಗಲಿಗೆ ಕುಳಿತಿದ್ದರು ಅವರು ಕೂಡಲೆ ನನಗೆ ಆ ಸುದ್ದಿಯನ್ನು ಹೇಳಿಕಳುಹಿಸಿದರು. ನಾನೂ ಮುದವೇಡೆಕರ ಇವರೂ ವಾರಂಟಿನ ಹಾದೀನೋಡುತ್ತಲೇ ಕುಳಿತಿದ್ದೆವು. ಆದರೆ ಡಿಸ್ಟ್ರಿಕ್ಟಮ್ಯಾಜಿಸ್ಟ್ರೇಟರು ಆವಾರಂಟು ಕೊಡಲೊಪ್ಪಲಿಲ್ಲ. "I dont want to disturb the peace of my district" ಎಂಬುದಾಗಿ ಡಿಸ್ಟ್ರಿಕ್ಟಮ್ಯಾಜಿಸ್ಟ್ರೇಟರು ಆ ಪೋಲೀಸ ಸುಪರಿಂಟೆಂಡೆಂಟರಿಗೆ ಹೇಳಿದ ಮಾತು ಬಳ್ಳಾರಿ ರಾಮರಾಯರ ಕಿವಿಗೆ ಬಿತ್ತು. ಅದನ್ನು ಅವರು ನಮಗೆ ಮುಂದೆ ತಿಳಿಸಿದರು. ಇಂಥ ಶಾಂತವೃತ್ತಿಯ ಕಲೆಕ್ಟರರು ಇದ್ದುದರಿಂದಲೇ ಇಲ್ಲಿ ಶಾಂತತೆಯ ಭಂಗವಾಗಲಿಲ್ಲ.

ಪೋಲಿಸರ ತಪ್ಪು ರಿಪೋರ್ಟುಗಳೂ ಕೆಲವೊಮ್ಮೆ ಇಂಥ ಪ್ರಸಂಗಗಳಿಗೆ ಕಾರಣವಾಗುತ್ತಿದ್ದವು. ಒಮ್ಮೆ ಕಲೆಕ್ಟರರು ನನ್ನನ್ನು ಕರೆಕಳಿಸಿದರು. ಒಳಗೆ ಹೋದ ಕೂಡಲೆ ನನ್ನ ಹೆಸರು ಕೇಳಿದರು. ನಾನು "ಆಲೂರ" ಎಂದು ಹೇಳಿದ ಕೂಡಲೆ, ಸದ್ಯನೇ ತಮ್ಮ ತಿರುಗಣೆಯ ಖುರ್ಚಿಯನ್ನು ತಿರುಗಿಸಿ 'See here your name is first' ಎಂದು ತಮ್ಮ ಹಿಂದ ಗೋಡೆಯಮೇಲೆ [illegible] ಬರೆದ ೧೦-೮ ಹೆಸರುಗಳ ಪಟ್ಟಿಯನ್ನು ತೋರಿಸಿದರು ಮತ್ತು ಒಮ್ಮೆಲೆ 'ನೀನು ರಾಜದ್ರೋಹದ ಭಾಷಣವನ್ನೇಕೆ ಮಾಡಿದೆ' ಎಂದು ಗದರಿಸಿದರು. ನಾನು ಮಾಡಿಲ್ಲೆಂದು ಹೇಳಿದೆ. 'ಇಲ್ಲ, ನೀನು ಮಾಡಿರುವಿ. ನೀನು ತಿಲಕರಿಗೆ ಲೋಕಮಾನ್ಯರೆಂದು ಕರೆಯಲಿಲ್ಲವೆ?' ಎಂದು ಅಂದರು. ಲೋಕಮಾನ್ಯರೆಂದು ನಾನೊಬ್ಬನೇ ಏಕೆ ಜಗತ್ತೇ ಕರೆಯುತ್ತದೆಂಬುದನ್ನು ತಿಳಿಸಿ ಹೇಳಿದೆ. ಆಗ, ಅವರಿಗೆ ಪೋಲಿಸರು ನಿಷ್ಕಾರಣವಾಗಿ ಆ ಶಬ್ದಕ್ಕೆ ರಾಜದ್ರೋಹದ ಬಣ್ಣವನ್ನು ಬಳಿದಿರುವರೆಂಬುದು ಗೊತ್ತಾಯಿತು.

**ಕರ್ನಾಟಕ ಕಾಲೇಜಿನ ಕಥೆ.**— ಧಾರವಾಡದಲ್ಲಿಯ ಕರ್ನಾಟಕ ಕಾಲೇಜಿನ ಬಗ್ಗೆ ನಮಗೆಲ್ಲ ಈಗ ಅಭಿಮಾನವೆನಿಸುತ್ತದಷ್ಟೆ. ಆದರೆ ಕರ್ನಾಟಕ ಕಾಲೇಜವು ಹೊರಟದ್ದು ಕೊಳಚೆಯಲ್ಲೆಂಬುದನ್ನು ಹೇಳಿದರೆ ಜನರಿಗೆ ಆಶ್ಚರ್ಯವಾಗಬಹುದು. ದೊಡ್ಡದೊಡ್ಡ ನದಿಗಳ ಉಗಮವೂ ಕೊಳಚೆಯಲ್ಲಿ ಆಗುವುದಿಲ್ಲವೆ? ಕರ್ನಾಟಕಕ್ಕೆ ಒಂದು ಕಾಲೇಜು ಬೇಕು ಎಂಬ ಕಲ್ಪನೆಯು ೧೮೭೭ರಲ್ಲಿಯೇ ಹೊರಟಿತ್ತು. ಆದರೆ ಅದು ಮೂಲೆಗುಂಪಾಗಿತ್ತು. ಸ್ವದೇಶಿ ಚಳವಳಿಯ ಕಾಲಕ್ಕೆ ಅದು

ರೊಡ್ಡ ಶ್ರೀನಿವಾಸರಾಯರೇ ಮುಂತಾದ ಸರಕಾರನಿಷ್ಠ ಜನ ರಲ್ಲಿ ತಲೆ ಎತ್ತಿತು. ೧೯೨೫ನೇ ಫೆಬ್ರುವರಿಯಲ್ಲಿ ಧಾರವಾಡ ದಲ್ಲಿ ಒಕ್ಕಲತನದ ಪ್ರದರ್ಶನವಾಗಿತ್ತು ಆಗ ಮಂತ್ರಿಗಳಾದ ಮ್ಯೂರ ಮೆಕೆಂಝಿ ಸಾಹೇಬರ ಆಗಮನವಾಗಿತ್ತು. ಅವರು ರೊಡ್ಡ ಶ್ರೀನಿವಾಸರಾಯರ ಕಿವಿಯಲ್ಲಿ ಕಾಲೇಜಿನ ಕಲ್ಪನೆ ಊದಿದರು ರಾವಬಹಾದ್ದೂರ ಶ್ರೀನಿವಾಸರಾಯರು ಕರ್ನಾ ಟಕದ ಅಭಿಮಾನಿಗಳೂ ಇದ್ದರು. ಆದ ಕಾರಣ, ಕೂಡಲೆ ಅವರು ಕಾಲೇಜಿನ ಬಗ್ಗೆ ಅರ್ಜಿಯನ್ನು ಕಳಿಸಿಯೇ ಬಿಟ್ಟರು. ಆ ಅರ್ಜಿಯಲ್ಲಿ ಕಾಲೇಜದ ಆವಶ್ಯಕತೆಯನ್ನು ಕುರಿತು ಹೇಳು ವಾಗ ಪುಣೆ ಮುಂಬಯಿಗಳಿಗೆ ಇಲ್ಲಿಯ ಹುಡುಗರು ಹೋಗು ತ್ತಾರೆ. ಅಲ್ಲಿ, ಉಪದೇಶಮಾಡುವ ತಂದೆ ತಾಯಿಗಳು ಇರದ್ದ ರಿಂದ ಅವರು ಕೆಡುತ್ತಾರೆ! ಎಂದು ಮುಂತಾಗಿ ಸ್ವದೇಶಿ ಚಳವಳಿಯನ್ನುದ್ದೇಶಿಸಿ ಬರೆದಿದೆ. ಮುಂದೆ ಕೆಲವು ವರ್ಷ ಗಳ ನಂತರ ಅದಕ್ಕೆ ಖಾಸಗೀ ಕಾಲೇಜಿನ ಸ್ವರೂಪ ಕೊಡ ಲಿಕ್ಕೆ ಪ್ರಯತ್ನಿಸಿದೆ. ಸಾಧ್ಯವಾಗಲಿಲ್ಲ. ಖಾಸಗೀ ಕಾಲೇಜು ಹೊರಡಿಸಿದರೆ ೨೦೦ ರೂಪಾಯಿ ಫಂಡು ಕೊಡುತ್ತೇನೆ, ಇಲ್ಲದಿ ದ್ದರೆ ಒಂದೇ ನೂರು ಕೊಡುತ್ತೇನೆಂದು ಹೇಳಿದೆ. ಹಾಗೆ ಒಂದೇ ನೂರು ಕೊಟ್ಟೆ. ರಾಷ್ಟ್ರೀಯ ಶಾಲೆಗಳನ್ನು ಬಗ್ಗು ಬಡೆದು, ವಿದ್ಯಾರ್ಥಿಗಳನ್ನು ತಮ್ಮ ಅಂಕಿತದಲ್ಲಿ ತೆಗೆದುಕೊಳ್ಳು ವುದು ಸರಕಾರಕ್ಕೆ ಬೇಕಾಗಿತ್ತು. ಬೆಳಗಾಂವಿ, ಧಾರವಾಡ ಮುಂತಾದ ಶಾಲೆಗಳಿಗೆ ವಸತಿಗೃಹಗಳನ್ನು ಜೋಡಿಸಿದ್ದೂ ಅದೇ ಕಾಲದಲ್ಲಿಯೇ. ಸರಕಾರದ ಸಹಾಯ ಪಡೆಯುವ ಶಾಲೆ ಗಳ ಮಾಸ್ತರರಿಗೆ ಈಗಿನ ಅನಿರ್ಬಂಧ ಹಕ್ಕುಗಳು ದೊರೆತುದೂ ಅದೇ ಕಾಲದಲ್ಲಿ.

ಆಗಿನ ಕಾಲಕ್ಕೆ ಇಲ್ಲಿ ದಬ್ಬಾಳಿಕೆಯ ಸ್ವರೂಪವು ಇನ್ನೂ ಅಷ್ಟು ಉಗ್ರವಾಗಿದ್ದಿಲ್ಲ. ಇದಕ್ಕೆ ಕಾರಣವೆಂದರೆ, ಆಗ ಸರಕಾರದವರ ಮುಖ್ಯ ಅಂಜಿಕೆ ಅರಾಜಕ ಚಳವಳಿಯದು. ಅದು ಇಲ್ಲಿಯವರೆಗೆ ವಿಶೇಷವಾಗಿ ಮುಟ್ಟಿರಲಿಲ್ಲ. ಅರಾಜಕ ವಾಙ್ಮಯ ಪ್ರಸಾರವೇನೋ ನಡೆದಿತ್ತು. ಆ ಚಳವಳಿಯು ಕರ್ನಾಟಕದಲ್ಲಿ ಹಬ್ಬಬಾರದೆಂದು ಸರಕಾರದವರು ಇಲ್ಲಿಯ ವೃತ್ತಪತ್ರಗಳಿಗೆ ಮೇಲಿಂದಮೇಲೆ ಮುಗದಾಣ ಹಾಕುತ್ತಿದ್ದರು. ಮಾತ್ರ ೧೯೦೭ರಿಂದ ೧೯೧೧ರ ವರೆಗೆ ನಾನು ಕರ್ನಾಟಕಪತ್ರ, ಕರ್ನಾಟಕವೃತ್ತ ಮತ್ತು ಕನ್ನಡ ಕೇಸರಿ ಈ ಮೂರು ಪತ್ರಿಕೆಗಳಲ್ಲಿ ಸಂಪಾದಕೀಯ ಲೇಖನಗಳನ್ನು ಬರೆಯುತ್ತಿದ್ದೆನು. ಅವುಗಳಿಗೆ ಹೆಸರಿಗೆ ಸಂಪಾದಕರು ಬೇರೆಯವರಿದ್ದರು. ಮತ್ತು ಲೋಕಬಂಧು, ಚಂದ್ರೋದಯ ಪತ್ರಿಕೆಗಳಲ್ಲಿ ಆಗಾಗ ಲೇಖ ಕೊಡುತ್ತಿದ್ದೆನು. ಕರ್ನಾಟಕಪತ್ರವು ಅಂಕಲಗಿಯವರ ಹೆಸರಿನಲ್ಲಿ ನಡೆಯುತ್ತಿತ್ತು. ಅದು ಮುಂಚೆ ವೆಂಕಟ ರಂಗೋ ಕಟ್ಟಿಯವರ ಪತ್ರ. ೧೯೦೭ ಫೆಬ್ರುವರಿಯಲ್ಲಿ ಅಂಕಲಗಿಯವರು ಅದನ್ನು ತಕ್ಕೊಂಡರು. ಅದರೊಳಗಿನ 'ಅಥ'ದಿಂದ 'ಇತಿ' ವರೆಗಿನ ಯಾವತ್ತು ಲೇಖಗಳನ್ನು ನಾನು ಬರೆಯುತ್ತಿದ್ದೆನು. 'ವಿನಾಶಕಾಲೇ ವಿಪರೀತಬುದ್ಧಿ' ಎಂಬ ನನ್ನ ಲೇಖದಬಗ್ಗೆ ಒಮ್ಮೆ (೧೯೦೭ ಸಪ್ಟಂಬರ)ಮಾತ್ರ ಡಿಸ್ಟ್ರಿಕ್ಟ ಮ್ಯಾಜಿಸ್ಟ್ರೇಟರು ನಮ್ಮನ್ನು ಕರಿಸಿದ್ದರು. ಕರ್ನಾಟಕ ವೃತ್ತವು ಮುದವೇಡಕರ ಕೃಷ್ಣರಾಯರದು. ಅವನ್ನು ಕೆಲವು ವರ್ಷ ನಾನೂ ಕಟ್ಟಿ ಮಧ್ವಾಚಾರ್ಯರೂ ನಡೆಸಿದೆವು. ಕನ್ನಡ ಕೇಸರಿ ಬಿಂದೂರಾವ ಮುತಾಲಿಕ ದೇಸಾಯರದು. ಅದು ಮರಾಠಿ ಕೇಸರಿಯ ಸಂಪಾದಕೀಯ ಲೇಖಗಳನ್ನೂ ಮಿಕ್ಕ

ಸ್ವತಂತ್ರ ಲೇಖಗಳನ್ನೂ ಪ್ರಕಟಿಸುತ್ತಿತ್ತು ಕೇಸರಿಯ ಸಂಪಾದಕೀಯ ಲೇಖಗಳ ಭಾಷಾಂತರವನ್ನು ನಾನು ಮಾಡಿ ಕೊಡುತ್ತಿದ್ದೆ ಕರ್ನಾಟಕ ಪತ್ರದಲ್ಲಿ ನಾನು ಪ್ರಸಿದ್ಧಿಸಿದ ಅರವಿಂದ ಘೋಷರು ಹೆಂಡತಿಗೆ ಬರೆದ ಪತ್ರದ ಭಾಷಾಂತರ, ಅವರು ಬರೆದ ತಮ್ಮ ರಾಜಕೀಯ ಮೃತ್ಯುಪತ್ರ ( Political Will )ವೆಂಬ ಕೊನೆಯ ರಾಜಕೀಯ ಲೇಖನದ ಭಾಷಾಂತರ (೧೦-೮-೧೯೦೯) ಮತ್ತು ನಾನು ಸ್ವಂತ ಬರೆದ ' ಚಳವಳಿಗಳ ಆತ್ಮವು' (೯-೭-೧೯೦೯)ಎಂಬ ಲೇಖನಮಾಲೆಯ ಲೇಖಗಳು ಇವೆಲ್ಲವೂ ಜಪ್ತುಮಾಡಲ್ಪಟ್ಟು ಸುಡಲ್ಪಟ್ಟವು

**ಗುರುನಾಥರಾವ ಘಾಟಕೆ ಇವರಿಗೆ ಸಂಬಂಧಿಸಿದ ನನ್ನ ಸ್ಮೃತಿ:**-ಇನ್ನು ಕೆಲವು ಸ್ಮೃತಿಗಳನ್ನು ಕೊಡುವೆ ಒಮ್ಮೆ ನಾನು ಮನೆಯನ್ನು ಬಿಟ್ಟು ಹೊರಗಿದ್ದು ಸಂಸಾರ ಹೂಡಿದ್ದೆನೆಂಬ ಸುದ್ದಿಯು ಗುರುನಾಥರಾಯರ ಕಿವಿಗೆ ಹೇಗೋ ಬಿತ್ತು. ಅವರು ನನ್ನನ್ನು ಕರೆದು, ನನ್ನ ಉಡಿಯಲ್ಲಿ ರೋಖ ೫೦೦ ರೂಪಾಯಿ ಸುರುವಿದರು ಅವರು ಅದನ್ನು ಶಾಲೆಗಾಗಿ ಕೊಟ್ಟಿರಬಹುದೆಂದು ಬಗೆದು, ನಾನು ಜಮಾಹಚ್ಚಿಕೊಂಡು ಪಾವತಿ ಕಳಿಸುತ್ತೇನೆಂದು ಅಂದೆ ಶಾಲೆಗೆ ಕೊಟ್ಟಿಲ್ಲ, ನಿಮಗೆ ಕೊಟ್ಟಿರುವೆನು ಎಂದು ಅಂದರು ಹೀಗೇಕೆ ಮಾಡಿದಿರಿ ಎಂದು ಕೇಳಿದೆ ನೀವು ಬಹಳ ದಿನಗಳಿಂದ ಹಣದ ಅಡಚಣೆಯಲ್ಲಿ ತೊಳಲಾಡುತ್ತೀರಿ ಎಂದು ಕೇಳಿದೆ ನೀವು ಈವರೆಗೂ ಆ ಮಾತು ನನ್ನ ಮುಂದೆ ತೆಗೆಯಲಿಲ್ಲ ಅದಕ್ಕೆ ನಾನಾಗಿಯೇ ಈಗ ಕೊಟ್ಟಿರುವೆ ಇದನ್ನು ನೀವು ತೆಗೆದುಕೊಳ್ಳಿರಿ ಎಂದು ಅಂದರು ಆಗ, ನಮ್ಮಿಬ್ಬರ ಕಣ್ಣೊಳಗಿಂದ ನೀರು ಉದುರಿದವು. ನನಗೆ ಆ ಕಾಲಕ್ಕೆ ಹೊಟ್ಟೆಯ

ಬಗ್ಗೆ ಅತ್ಯಂತ ತಾಪತ್ರಯವಿದ್ದುದೇನೋ ನಿಜ. ಆದರೆ, ಅವನ್ನು ಪರಿಹರಿಸಿಕೊಳ್ಳುವುದಕ್ಕಾಗಿ ನಾನು ಪುಸ್ತಕಗಳನ್ನು ಭಾಷಾಂತರಿಸುತ್ತಿದ್ದೆನು. ಸಂಘದ ಇನಾಮೂ ಎರಡು ನೂರು ರೂ. ಮಂಜೂರಾಗಿತ್ತು; ಕೈಗೆ ಬಂದಿದ್ದಿಲ್ಲ ಆ ಸಂಗತಿ ಅವರಿಗೆ ಗೊತ್ತಿರಲಿಲ್ಲ ಹಣದ ಅಡಚಣಿ ಪರಿಹಾರವಾಗಿದೆ ಯೆಂದು ಹೇಳಿದೆ ಅವರು ನಾನು ಅದನ್ನು ಸ್ವೀಕರಿಸಲೇ ಬೇಕೆಂದು ಅನ್ನುವವರು, ನಾನು ಒಲ್ಲೆನೆನ್ನುವವ ಹೀಗೆ ಕೆಲವು ಹೊತ್ತು ನಡೆಯಿತು. ದಾನಕೊಟ್ಟದ್ದನ್ನು ತಿರುಗಿ ತಕ್ಕೊಳ್ಳುವುದಕ್ಕೆ ಅವರ ಮನಸ್ಸು ಒಪ್ಪಲಿಲ್ಲ ಕೊನೆಗೆ, ಇಬ್ಬರೂ ಹಾವೇರಿನ್ಯಾಯಮಾಡಿ ಕೆಲವು ಪುಸ್ತಕಗಳನ್ನು ತೆಗೆಯುವುದನ್ನು ಗೊತ್ತುಮಾಡಿದೆವು ನನ್ನ ಹೆಸರಿನಿಂದ ಸದರ್ನ ಮರಾಠಾ ಬ್ಯಾಂಕಿನಲ್ಲಿ ೧೯೧೪ನೆಯ ಜೂನ ಜುಲೈ ತಿಂಗಳಿನಲ್ಲಿ ಡಿಪಾಝಿಟ ಇಟ್ಟು, ಅವರೂ ನಾವೂ ಕೆಲವು ಲಘುಪುಸ್ತಕಗಳನ್ನು ಹೊರಡಿಸಿ ಹಂಚಿದೆವು ಮತ್ತು ಕೆಲವು ಗ್ರಂಥಗಳನ್ನು ಕೊಂಡುಕೊಂಡೆವು ಇಷ್ಟು ಸೂಕ್ಷ್ಮ ಮನೋ ವೃತ್ತಿಯುಳ್ಳವರು ಹೆಚ್ಚಾದರೆ, ಬಾಯಿತೆರೆಯಲಿಕ್ಕಾಗದೆ ಒಳ ಗಿಂದೊಳಗೆ ನವೆಯುತ್ತಿರುವ ಎಷ್ಟೋ ಸಾರ್ವಜನಿಕ ಸೇವಕರ ಯೋಗಕ್ಷೇಮವು ಸಾಗಲಿಕ್ಕಿಲ್ಲವೆ? ಆದರೆ ಇಂಥವರು ಎಷ್ಟು ಜನ? ಸನಾತನಿಗಳೆಂದು ಮೆರೆಯುವ ಕೆಲವು ಶ್ರೀಮಂತರು ನಾಲ್ಕು ದುಡ್ಡು ದೇಶಾವರಕೊಟ್ಟು ಅಥವಾ ಎರಡು ದಿವಸ ಭೋಜನಹಾಕಿ "ದಾನಶೂರ"ರೆಂದು ಬಡ ವೈದಿಕರಿಂದ ಬೆನ್ನು ಚಪ್ಪರಿಸಿಕೊಂಡು ಸಮಾಧಾನಪಟ್ಟುಕೊಳ್ಳುವಂತೆ, ಯಥೇಚ್ಛವಾಗಿ ತಾವು ದುಡ್ಡುಗಳಿಸಿ, ದೇಶಸೇವೆ ಮಾಡು ವವರ ಮೋರೆಯಮೇಲೆ ನಾಲ್ಕುದುಡ್ಡು ಒಗೆದು, ಅಥವಾ

ಸಾರ್ವಜನಿಕ ಸಂಸ್ಥೆಗೆ ಪೋಷಕರಾಗಿ ತಾವೂ ದೇಶಸೇವೆ ಮಾಡಿದೆವೆಂಬ ಗರ್ವತಾಳುವ ಇಹ-ಪರಸಾಧಕ ಧನಿಕವರ್ಗವೊಂದು ನಮ್ಮಲ್ಲಿ ಇತ್ತೀಚಿಗೆ ಬಹಳ ಬೆಳೆದಿದೆ. ಆದಾದರೂ ನಿಷ್ಕಾಮಬುದ್ಧಿಯಿಂದ ಮಾಡುತ್ತಾರೆನ್ನಬೇಕೆ? ಅದೂ ಇಲ್ಲ. ಅವರ ದಾನದ ದೊಡ್ಡದೊಡ್ಡ ಅಂಕಿಗಳ ಬುಡಕ್ಕೆ ಇಲೆಕ್ಶನದ ಓಟುಹೇತುವೋ ಕೀರ್ತಿಯ ಆಕಾಂಕ್ಷೆಯೋ ಅಥವಾ ಯಾವುದೋಂದು ಸನ್ಮಾನಕ್ಕೆ ಅಧ್ಯಕ್ಷರಾಗಬೇಕೆಂಬ ಆಶೆಯೋ ಅವಿತುಕೊಂಡು ಕುಳಿತಿರುತ್ತದೆ. ಹಾಗೆ ಏನೂ 'ಮೊಬದಲೆ' ದೊರೆಯದೆ ದಾನಮಾಡಿದ ಉದಾಹರಣೆಗಳು ತೀರ ಸ್ವಲ್ಪ. ಗುಪ್ತದಾನದ ಬೆಲೆ ನಮ್ಮವರು ಅರಿಯುವುದು ಅವಶ್ಯ.

ಗುರುನಾಥರಾವ ಕಾಟಕ ಇವರ ಬಗ್ಗೆ ಮತ್ತೊಂದು ಸ್ಮೃತಿ. ಧಾರವಾಡದಲ್ಲಿ ನರಗುಂದಕರ ರಾಮರಾವ, ಗಂಗಾಧರರಾವ ಕಾಟಕ ಮುಂತಾದ ನಾಲ್ಕು ಜನರು ಸಣ್ಣ ಪ್ರಮಾಣದಲ್ಲಿ ಸ್ವದೇಶಿ ಅಂಗಡಿಯೊಂದನ್ನು ನಡಿಸಿದ್ದರು. [illegible] ಅಂಗಡಿ ಇದ್ದಿಲ್ಲ. ಗಾಂವದಲ್ಲಿ ವಕೀಲರ ಕೋರ್ಟಿಯೊಳಗಿನ ಗುದ್ದ ಗುದ್ದಂಥ ಸಾರ್ವಜನಿಕ ಮಾತುಗಳನ್ನಾಡುವವರು ಅಷ್ಟೆ. ನಿಜವಾಗಿ ವಕೀಲರಲ್ಲಿ ಅಷ್ಟೊಂದು ಹುರುಪು ಇತ್ತು. ಆದರೆ ಹುರುಪು ಕೃತಿಯಲ್ಲಿ ಬರುವುದಕ್ಕೆ ಯಾವಾಗಲೂ ಹಿಂಜರಿಯುತ್ತದೆ. ದಿನಾಲು ನಾವು ತರುಣರು ಹೀಗೆ ಗೊಡ್ಡು ಹರಟೆ ಹೊಡೆಯುವುದನ್ನು ನೋಡಿ ಕರ್ತೃತ್ವಶಾಲಿಗಳಾದ ಗುರುನಾಥರಾಯರು ಬೇಸತ್ತರು. ಸ್ವದೇಶಿ ಅಂಗಡಿ ಹೊರಡಿಸಬೇಕೆಂಬ ಬಗ್ಗೆ ವಕೀಲರೆಲ್ಲರೂ ಒಂದು ದಿನ ಆವೇಶಯುಕ್ತ ಮಾತುಗಳನ್ನಾಡುವಾಗ ಅವರು ಒಮ್ಮೆ ಆ ಕೋಣೆಗೆ

ಬಂದರು ಗೊಡ್ಡುಮಾತು ನಿಮ್ಮವು ಎಂದು ಹಂಗಿಸಿದರು. ಕೂಡಲೆ ಕೆಲವರು ಹಣಕೊಡುವ ವಚನಕೊಟ್ಟರು ಗುರು ನಾಥರಾಯರು ನಾಳಿನ ದಿವಸ ಹೊರಡಿಸಿಯೇ ಬಿಡುವ ಎಂದು ಅಂದರು. ಆಗ ಮಾತ್ರ, ವಚನಕೊಟ್ಟವರಲ್ಲಿ ಕೆಲವರು ಮೆಲ್ಲಮೆಲ್ಲನೆ ಒಂದಿಲ್ಲೊಂದು ನೆವತೆಗೆದು ಹಿಂಜರಿಯಹತ್ತಿ ದರು. ಆಗ, ಗುರುನಾಥರಾಯರು ಅವರ ಸಲುವಾಗಿ ತಮ್ಮ ಕೈಯಿಂದ ಹಣ ಹಾಕಿದರು. ಮುಂದೆ ಸಾವಕಾಶ ಸಾಲ ತೀರಿಸಿರಿಯೆಂದು ಹೇಳಿದರು. ೩೦೦೦ ರೂಪಾಯಿ ಶೇರುಗಳು ಕೂಡಿದವು. ಗುರುನಾಥರಾಯರು ನಕ್ಕು ಹತ್ತುವರ್ಷ ಅಂಗಡಿ ನಡೆಯಲಿಕ್ಕೆ ಅಡ್ಡಿಯಿಲ್ಲವೆಂದು ಚೇಷ್ಟೆಮಾಡಿದರು ಅದೇಕೆ ಎಂದು ಕೇಳಲಾಗಿ, ವರ್ಷಕ್ಕೆ ೩೦೦ ರೂಪಾಯಿಯಂತೆ ಕಾರ ಕೂನನ ಸಂಬಳ ಮುಂತಾದದ್ದು ಹೋಗಿಬಿಡುತ್ತದೆ. ಆದ್ದರಿಂದ ಹತ್ತು ವರ್ಷ ಬಾಳಲಿಕ್ಕೆ ಅಡ್ಡಿ ಇಲ್ಲವೆಂದು ಅಂದರು ಆದರೆ ಅವರ ಭವಿಷ್ಯವೂ ಸುಳ್ಳಾಯಿತು. ನಾಲ್ಕು ವರ್ಷ ಕೂಡ ಅದು ನಡೆಯಲಿಲ್ಲ, ಮುಳುಗಿಹೋಯಿತು. ಶೇರು ಕಳೆದುಕೊಂಡ ವರಲ್ಲಿ ನಾನೊಬ್ಬನ.

**ನಾ. ಸು. ಹರ್ಡೀಕರನ ಬಗ್ಗೆ ಸ್ಮೃತಿ**-ಈ ಅವಧಿಯಲ್ಲಿ ನಾರಾಯಣ ಸುಬ್ಬರಾವ ಹರ್ಡೀಕರ ಈತನಿಗೆ ಸಂಬಂಧಿ ಸಿದ ಒಂದು ಸ್ಮೃತಿಯನ್ನು ಇಲ್ಲಿ ಕೊಡುವೆ. ಬಿಂದೂ ರಾವ ಮುತಾಲಿಕ ದೇಸಾಯರು ಕೇಸರಿ ಪತ್ರವನ್ನು ಕನ್ನಡ ದಲ್ಲಿ ತೆಗೆಯುತ್ತಿದ್ದರು. ನಾನು ಹುಬ್ಬಳ್ಳಿಯವರೆಗೆ ಹೋಗಿ ಮೇಲಿಂದ ಮೇಲೆ ಅಗ್ರಲೇಖ ಸ್ಫುಟವಿಚಾರ ಮುಂತಾದವು ಗಳನ್ನು ಬರೆದುಕೊಟ್ಟು ಬರುತ್ತಿದ್ದೆ ಆಗ ಹರ್ಡೀಕರ ಇವನು ಕನ್ನಡ ಕೇಸರೀ ಕಚೇರಿಯಲ್ಲಿ ಕೆಲಸಮಾಡು

ತ್ತಿದ್ದನು ಆತನು ಮುಂಚಿನಿಂದಲೂ ಉಜ್ವಲ ದೇಶ
ಭಕ್ತನು ಆದರೆ ಇನ್ನೂ ಚಿಕ್ಕವನು; ಲೇಖ ಬರೆದು
ರೂಢಿಯಿದ್ದಿಲ್ಲ ಒಮ್ಮೆ ಆತನು ಸರಕಾರದ ವಿರುದ್ಧ ಒಂದು
ಉಗ್ರವಾದ ಲೇಖವನ್ನು ಬರೆದು ಮುದ್ರಿಸಿಬಿಟ್ಟನು. ಬಿಂದೂ
ರಾಯರು ಅಂದು ಅಲ್ಲಿ ಇರಲಿಲ್ಲ ಮುದ್ರಿಸಿದ ಬಳಿಕ ಕನ್ನಡ
ಕೇಸರಿಯ ಆ ಪ್ರತಿಯನ್ನು ತೆಗೆದುಕೊಂಡು ಧಾರವಾಡಕ್ಕೆ
ನನ್ನ ಕಡೆಗೆ ಬಂದರು ಅದನ್ನು ನಾನು ಓದಿದೆ. ಅದು
ವಿಲಕ್ಷಣ ಉಗ್ರವಾಗಿತ್ತು ಅವರ ಬಗ್ಗೆ ಖಟ್ಲೆಯಾಗು
ವುದು ನಿಶ್ಚಿತವೆಂದು ನಾವು ತಿಳಿದುಬಿಟ್ಟೆವು. ಆದರೆ ಶಿಕ್ಷೆಗೆ
ಬಿಂದೂರಾಯರೂ ಅಂಜುತ್ತಿರಲಿಲ್ಲ ಆಗ, ಇಡೀ ಪ್ರೆಸ್ಸಿಗೆ
ಪ್ರೆಸ್ಸೇ ಜಪ್ತ ಆಗುವ ಕಾಯಿದೆ ಇತ್ತು. ೨೦—೨೫ ಸಾವಿರದ
ದೊಡ್ಡ ಕಾರಖಾನೆ ಏನು ಮಾಡಬೇಕೆಂಬುದನ್ನು ಯೋಚಿಸ
ಲಿಕ್ಕೆ ಸಹ ಅವಕಾಶವಿರಲಿಲ್ಲ ನಾವೂ ಅವರೂ ಸ್ಪೆಶಲ್
ಟಾಂಗಾ ಮಾಡಿಕೊಂಡು ಹುಬ್ಬಳ್ಳಿಗೆ ಓಡಿದೆವು ಪ್ರೆಸ್ಸಿನ
ವ್ಯವಸ್ಥೆಯನ್ನೆಲ್ಲ ಅವರ ತಮ್ಮ ಹನಮು ಇವನು ನೋಡು
ತ್ತಿದ್ದನು ಹೋದವರೇ ಓರಿಯೆಂಟಲ್ ಟ್ರಾನ್ಸಲೇಟರ
ಕಡೆಗೆ ಕಳಿಸುವ ಪ್ರತಿಗಳನ್ನು ತಡೆದು ಹಿಡಿದೆವು ಊರಲ್ಲಿ
ಹಂಚಲ್ಪಟ್ಟ ಪ್ರತಿಗಳನ್ನೆಲ್ಲ ಕಲೆಹಾಕಿದೆವು. ನಾನು
ಆಗಿಂದಾಗ ಹೊಸದೊಂದು ಲೇಖ ಬರೆದುತೆಗೆದೆ. ಆಗಿನ
ಕಾಲದಲ್ಲಿ ನಮಗೆ ಎಲ್ಲರ ಸಹಾನುಭೂತಿಯೂ ಇದ್ದುದರಿಂದ,
ನಾವು ಟಪಾಲಿಗೆ ಹಾಕಲ್ಪಡುವ ಎಲ್ಲ ಪ್ರತಿಗಳನ್ನೂ ತೆಗೆದು
ಕೊಂಡು ಅವುಗಳಲ್ಲಿ ಮುಂಚೆ ಮುದ್ರಿಸಿದ ಉಗ್ರ ಲೇಖದ
ಮೇಲೆ ನನ್ನ ಲೇಖವನ್ನು ಅಂಟಿಸಿ, ನಾನೂ ಬಿಂದೂರಾಯರೂ
ಹರ್ಡೀಕರನೂ ಮತ್ತು ಹಣಮು ಇವನೂ—ಇಷ್ಟೇ ಮಂದಿ

ಕೂಡಿ, ಬೆಳತನಕ ಕುಳಿತುಕೊಂಡು ಕೆಲಸ ಮುಗಿಸಿ, ಅವಕ್ಕೆ ಟಪಾಲ ಮುದ್ರೆ ಹೊಡಿಸಿ, ಬೆಳಗಾಗುವಷ್ಟರಲ್ಲಿ ಟಪಾಲ ಪೆಟ್ಟಿಗೆ ತುಂಬಿದೆವು. ಹೀಗೆ, ಆಗ ಒದಗಿದ ನಿಷ್ಕಾರಣ ಹಾನಿಯು ತಪ್ಪಿತು.

**ಸುರತ ಕಾಂಗ್ರೆಸ್ಸಿನ ಕಥೆ.**— ೧೯೦೭ ನೆಯ ಡಿಸೆಂಬರ ದಲ್ಲಿ ಸುರತ ಕಾಂಗ್ರೆಸ್ಸು ಮುರಿದದ್ದು ಸರ್ವಶ್ರುತವೇ ಇದೆ. ಈ ಕಾಂಗ್ರೆಸ್ಸಿಗೆ ನಾನೂ ನನ್ನ ಅನೇಕ ಮಿತ್ರರೂ ತಂಡ ತಂಡವಾಗಿ ಹೋಗಿದ್ದೆವು ಅಲ್ಲಿ ನಡೆದ ಒಂದು ಸಂಗತಿಯು ನೆನಪಿನಲ್ಲಿಡತಕ್ಕದ್ದಾಗಿದೆ. ಆ ಕಾಂಗ್ರೆಸ್ಸಿನಲ್ಲಿ ಕರ್ನಾಟಕ ದವರು ಕೂಡುವ ಸ್ಥಳವು ರಂಗಸ್ಥಳದಿಂದ ಅತಿ ದೂರ ದಲ್ಲಿತ್ತು ಟಿಳಕರು ಎದ್ದು ಮಾತಾಡಹತ್ತಿದ ಕೂಡಲೆ, ಅವರ ಭಾಷಣಕ್ಕೆ ಅಡ್ಡಿಯುಂಟಾಯಿತು ಟಿಳಕರು ಮೇಜಿನ ಮುಂದೆ ನಿಂತು ಮಾತಾಡುವವರು ಹಿಂದಿನ ಖುರ್ಚಿಯ ಮೇಲೆ ನಿಯೋಜಿತ ಅಧ್ಯಕ್ಷರು ಹೋಗಿ ಕುಳಿತು ಮಾತಾ ಡುವವರು. ಅಷ್ಟರಲ್ಲಿ ಒಬ್ಬನು ಟಿಳಕರ ಮೇಲೆ ಖುರ್ಚಿ ಯನ್ನು ಎತ್ತಿ ಒಗೆದನು ಕೂಡಲೆ ಮಂಟಪದ ತುಂಬೆಲ್ಲ ಗೊಂದಲವೆದ್ದಿತು. ಟಿಳಕರ ಜೀವಕ್ಕೆ ಎಲ್ಲಿ ಅಪಾಯವಾಗು ವುದೋ ಎಂದು ನಾವೆಲ್ಲ ಹೆದರಿದೆವು. ಎಲ್ಲಕ್ಕೂ ಮುಂದೆ ನಾನೂ ಕವಜಲಗಿ ಶ್ರೀನಿವಾಸರಾಯರೂ ಧಾವಿಸಿಹೋದೆವು. ನಮ್ಮ ಬೆನ್ನು ಹತ್ತಿಯೇ ನಮ್ಮ ಮಿಕ್ಕ ಮಿತ್ರರೂ ಧಾವಿಸಿ ಬರುತ್ತಿದ್ದರು. ಅಷ್ಟರಲ್ಲಿ ಶ್ರೀನಿವಾಸರಾಯರು ನಡುವಿನ ಖುರ್ಚಿಯನ್ನು ಎಡವಿದರು. ಅವರ ತಲೆಮೇಲಿನ ರುಮಾಲು ಬಿತ್ತು. ಅವರು ಅದನ್ನು ತೆಗೆದುಕೊಳ್ಳಲಿಕ್ಕೆ ಕೆಳಗೆ ಬಗ್ಗಿ ದರು. ಇದನ್ನು ಕಂಡು, ಸ್ವಯಂಸೇವಕನೊಬ್ಬನು ಅವರ

ಚಂಡಿಕೆ ಹಿಡಿದು ಕೈಯಲ್ಲಿದ್ದ ಚಬಕದಿಂದ ಅವರ ತಲೆಯ ಮೇಲೆ ಬಡೆಯುತ್ತಿದನು ಇದನ್ನು ನೋಡಿ ನಾನು ಸೈರಿಸ ಲಾರದೆ, ನನ್ನ ಕೈಯಲ್ಲಿದ್ದ ಕೊಡೆಯಿಂದ ಆ ಸ್ವಯಂಸೇವಕ ನಿಗೆ ಒಳೆತಾಗಿಯೇ ಥಳಿಸಿದೆನು ಕೂಡಲೇ ಆತನು ಓಡಿ ಹೋದನು ಮುಂದೆ, ನಂಟೆಸರಲ್ಲಿ ಪೋಲಿಸರು ಹೊಕ್ಕರು. ಲಠ್ ಲಠ್ ಇದ್ದವರನ್ನು ಹಿಡಿಯುತ್ತಿದರು ನಾನು, ಕವ ಜಲಗಿ, ಹೊಸಕೇರಿ ಅಣ್ಣಾಚಾರ್ಯರು ಕೂಡಿ ಹೊರಗೆ ಬರುತ್ತಿದ್ದಾಗ, ಅವರಿಬ್ಬರನ್ನು ಹಿಡಿದರು ನಾನು ತೆಳ್ಳಗಿದ್ದ ದ್ದರಿಂದ ನನ್ನನ್ನು ಬಿಟ್ಟುಕೊಟ್ಟರು ತೆಳ್ಳಗಿದ್ದದ್ದರ ಲಾಭ ಇದು. ನಾಲ್ಕಾರು ಗಂಟೆ ಲಾಕ್ ಅಪ್ಪಿನಲ್ಲಿ ಇಟ್ಟು ಅವರನ್ನು ಬಿಟ್ಟುಕೊಟ್ಟರು

**ತಂದೆಯ ವಿಷಯದಲ್ಲಿ ನಾನು ಮಾಡಿದ ಒಂದು ಅಪ ರಾಧ** — ಈ ಅವಧಿಯಲ್ಲಿ ನಾನು ನನ್ನ ತಂದೆಯ ವಿಷಯವಲ್ಲಿ ನನ್ನಿಂದಾದ ಒಂದು ಅಪರಾಧದ ಬಗ್ಗೆ ನನ್ನ ಸ್ಮೃತಿಯನ್ನು ಕೊಡುವೆ ನಾನು ನನ್ನ ತಂದೆಯವರಿಗೆ ನಾನು ಅವರ ಮೇಲೆ ಅವಲಂಬಿಸದೆ, ನನ್ನ ಸಂಸಾರವನ್ನು ಸಾಗಿಸುತ್ತೇ ನೆಂದು ಹೇಳಿದ್ದೆನಷ್ಟೇ ಅದನಷ್ಟು ಪರೀಕ್ಷಿಸಬೇಕೆಂದೋ ಏನೋ ದೇವರು ನನ್ನ ಮೇಲೆ ಅಂಥ ಪ್ರಸಂಗವನ್ನೇ ತಂದನು. ರಾಷ್ಟ್ರೀಯ ಶಾಲೆ ಹೊರಟಿತ್ತು ಅಭಿವಚನ ಕೊಟ್ಟವರೆಲ್ಲರೂ ಹಣದ ಸಹಾಯ ಮಾಡದ್ದರಿಂದ ನಾನು ಒದ್ದಾಡುತ್ತಿದ್ದೇನೆಂಬುದನ್ನು ನನ್ನ ತಂದೆಯವರು ನೋಡು ತ್ತಿದ್ದರು. ಆ ಉದ್ಯೋಗವನ್ನು ಬಿಟ್ಟು ಪುನಃ ವಕೀಲಿ ಮಾಡಲಿಕ್ಕೆ ಹೇಳಿದರೆ ನಾನು ಕೇಳುವವನಲ್ಲವೆಂಬುದು ಅವ ರಿಗೆ ಗೊತ್ತು. ಸಾಲದುದಕ್ಕೆ ಇದೇ ಕಾಲಕ್ಕೆ, ದೇಶದಲ್ಲಿ

ಅತ್ಯಾಚಾರಗಳು ನಡೆದಿದ್ದವು. ನಾನು ಆ ಚಳವಳಿಯಲ್ಲಿ ಪ್ರತ್ಯಕ್ಷವಾಗಿ ಇಲ್ಲದಿದ್ದರೂ ನನಗೂ ಸಾವರಕರ ಮುಂತಾದವರಿಗೂ ಸಂಬಂಧವಿತ್ತು, ಪತ್ರವ್ಯವಹಾರವಿತ್ತು ಎಂಬುದನ್ನು ಅವರು ಬಲ್ಲವರಾಗಿದ್ದರು ಇದಕ್ಕಾಗಿ, ನಮ್ಮ ಮನೆಯಲ್ಲಿದ್ದ ಪಿಸ್ತೂಲ ಮುಂತಾದವುಗಳನ್ನು ಅವರು ನನಗೆ ತಿಳಿಯದಂತೆ ಎಲ್ಲಿಯೋ ಬಾವಿಯಲ್ಲಿಯೋ, ನದಿಯಲ್ಲಿಯೋ, ಒಗೆದು ಕೂಡ ಬಿಟ್ಟಿದ್ದರು. ಆದರೂ ನನ್ನ ಮೇಲೆ ಆಗಿನ ದಬ್ಬಾಳಿಕೆಯ ಮೂಲಕ, ಎಲ್ಲಿಂದಲಾದರೂ ಪೇಚು ಬಂದೀತಲ್ಲಾ ಎಂಬ ಭಯದಿಂದ, ತಂದೆಯ ಕರುಳು ಕೊರಗುತ್ತಿತ್ತು, ಮರುಗುತ್ತಿತ್ತು, ಕರಗುತ್ತಿತ್ತು. ಈ ಪ್ರಕಾರ ಅವರ ಮನಸ್ಸಿನ ಸ್ಥಿತಿ ಇರುವ ಕಾಲದಲ್ಲಿ, ಒಂದು ದಿವಸ ನಾನು ನಾವಿರುವ ಬಂಗ್ಲೆಗೆ ಹೋದೆ (೧೬-೧೦-೧೯೦೮). ಮುದವೇಡೇಕರ ವೆಂಕಟರಾಯರೆದುರಿಗೆ ಆವರು ಇವೇ ಮಾತು ತಗೆದು, ನನ್ನ ಮನಸ್ಸನ್ನು ಒಲಿಸಲಿಕ್ಕೆ ಹೇಳುತ್ತಿದ್ದರು ಮತ್ತು ಸಿಟ್ಟಿನ ಭರದಲ್ಲಿ ಆತನ ಹೆಂಡಿರು ಮಕ್ಕಳ ಹೊಟ್ಟೆಗೆ ಹಾಕಿ, ನನ್ನ ಮಿಕ್ಕ ಮಕ್ಕಳ ಹೊಟ್ಟೆಗೇನು ಕೇರು ಹಾಕಲೋ ಎಂದು ಮುಂತಾಗಿ ಅನ್ನುವುದು ನನ್ನ ಕಿವಿಗೆ ಬಿತ್ತು ಆಗ ನನ್ನದು ಖಳಖಳ ಕುದಿಯುವ ರಕ್ತ; ಮೈಯಲ್ಲಿ ರಾಷ್ಟ್ರಸೇವೆಯ ಪೂರ್ಣ ಆವೇಶ! ಆ ಆವೇಶದ ಭರದಲ್ಲಿ, ನಾನು ಎಲ್ಲ ವಿವೇಕವನ್ನು ಬದಿಗಿಟ್ಟು, "ನಾನು ನಡುವೆ ಇಲ್ಲವೆಂದೇ ತಿಳಿದು, ನೀವು ಏನು ನಿಮ್ಮ ಆಸ್ತಿಯ ವ್ಯವಸ್ಥೆಯನ್ನು ಮಾಡಬೇಕೋ ಅದನ್ನು ಮಾಡಿರಿ" ಎಂದು ಅಂದುಬಿಟ್ಟೆ. ಆಗ ನಾನು ಏನು ಅಂದೆನೆಂಬುದರ ಎಚ್ಚರವೂ ಉಳಿಯಲಿಲ್ಲ. ನಾನು ಇಲ್ಲವೆಂದೇ ತಿಳಿಯಿರಿ ಎಂಬುದು ಅವರ

ಮನಸ್ಸಿಗೆ ಸ್ವಾಭಾವಿಕವಾಗಿಯೇ ಅತ್ಯಂತ ಬರೆ ಕೊಟ್ಟಿತು. ಆಗ ಅವರು ಸುಮ್ಮನಿದ್ದರು. ಆದರೆ ಅಂದಿನಿಂದ ಅವರು ನನ್ನೊಡನೆ ಮಾತಾಡುವುದನ್ನೇ ಬಿಟ್ಟುಕೊಟ್ಟರು. ಹೆಚ್ಚಿಗೇನೂ ಮಾಡಲಿಲ್ಲ ಅವರ ಉದಾಸೀನತೆಯು ನನ್ನ ಮನಸ್ಸನ್ನು ಚುಚ್ಚಿತು. ಮನೆಯಲ್ಲಿರುವುದೇ ಬೇಸರವಾಯಿತು. ನೆವ ತೆಗೆದು, ರಾಷ್ಟ್ರೀಯ ಶಾಲೆಯ ಹತ್ತಿರವೇ ಮನೆಮಾಡಿಕೊಂಡು ನನಗೆ ಇರಬೇಕಾಗುತ್ತದೆ, ಅಲ್ಲಿಗೆ ಹೆಂಡತಿಯನ್ನು ಕರೆದುಕೊಂಡು ಹೋಗುತ್ತೇನೆಂದು ಒಬ್ಬರ ಮುಖಾಂತರವಾಗಿ ಹೇಳಿ ಕಳುಹಿಸಿದೆ. ಅದಕ್ಕೂ ಅವರದು ಮೌನವೇ. ಬೇರೆ ಸಂಸಾರ ಹೂಡಿಕೊಂಡು ಎರಡು ವರ್ಷ ಇದ್ದೆ ಎಷ್ಟೋ ದಿವಸ ಅವರ ಸಿಟ್ಟಿನ ಕಾರಣವು ಹಣಗಳಿಸದೆ ನಾನು ಋಣಗೂಳು ತಿನ್ನುತ್ತಿದ್ದೆನೆಂಬುದು ಇರಬಹುದೆಂದು ನನ್ನ ತರ್ಕವಿತ್ತು. ಅವರ ಸಿಟ್ಟಿನ ನಿಜವಾದ ಕಾರಣವು ನನಗೆ ಹೊಳೆದಿರಲಿಲ್ಲ. ಮುಂದೆ ಅದು ಆಕಸ್ಮಿಕವಾಗಿ ನನ್ನ ಕಿವಿಗೆ ಬಂದಿತು. ಅವರ ಮನಸ್ಸಿಗೆ ಹತ್ತಿದ್ದು "ನಾನು ಇಲ್ಲವೆಂಬುದಾಗಿ ತಿಳಿಯಿರಿ" ಎಂಬ ವಾಗತ್ಯದ ಮಾತು. ಅದು ನನಗೆ ತಿಳಿದೊಡನೆ ನಾನು ಉದ್ದವಾದವೊಂದು ಪತ್ರವನ್ನು ಬರೆದು 'ನಾನು ಸರ್ವಸ್ವೀ ಅಪರಾಧಿಯು, ನನ್ನನ್ನು ಕ್ಷಮಿಸಬೇಕು.' ಎಂದು ಕ್ಷಮೆ ಬೇಡಿಕೊಂಡೆನು. 'ತಪ್ಪು ಒಪ್ಪಿಕೊಳ್ಳೋ ತಪ್ಪು ಒಪ್ಪಿಕೊಳ್ಳೊ' ಎಂಬ ದಾಸರ ವಚನವು ನನ್ನ ನೀತಿವಾಕ್ಯವು. ತಪ್ಪು ಒಪ್ಪಿಕೊಳ್ಳುವುದನ್ನು ನಾನು ನನ್ನ ಜೀವನದ ಒಂದು ಸೂತ್ರವಾಗಿಯೇ ಇಟ್ಟುಕೊಂಡಿರುವೆ. ಇರಲಿ ಅವರ ಸಿಟ್ಟು ಝುರ್ರನೆ ಇಳಿದುಹೋಯಿತು. ಅಷ್ಟರಲ್ಲಿ ಮುಂದೆ ರಾಷ್ಟ್ರೀಯ ಶಾಲೆಯೂ ನಿಂತುಹೋಯಿತು. ನಾನು ವಕೀಲಿ

ಯನ್ನು ಪ್ರಾರಂಭಮಾಡಿದೆ. ವಕೀಲಿ ಉದ್ಯೋಗವು ಭರ ಭರಾಟೆಯಿಂದ ನಡೆಯಿತು ಮನೆತನದ ಕಾರಭಾರವನ್ನೆಲ್ಲ ಅವರು ನನಗೆ ಒಪ್ಪಿಸಿದರು ಮನಸ್ಸು ಮಾಡಿದರೆ ವ್ಯವಹಾರ ವನ್ನು ಕುಶಲತೆಯಿಂದ ನಾನು ಮಾಡಬಲ್ಲೆನೆಂದು ಅವರಿಗೆ ಮನವರಿಕೆಯಾಯಿತು. ಆದಕಾರಣ, ಅವರು ಸಾಯುವಾಗ ನನ್ನನ್ನು ತಮ್ಮ ಯಾವತ್ತು ಆಸ್ತಿಗೆ ಟ್ರಸ್ಟಿಮಾಡಿ, ಮೃತ್ಯು ಪತ್ರಮಾಡಿದರು. ತಮ್ಮಂದಿರ ಅಲ್ಪವಯಿ ಮಕ್ಕಳ ತಾಯಂದಿರ ಸಮ್ಮತಿಯಿಂದ, ಅವರ ಸಂರಕ್ಷಣದಾರನನ್ನಾಗಿ ನೇಮಿಸಿ ಸತ್ತರು.

## ಗುಪ್ತಯುಗ (೧೯೧೦-೧೫)

**ಪ್ರಸ್ತಾವನೆ.**—ಗುಪ್ತಯುಗವೆಂಬುದಕ್ಕೆ ಎರಡು ಅರ್ಥ ಗಳು (೧) ಗುಪ್ತಚಳವಳಿ ಯುಗ ಅಂದರೆ ಕ್ರಾಂತಿಕಾರಕ ಚಳವಳಿ ಯುಗ (೨) ಸಾರ್ವಜನಿಕ ಚಳವಳಿಯು ಗುಪ್ತಗಾಮಿನಿ ಯಾದ ಅಂದರೆ ಅದೃಶ್ಯವಾದ ಯುಗ ಇಲ್ಲಿ ನಾನು ಅದನ್ನು ಎರಡನೆಯ ಅರ್ಥದಲ್ಲಿ ಉಪಯೋಗಿಸಿರುವೆ ಕ್ರಾಂತಿಕಾರಕ ಚಳವಳಿಯ ಯುಗದ ಉಗಮವು ೧೯೦೮ರಲ್ಲಿಯೇ ಆಗಿತ್ತು ಅದರ ಮೂಲಕ, ಸರಕಾರಕ್ಕೆ ಕಾಯದೇಶೀರ ಚಳವಳಿಯ ಮೇಲೆ ತನ್ನ ನಖಪಂಜರವನ್ನು ಹಿರಿಯುವುದಕ್ಕೆ ಆಸ್ಪದ ದೊರೆಯಿತು. ಮತ್ತು ೧೯೧೦ನೆಯ ಇಸ್ವಿಯ ಸುಮಾರಕ್ಕೆ ದೇಶದೊಳಗಿನ ಸಾರ್ವಜನಿಕ ಚಳವಳಿಗಳೆಲ್ಲವೂ ತಣ್ಣಗಾದವು. ಕ್ರಾಂತಿಕಾರಕ ಚಳವಳಿಯ ಬೇಗೆಯು ಕರ್ನಾಟಕದವರೆಗೆ ವಿಶೇಷವಾಗಿ ಹಬ್ಬಲಿಲ್ಲ ಹಬ್ಬಹಬ್ಬುವಷ್ಟರಲ್ಲಿಯೇ ಆರಿ ಹೋಯಿತು. ಲಾರ್ಡ ಮಿಂಟೋ ಇವರು ಒಮ್ಮೆ ಗೋವಾ ಪ್ರಾಂತಕ್ಕೆ ವಿಜಾಪುರದ ಮೇಲಿಂದ ಹಾಯ್ದು ಹೋಗುವಾಗ,

ಅವರ ಕೊಲೆ ಮಾಡಬೇಕೆಂಬ ವಿಚಾರವು ಕೆಲವು ತರುಣರ ತಲೆ
ಯಲ್ಲಿ ಹೊಕ್ಕಿತ್ತು. ಆದರೆ, ಅದು ಎಷ್ಟು ಅಪಕ್ವವಿತ್ತೆಂ
ದರೆ, ಈ ತರುಣರಿಗೆ ತಿಳಿಯುವ ಮೊದಲೆಯೇ ಲಾರ್ಡ
ಮಿಂಟೋ ಇವರ ಗಾಡಿಯು ಹೊರಟುಹೋಗಿತ್ತು. ಕ್ರಾಂತಿ
ಕಾರಕ ಚಳವಳಿಯ ಉಗಮವು ಬಂಗಾಲದಲ್ಲಿ ೧೯೦೮ರಲ್ಲಿ
ಆಯಿತು. ಅದು ಹುಟ್ಟುವುವಕ್ಕೆ ಸರಕಾರದ ದಬ್ಬಾಳಿಕೆಯ
ಉಗ್ರಸ್ವರೂಪವು ಕಾರಣ, ಮತ್ತು ಪಾಶ್ಚಾತ್ಯರನ್ನು ಪಾಶ್ಚಾ
ತ್ಯರ ಅಸ್ತ್ರಗಳಿಂದಲೇ ಸದೆಬಡಿಯಬೇಕೆಂಬ ಮೋಹವು
ಕಾರಣ. ಲಾರ್ಡ ಕರ್ಝನರ ಕಾಲದಲ್ಲಿ ತರುಣರಲ್ಲಿ ಅಸಂ
ತೋಷದ ರಕ್ತವು ಕುದಿಯುತ್ತಲೇ ಇತ್ತು. ೧೯೦೦-೩ರ
ವರೆಗೆ ಆದ ಬೋಅರ ಯುದ್ಧದಲ್ಲಿ ಇಂಗ್ಲಂಡವು ವಿಜಯಿ
ಯಾದರೂ ಹಣ್ಣಾಯಿತು. ೧೯೦೪ರಲ್ಲಿ ರೂಸೊ ಜಪಾನ
ಯುದ್ಧವಾಯಿತು. ೧೯೦೫ರಲ್ಲಿ ವಂಗಭಂಗ ಚಳವಳಿ; ೧೯೦೬
ರಲ್ಲಿ ರಾಷ್ಟ್ರೀಯತ್ವದ ಉದಯ ಮತ್ತು ಸ್ವರಾಜ್ಯದ ಧ್ಯೇಯ,
೧೯೦೭ರಲ್ಲಿ ಅಫಗಾನಿಸ್ತಾನದ ಅಮೀರರಾದ ಹಬೀಬ-ಉಲ್ಲಾ
ಖಾನರ ಹಿಂದುಸ್ಥಾನದಲ್ಲಿಯ ಪ್ರವಾಸ, ಅವರು ಬಂದುಹೋದ
ಕೂಡಲೆ ಲಾಲಾ ಲಜಪತರಾಯರನ್ನು ಹೇಳದೆ ಕೇಳದೆ ಎತ್ತಿ
ಒಯ್ದು ೧೦—೫—೧೯೦೭ನೆಯ ದಿವಸ ಅವರನ್ನು ಗಡಿಪಾರು
ಮಾಡಿದ್ದು, ವೀರನವಾಲ ಎಂಬ ಸಾಧ್ವಿಯು ಯುರೋಪಿಯನ್
ಸ್ಟೇಶನ್‌ಮಾಸ್ತರನ ಬಲಾತ್ಕಾರಕ್ಕೆ ಒಳಗಾಗಿ ಆತ್ಮಹತ್ಯೆ
ಮಾಡಿಕೊಂಡದ್ದು, ೧೯೦೭ನೆಯ ಡಿಸೆಂಬರದಲ್ಲಿ ಸುರತದಲ್ಲ
ಕಾಂಗ್ರೆಸ್ಸು ಮುರಿದದ್ದು, ಇವೇ ಮುಂತಾದ ಸಂಗತಿಗಳು
ತರುಣರ ಮನಸ್ಸನ್ನು ಖಳವಳಗೊಳಿಸಿದ್ದವು. ಈ ಸಂದರ್ಭ
ದಲ್ಲಿ, ಬಂಗಾಲವಲ್ಲದ ಬ್ಯಾರಿಸಾಲ ರಾಜಕೀಯ ಪರಿಷತ್ತಿ

ನಲ್ಲಿ ಸರಕಾರದ ಅಧಿಕಾರಿಗಳು ನಿಷ್ಕಾರಣವಾಗಿ ಜನರನ್ನು ಮೈಹುಳಿ ಥಳಿಸಿದರು 'ವಂದೇ ಮಾತರಂ' ಪದವನ್ನು ಓಣಿಗಳಲ್ಲಿ ಅನ್ನಕೂಡದೆಂದು ಅಧಿಕಾರಿಗಳ ಹಟ, ಅಂದೇ ಬಿಟ್ಟೇವೆಂದು ಜನರ ಆಗ್ರಹ. ಜನರು ಪದಹಾಡುತ್ತ ನಡೆದರು; ಪೋಲಿಸರು ಅವರ ಮೇಲೆ ಏರಿಹೋದರು. ಸುರೇಂದ್ರನಾಥ ಬಾನರ್ಜಿಯವರನ್ನು ಹಿಡಿದು ಅವರಿಗೆ ೨೦೦ ರೂ. ದಂಡ ಮಾಡಿದರು. ಅದನ್ನು ಆಗಿಂದಾಗ ತುಂಬಿ, ಮತ್ತೆ ಮೆರವಣಿಗೆ ಹೊರಟಿತು. ಗೂರ್ಖಾಶಿಪಾಯರು ಅತ್ಯಾಚಾರ ನಡಿಸಿದರು. ಹೀಗೆ ಒಂದಕ್ಕಿಂತ ಒಂದು ಉಗ್ರಸಂಗತಿಗಳು ನಡೆದಕೂಡಲೆ ತರುಣರ ಪಿತ್ತವು ನೆತ್ತಿಗೆ ಏರಿತು ಅದರ ಪರಿಣಾಮವಾಗಿ ೧-೪-೧೯೦೮ನೆಯ ಇಸ್ವಿಯ ದಿವಸ ಮುಜಫರಪುರದಲ್ಲಿ ಯುರೋಪಿಯನ್ನರ ಕೊಲೆ ಆಯಿತು ಕ್ರಾಂತಿಕಾರಕ ಚಳವಳಿಗೆ ಪ್ರಾರಂಭ ಮುಂಪೆ ಸಿ ಆಯ್.ಡಿ. ಜನರ ಕೊಲೆ ಮುಂತಾದವುಗಳು ನಡೆದವು ೧೯೦೯ನೆಯ ಡಿಸೆಂಬರದಲ್ಲಿ ನಾಶಿಕದಲ್ಲಿ ಜ್ಯಾಕ್ಸನ್ ಎಂಬ ಕಲೆಕ್ಟರನ ಕೊಲೆ ಆಯಿತು. ಹೀಗೆ ಅದು ಹಬ್ಬುತ್ತ ನಡೆಯಿತು ಈ ಸಂಧಿಯನ್ನು ಸಾಧಿಸಿ, ಸರಕಾರದವರು ಅನೇಕ ಯುಕ್ತಿಗಳಿಂದ ಸಾರ್ವಜನಿಕಚಳವಳಿಗಳೆಲ್ಲವನ್ನೂ ನಿಲ್ಲಿಸಿಬಿಟ್ಟರು. ೧೯೧೦ನೆಯ ಇಸ್ವಿಯ ಸುಮಾರಕ್ಕೆ ದೇಶದಲ್ಲಿ ಚಳವಳಿಗಳೆಲ್ಲವೂ ಒಹುಶಃ ನಿಂತುಹೋದವು. ಮುಂದೆ ೧೯೧೫ರ ವರೆಗೆ ವಿಶೇಷ ಚಳವಳಿಗಳಾಗಲಿಲ್ಲ. ಅದಕ್ಕೇನೇ ಈ ಯುಗಕ್ಕೆ ಗುಪ್ತಯುಗವೆಂದು ಹೆಸರಿಟ್ಟಿರುವೆನು. ಏಕೆಂದರೆ, ಈ ಕಾಲದಲ್ಲಿ ರಾಷ್ಟ್ರೀಯತ್ವ ಭಾವನೆಯು ಸುಪ್ತವಾಗಿಯೂ ಇದ್ದಿಲ್ಲ, ಲುಪ್ತವಾಗಿಯೂ ಹೋಗಿದ್ದಿಲ್ಲ. ಅದರ ಪ್ರವಾಹವು ದೇಶಭಕ್ತರ ಹೃದಯದಲ್ಲಿ ಗುಪ್ತವಾಗಿ ಹರಿಯು

ತ್ತಿತ್ತು. ಆದರೆ ಕೆಲವು ಸ್ಮೃತಿಗಳನ್ನು ನಾನು ಈ ಪ್ರಕರ
ದಲ್ಲಿ ಕೊಡುವೆ. ಅದಕ್ಕಿಂತ ಮುಂಚೆ, ಬಂಗಾಲದಲ್ಲಿ ಕ್ರಾಂ
ತಿಕಾರಕ ಚಳವಳಿಯು ನಡೆದಾಗ, ಇತ್ತ ಕಡೆಯ ವಾತಾವ
ರಣವು ಎಷ್ಟು ಸಂಶಯಗ್ರಸ್ತವಾಗಿತ್ತೆಂಬುದನ್ನು ತೋರಿಸುವ
ದರ ಸಲುವಾಗಿ ನನ್ನ ಸ್ಮೃತಿಗಳ ಒಂದೆರಡು ಪ್ರಸಂಗಗಳನ್ನು
ಕೊಡುವೆ

**ರ್‍ಯಾಂಡಸಾಹೇಬರ ಕೊಲೆಯೂ ಬಲಕುಂದಿ ಹಣ
ಮಂತರಾಯರೂ:**—೧೮೯೭ನೆಯ ಇಸ್ವಿಯಲ್ಲಿ ಪುಣೆಯ
ರ್‍ಯಾಂಡ ಸಾಹೇಬರ ಕೊಲೆಯಾದ ವಿಷಯವನ್ನು
ಹಿಂದಕ್ಕೆ ಉಲ್ಲೇಖಿಸಿಯೇ ಇರುವೆನಷ್ಟೆ. ಅದು ಆಗಿ ಹತ್ತು
ವರ್ಷಗಳಾಗಿ ಹೋಗಿದ್ದವು. ಆದರೂ, ಅಧಿಕಾರಿಗಳು ಅದರ
ಸಂಬಂಧವನ್ನು ಹೇಗಾದರೂ ಮಾಡಿ, ಕೆಲವು ದೇಶಭಕ್ತರಿ
ಗೆ ಹಚ್ಚಬೇಕೆಂಬ ಹಂಚಿಕೆಯಲ್ಲಿ ಇದ್ದಂತೆ ತೋರುತ್ತದೆ.
ನಮ್ಮ ತಂದೆಯ ಸೋದರ ಅಳಿಯಂದಿರಾದ ಬಲಕುಂದಿ
ಸಣ್ಣ ಹಣಮಂತರಾಯರ ಮನೆತನ ಗದುಗಿನಲ್ಲಿ ಇರುತ್ತಿ
ದ್ದರು. ಸಣ್ಣ ಹಣಮಂತರಾಯರು ಯಲಬುರ್ಗಿಯಲ್ಲಿ ತ
ಶೀಲದಾರರಿರುವಾಗ ರ್‍ಯಾಂಡಸಾಹೇಬರ ಕೊಲೆಮಾಡಿದ ಚಾಫೆ
ಕರರು ಗುಪ್ತವೇಷದಲ್ಲಿ ಅವರ ಆಶ್ರಯದಲ್ಲಿ ಇದ್ದರಂತೆ.
ಅವರ ಹೆಂಡತಿಯ ಹತ್ತರ ಆ ಸಂಬಂಧದ ಕಾಗದಪತ್ರ
ಗಳೇನಾದರೂ ಸಿಕ್ಕಬಹುದೆಂದು ಅಧಿಕಾರಿಗಳಿಗೆ ಆಶೆ. ಸಿ
ಆಯ್ ಡಿ ಖಾತೆಯ ಅಧಿಕಾರಿಗಳಾದ ಪಾಗೆ ಎಂಬವರು
ಹಲಸಗಿಯಲ್ಲಿದ್ದ ಪಾಂಡುರಂಗ ಸಮೀರಣಾಚಾರ್ಯರ ಕಡೆ
ಹೋಗಿ ಸಣ್ಣ ಹಣಮಂತರಾಯರ ಹೆಂಡತಿಯ ಹತ್ತರ
ಕೆಲವು ಕಾಗದಪತ್ರಗಳಿವೆ, ಅವು ಒಂದು ಪೆಟ್ಟಿಗೆಯ ಸ

ವಾಗಿ ತಮಗೆ ಬೇಕಾಗಿವೆ, ಅವನ್ನು ಕೊಡಿಸಿದರೆ ಉಪ ಕಾರವಾಗುವುದೆಂದು ಅವರಿಗೆ ಕೇಳಿದರು ಪಾಂಫ್ರಿ ಸಮೀರ ಣಾಚಾರ್ಯರು ನನ್ನ ತಂದೆಯವರನ್ನು ಕೇಳುತ್ತೇವೆಂದು ಹೇಳಿದರು ನಮ್ಮ ಮನೆಗೆ ಬಂದು ನಮ್ಮ ತಂದೆಯವ ರನ್ನು ಕೇಳಿದರು ಪಾಗೆಯವರ ಮಾತಿನಮೇಲಿಂದ ನಮ್ಮ ತಂದೆಯವರಿಗೇನೋ ಸಂಶಯ ಬಂತು. ಇವರಿಂದ ನಿಷ್ಕಾ ರಣವಾಗಿ ಸಣ್ಣ ಹಣಮಂತರಾಯರ ಹೆಂಡತಿಗೆ ತ್ರಾಸ ಆಗಬಹುದೆಂದು, ನನ್ನನ್ನು ಗಡಗಿಗೆ ಮುಂದೆ ಕಳುಹಿಸಿ ಕೊಟ್ಟರು ನಾನು ಹೋಗಿ ಅವರಿಗೆ ಈ ಸುದ್ದಿ ತಿಳಿಸಿದೆ ಅವರು ಗಾಬರಿಯಾಗಿ ಇದ್ದಬಿಟ್ಟ ಕಾಗದಪತ್ರಗಳನ್ನೆಲ್ಲ ನಾಶ ಮಾಡಿಬಿಟ್ಟರು ನಮ್ಮ ತಂದೆಯವರು ಅವರನ್ನು ಕರೆದು ಕೊಂಡು ತಿಂಗಳೊಪ್ಪತ್ತಿನವರೆಗೆ ಆಲೂರಲ್ಲಿ ಇಟ್ಟುಕೊಂಡರು ಕಾಗದಪತ್ರಗಳಿಲ್ಲವೆಂದು ಪಾಗೆಯವರಿಗೆ ತಿಳಿಸಿತು

**ಗೋವೆಯ ಆಬಾಸಾಹೇಬನ ಸ್ಮೃತಿ:**—ಆಗಿನ ವಾತಾ ವರಣವು ಎಷ್ಟು ಸಂದೇಹಮಯವಾಗಿತ್ತೆಂಬುದಕ್ಕೆ ಆ ಕಾಲದ ಮತ್ತೊಂದು ಸ್ಮೃತಿ ಕೊಡುತ್ತೇನೆ ಗೋವೆಯಲ್ಲಿ ಆಬಾ ಸಾಹೇಬ ಎಂಬೊಬ್ಬ ವಿಲಕ್ಷಣ ಪುರುಷ ಆತನು ಸ್ವದೇಶಿ ಚಳವಳಿಯ ದಿನಗಳಲ್ಲಿ ಸಾಬೂಣ, ಅತ್ತರು, ಮುಂತಾದ ಅನೇಕ ಚಿಕ್ಕಪುಟ್ಟ ಉದ್ಯೋಗಗಳನ್ನು ಕಲಿಸುವುದೊಂದು ಶಾಲೆಯನ್ನು ತೆಗೆದಿದ್ದ ಆತನ ಹತ್ತರ ಸುಮಾರು ೨೦೦ ತರುಣ ವಿದ್ಯಾರ್ಥಿಗಳಿದ್ದರು ಧಾರವಾಡದಿಂದ ಪೇರಜಾ ಬಾದೆ ಮುಂತಾದವರೂ ಹೋಗಿ ಅಲ್ಲಿ ಶಿಷ್ಯರಾಗಿದ್ದರು ಅಲ್ಲಿಗೆ ಕಲಿಯಲಿಕ್ಕೆ ನನ್ನ ತಮ್ಮ ರಾಮೂನನ್ನು ಕಳಿಸಿದೆ. ಆತನು ಆಬಾಸಾಹೇಬರಿಗೆ ಭೆಟ್ಟಿಯಾದ. ಶಾಲೆಯೆಂದರೆ

ದೊಡ್ಡದೊಂದು ಕಾಂಪೌಂಡು ತಿರುಗಾಡಿ ನೋಡಿಬಂದ. ಹೋಗುವಾಗ ತನ್ನದೊಂದು ದೊಡ್ಡ ಕೆಮೆರಾ ಒಯ್ದಿದ್ದ. ಆ ಶಾಲೆಯ ಫೋಟೋಗಳನ್ನು ತಕ್ಕೊಂಡ ಕೂಡಲೆ, ಅಬಾ ಸಾಹೇಬನಿಗೆ ಈತನೊಬ್ಬ ಸಿ ಆಯ್ ಡಿ ಇರಬೇಕೆಂದು ಸಂಶಯ ಬಂತು ಆದಕಾರಣ ಆತನನ್ನು ಶಾಲೆಯಲ್ಲಿ ಸೇರಿಸಿ ಕೊಳ್ಳದೆ ತಿರುಗಿ ಕಳಿಸಿಬಿಟ್ಟ. ಅಲ್ಲಿ ಬಾಂಬು ಮಾಡುತ್ತಾ ರೆಂಬ ಸಂಶಯವುಂಟಾಗಿ ಆ ಶಾಲೆಯು ನಿಂತುಹೋಯಿತು ಅಬಾಸಾಹೇಬನೊಮ್ಮೆ ಧಾರವಾಡಕ್ಕೆ ಬಂದು ನನಗೆ ಭೆಟ್ಟಿ ಯಾದಾಗ, ನಾನು ನನ್ನ ತಮ್ಮನನ್ನು ಏಕೆ ಸೇರಿಸಿಕೊಳ್ಳ ಲಿಲ್ಲವೆಂದು ಕೇಳಿದಾಗ ಈ ಮಾತು ಹೇಳಿದ

ಇರಲಿ ಒಟ್ಟಿಗೆ ಆ ಗುಪ್ತಯುಗದ ಸಂಗತಿಗಳು ಕೊನೆಯ ವರೆಗೆ ಗುಪ್ತವಾಗಿಯೇ ಉಳಿಯುವವು ಪ್ರೊ ನಿಜಾಪುರ ಕರರಂಥ ಸಾತ್ವಿಕರಿಗೆ ಸಹ, ಆ ಗುಪ್ತಪಿಶಾಚಿಯ ಬಾಧ ತಗಲಿತು. ಅವರ ಡಾಯರಿಯಲ್ಲಿಯ ಯಾವುದೋ ಒಂದು ಬರಹದಮೇಲಿಂದ ಅವರಿಗೆ ಬಹಳ ಕಷ್ಟ ಅನುಭವಿಸಬೇಕಾ ಯಿತು ಆಗಿನಿಂದ, ಡಾಯರಿಗಳಲ್ಲಿ ಕೆಲವು ಮಹತ್ವದ ವಿಷಯಗಳನ್ನು 'ಬರೆಯುವುದನ್ನೇ ನಾವೂ ಅನೇಕರೂ ಬಿಟ್ಟು ಕೊಟ್ಟೆವು. ನಿಜವಾಗಿ ಆ ಗುಪ್ತಯುಗದ ನೆನಪಾಯಿತೆಂದರ ಜಗತ್ತಿನ ಇತಿಹಾಸವೆಲ್ಲವೂ ಸುಳ್ಳು, ಇತಿಹಾಸವೆಂದು ಅನಿಸುತ್ತದೆ. ಇರುವ ಜಗತ್ತೇ ಬೇರೆ, ಕಾಣುವ ಜಗತ್ತೇ ಬೇರೆ. ಇತಿಹಾಸವೆಂದರೆ, ಇದ್ದ ಸಂಗತಿಗಳನ್ನು ಇದ್ದಕ್ಕಿ ದ್ದಂತೆಯೇ ಹೇಳುವುದಲ್ಲವೆ? ಅಂಥ ಇತಿಹಾಸವು ನಮಗೆ ಸಿಕ್ಕಿದೆಯೆಂದು ಯಾವ ದೇಶವಾದರೂ ಎದೆತಟ್ಟಿ ಹೇಳ ಬಹುದೊ? ಇತಿಹಾಸವೇನಿಯೇ, ನಾವು ನಿಜವಾದುದನ್ನೇ,

ಹೇಳುತ್ತೇನೆಂಬ ನಿನ್ನ ಪ್ರತಿಜ್ಞೆ, ಟೊಳ್ಳು-ಸುಳ್ಳು, ನಿನ್ನದು ಜೊಳ್ಳು ಆಡಂಬರ. ನೀನೊಂದು ಆಳವಾದ ಸಮುದ್ರದ ತೆರೆ; ನೀನು ಬರೀ ಬುರುಗು. ನಿನ್ನ ಹೊಟ್ಟೆಯಲ್ಲಿ ಎಷ್ಟೆಷ್ಟು ರತ್ನಗಳೂ ತಿಮಿಂಗಿಲುಗಳೂ ಅಡಗಿರುವವೋ ಏನೋ! ಎಷ್ಟು ನಿಷ್ಕಾಮಯೋಗಿಗಳು ಹೇಳಹೆಸರಿಲ್ಲದೆ ಹೋಗಿರುವರೋ ಏನೋ! ಎಷ್ಟು ವೀರರೂ ಕ್ರೂರರೂ ಕಾಣದಾಗಿರುವರೋ ಏನೋ! ಪ್ರತ್ಯಕ್ಷ ನಮ್ಮ ಕಣ್ಣೆದುರಿಗೆ ಸತ್ಯಸಂಗತಿಗಳ ಕೊಲೆಯಾಗುವುದನ್ನು ನಾವು ಈಗ ನೋಡುವುದಿಲ್ಲವೆ? ಇತಿಹಾಸವೆಂಬುದು ಸತ್ಯಸಂಗತಿಗಳ ಸಮಾಧಿಯಮೇಲೆ ಕಟ್ಟಿದ ಗೋರಿ. ಇತಿಹಾಸವು ಬಿಚ್ಚಿಡುವುದಕ್ಕಿಂತ ಬಚ್ಚಿಡುವ ಸಂಗತಿಗಳೇ ಬಹಳ. ಹಾಗಾದರೆ, ಅದನ್ನೋದುವುದು ವ್ಯರ್ಥವೆನ್ನಬೇಕೆ? ಇತಿಹಾಸವನ್ನು ಕಲಿಯುವುದೆಂದರೆ, ಮಸಣದಲ್ಲಿ ಹುಗಿದ ಎಲುಬುಗಳನ್ನು ಅಗೆದು ತೆಗೆಯುವುದು ಎಂದು ತಿಳಿಯಬೇಕೆ? ಹಾಗೂ ಇಲ್ಲ. ಇತಿಹಾಸವು ವ್ಯರ್ಥವಲ್ಲ. ಅದನ್ನು ಅಭ್ಯಾಸ ಮಾಡುವುದು ಒಂದು ಕಲೆ, ಒಂದು ಶಾಸ್ತ್ರ, ಒಂದು ಗಹನ ತತ್ವಜ್ಞಾನ. ಇತಿಹಾಸದ ಮೋರೆಯ ಮೇಲಿನ ಮುಸುಕು ಹಾರಿಹೊಡೆದು, ಒಳಗೆ ದಿಟ್ಟಿಸಿ ನೋಡಬೇಕಾಗುತ್ತದೆ. ಅದನ್ನು ಕಣ್ಣೊಳಗೆ ಅಂಜನಹಾಕಿ ಕಾಣಬೇಕಾಗುತ್ತದೆ, ಅದರೊಳಗಿನ ಪದಾರ್ಥಗಳನ್ನು "ಕ್ಷ" ಕಿರಣಗಳಿಂದ ಸಂಶೋಧಿಸಬೇಕಾಗುತ್ತದೆ. ಅವನ್ನು ಪಾತಾಳಗಡ ಹಾಕಿ ಎತ್ತಬೇಕಾಗುತ್ತದೆ. ಒಳಗಿನ ರತ್ನಗಳನ್ನು. ಇತಿಹಾಸ ಸಂಶೋಧಕರು ಮೋಹೆಂಜೊದಾರೋ ಪಟ್ಟಣವನ್ನು ಹುಡುಕಿ ತೆಗೆದರಷ್ಟೇ. ಹಾಗೆಯೇ ಸ್ವತಃ ಇತಿಹಾಸವೆಂಬುದೆಲ್ಲವೂ ಕೂಡ ಒಂದು ಮೊಹೆಂಜೊದಾರೋ ಪಟ್ಟಣವಿದ್ದಂತೆಯೇ ಇರು

ತ್ತದೆ. ಅದರೊಳಗಿನ ಸಾರವನ್ನು ಕಂಡುಹಿಡಿಯುವುದಕ್ಕೆ
ಒಳ್ಳೇ ನಿಷ್ಣಾತರಾದ ಸಂಶೋಧಕರು ಬೇಕಾಗುತ್ತದೆ. ಜಾಗ್ರತ
ಮನಸ್ಸಿನ ಕಾರ್ಯಕ್ಕಿಂತಲೂ ಸುಪ್ತಮನಸ್ಸಿನ (Sub
Conscious Mind) ಕಾರ್ಯಗಳೇ ಮಹತ್ವದವಂತೆ ಆಗಿದೆ.

ಇತಿಹಾಸದ ಸ್ಥಿತಿ

ಇರಲಿ, ಇನ್ನೇನೂ [illegible] ಗದ್ಯ [illegible] ಸಂಗತಿ
ಗಳು ಗುಪ್ತವಾಗಿಯೇ ಉಳಿಯಲು [illegible] ಕೇವ
ಲ ಸ್ಮೃತಿಗಳನ್ನು ಕೊಡುವೆ.

**ಕರ್ನಾಟಕದ ಸ್ಥಿತಿ** — ಧಾರವಾಡದಲ್ಲಿ ಅಗಲಿದ ವೃತ್ತ
ಪತ್ರಿಕೆಗಳು ಹೊರಡುತ್ತಿದ್ದವು. ೧೯೧೦ರಲ್ಲಿ [illegible]
ಯಲ್ಲಿ ಸರಕಾರದವರು [illegible] ಕಾಸು ಮಾಡಿ
ಕೊಡು ವೃತ್ತಪತ್ರಿಕೆಗಳಿಗೆ [illegible] ಅಗ
[illegible] ಕೇಳಿದರ [illegible] ಹೋಗಬೇಕಾ
ಗಿತ್ತು. [illegible] ಉಪಾಯ?
ಈ ಕಾರಣ [illegible] ಅನೇಕ ಪತ್ರಗಳು ತಾವಾಗಿಯೇ
ನಿಂತುಹೋದವು. ರಾಷ್ಟ್ರಮತ, ವಿಹಾರಿ, ಕಾಳ, ಗುಜ
ರಾಥಿ, ಬಾಲಾ ಮುಂತಾದ ಪತ್ರಗಳು ಅಸ್ತವಾಗಿಹೋದಂತೆ
ಇಲ್ಲಿಯೂ ಧಾರವಾಡವೃತ್ತ, ಚಂದ್ರೋದಯ, ಹಿಂದುಸ್ಥಾನ
ಸಮಾಚಾರ, ರಾಜಹಂಸ, ಕ್ಷೇಮಸಮಾಚಾರ ಮುಂತಾದ
ಪತ್ರಿಕೆಗಳು ನಿಂತುಹೋದವು. ಉಳಿದವು ಉಗ್ರ ಲೇಖ
ಬರೆಯಲಿಕ್ಕೆ ಹೆದರಹತ್ತಿದವು. ಲೋಕಬಂಧು ಮತ್ತು ವಿಜಾ
ಪುರದ ಕರ್ನಾಟಕ ವೈಭವ ಇವು ರಾಜಕಾರಣದ ಸಂನ್ಯಾಸ
ವನ್ನು ಸ್ವೀಕರಿಸಿದವು. ಕನ್ನಡ ಕೇಸರಿಯು ಅಜ್ಞಾತವಾಸ
ವನ್ನು ಕೈಕೊಂಡಿತು. ನಾನು ಕರ್ನಾಟಕ ವೃತ್ತದಲ್ಲಿ ಸಂಪಾ

ದಕೀಯ ಲೇಖಗಳನ್ನು ಬರೆಯುಹತ್ತಿದ್ದು, ಇಂಥ ಸಂದರ್ಭ
ದಲ್ಲಿ ಅದರೊಳಗಿನ ಅನೇಕ ಲೇಖಗಳೂ ಪುಸ್ತಕಗಳೂ ಜಪ್ತ
ಮಾಡಲ್ಪಟ್ಟು ಸುಡಲ್ಪಟ್ಟ ಸಂಗತಿ ಹಿಂದೆ ಉಲ್ಲೇಖಿಸಿಯೇ
ಇರುವೆ.

**ನನ್ನ ರಾಷ್ಟ್ರೀಯತ್ವದ ಚಟುವಟಿಕೆಗಳು** — ಈ ಕಾಲ
ದಲ್ಲಿ ನನಗೆ ಆತ್ಮನಿರೀಕ್ಷಣೆಗೆ ಬಹಳ ಅವಕಾಶ ಸಿಕ್ಕಿತು ಹೊರ
ಗಿನ ಚಟುವಟಿಕೆಗಳು ಹೆಚ್ಚಾದರ, ಒಳಗಿನ ಚಟುವಟಿಕೆಗಳಿಗೆ
ಆಸ್ಪದ ದೊರೆಯುವುದಿಲ್ಲ ರಾಜಕೀಯ ಚಟುವಟಿಕೆಗಳು
ಕಡಿಮೆಯಾದೊಡನೆ, ಮನಸ್ಸು ಅಂತರ್ಮುಖವಾಯಿತು.
ಹಿಂದಿನ ಅನುಭವದಿಂದ ನಾನು ಕೆಲವು ಪಾಠಗಳನ್ನು ಕಲಿತೆ.
ಜನರು ಹೊರಗೆ ತೋರಿಸುವ ಹುರುಪು ಹುರುಳಿಲ್ಲದ್ದೆಂದು
ಚೆನ್ನಾಗಿ ಮನಗಂಡೆ. ವಚನಭಂಗ ಮಾಡುವುದು ಜನರ
ವಾಡಿಕೆಯ ಸ್ವಭಾವವಾಗಿತ್ತು

ನಾನು ಹಿಂದೆ ಹೇಳಿದಂತೆ ರಾಜಕೀಯ ವಾತಾವರಣವು
ತಣ್ಣಗಾದುದರಿಂದ, ಈ ಅವಧಿಯಲ್ಲಿ ವಿಶಾಲವಾದ ರಾಷ್ಟ್ರೀ
ಯತ್ವದ ಚಟುವಟಿಕೆಗಳಿಗೆ ಹೆಚ್ಚು ಆಸ್ಪದ ದೊರೆಯಿತು. ಈ
ಕಾಲದಲ್ಲಿಯ ನನ್ನ ಮುಖ್ಯ ಚಟುವಟಿಕೆಗಳೆಂದರೆ ವೃತ್ತಪತ್ರ
ಗಳಲ್ಲಿ ಬರೆಯುವುದು, ನನ್ನ ಲಾಯಬ್ರರಿಯನ್ನು ಬೆಳೆಸಿ ಓದು
ವುದು, ಪೈಸಾಫಂಡು ಕೂಡಿಸುವುದು, ದೀಪಾವಳಿ ಹಬ್ಬವನ್ನು
ಹೆಂಗಸರ ಜಾಗೃತಿಗಾಗಿ ಉಪಯೋಗಿಸಿಕೊಳ್ಳುವುದು. ಇವೇ
ಮುಂತಾದವುಗಳು ಆಗಿದ್ದವು ರಾಷ್ಟ್ರೀಯತ್ವಕ್ಕೆ ಸಂಬಂಧಿಸಿದ
ಈ ಚಟುವಟಿಕೆಗಳಲ್ಲದೆ ವಾಙ್ಮಯ ಇತಿಹಾಸ ಮುಂತಾದವು
ಗಳಿಗೆ ಸಂಬಂಧಿಸಿದ ಈ ಕಾಲದ ಚಟುವಟಿಕೆಗಳನ್ನು ಬೇರೆ
ಕೊಡುವೆ. ಹೋಳೀಹುಣ್ಣಿವೆ ಹಬ್ಬವನ್ನು ಗಂಡಸರಿಗಾಗಿಯೂ

ದೀಪಾವಳಿ ಹಬ್ಬವನ್ನು ಹೆಂಗಸರಿಗಾಗಿಯೂ ನಾನು ಕಾಲಕ್ಕೆ ತಕ್ಕಂತೆ ಬೇರೆ ರೂಪದಲ್ಲಿ ಪರಿವರ್ತಿಸಿಕೊಂಡಿದ್ದೆ. ಹೋಳೀ ಹುಣ್ಣಿವೆಯಲ್ಲಿ ಮೊಹರಮ್ಮಿನ ಹಬ್ಬದಲ್ಲಿಯಂತೆ ಜಂಗು ಮೇಳಗಳನ್ನು ಮಾಡಿಸಿದ್ದೆ. ದೀಪಾವಳಿ ಹಬ್ಬದಲ್ಲಿ ಕೋಲಾಟಗಳಲ್ಲಿ ಸ್ವದೇಶೀ ಪದಗಳನ್ನು ಸೇರಿಸಿ ಹೆಂಗಸರಲ್ಲಿ ಜಾಗ್ರುತಿ ಮಾಡುವುದಕ್ಕಾಗಿ ಉಪಯೋಗಿಸಿಕೊಂಡಿದ್ದೆ. ಇವೆರಡೂ ಚಳವಳಿಗಳಿಗೆ ಈ ಕಾಲದಲ್ಲಿ ಹೆಚ್ಚು ಜೋರು ಉಂಟಾಯಿತು. ಹೂಪಿಕ್ಯವನ್ನೂ ಆ ರೀತಿಯಲ್ಲಿ ಮಾರ್ಪಡಿಸಿಕೊಳ್ಳುವ ವಿಚಾರವಿತ್ತು. ಇರಲಿ ೧೯೦೮ ರಲ್ಲಿ ಟಿಳಕರು ಮಂಡಾಲೆಗೆ ಅಟ್ಟಲ್ಪಟ್ಟಾಗಿನಿಂದ ಅವರು ೧೯೧೪ ನೆಯ ಇಸ್ವಿಯಲ್ಲಿ ತಿರುಗಿ ಬರುವವರೆಗೆ ರಾಷ್ಟ್ರೀಯ ಪಕ್ಷವು ಮಂದವಾಗಿ ಮುಂದುವರಿಯುತ್ತಿತ್ತು. ಸುರತದ ಕಾಂಗ್ರೆಸ್ಸಿನ ನಂತರ ರಾಷ್ಟ್ರೀಯ ಪಕ್ಷವು ಕಾಂಗ್ರೆಸ್ಸಿನ ಹೊರಗೆ ನಿಲ್ಲಬೇಕಾಯಿತು. ಸೌಮ್ಯ ಪಕ್ಷದೊಡನೆ ಮುಂಚೆ ಸಂಧಾನದ ಪ್ರಯತ್ನವಾಯಿತು. ಅದು ಸಾಧ್ಯವಾಗಲಿಲ್ಲ. ಆಗ, ಬೇರೆ ಕಾಂಗ್ರೆಸ್ಸನ್ನು ಸ್ಥಾಪಿಸುವುದಕ್ಕೆ ಪ್ರಯತ್ನಪಟ್ಟಿತು. ನಾಗಪುರದಲ್ಲಿ ಆ ಪ್ರಕಾರ ರಾಷ್ಟ್ರೀಯ ಪಕ್ಷದ ಕಾಂಗ್ರೆಸ್ಸು ಕರೆಯಲ್ಪಟ್ಟಿತು. ಆದರೆ ಅದನ್ನು ಕೂಡಿಸುವುದಕ್ಕೆ ಸರಕಾರವು ಆಗ ಕಲ್ಲು ಹಾಕಿತು. ಅಲ್ಲಿಯ ಕಲೆಕ್ಟರನು ಅದಕ್ಕೆ ಪರವಾನಿಗೆಯನ್ನೇ ಕೊಡಲಿಲ್ಲ. ೧೯೧೩ ರ ಮೇ ತಿಂಗಳಲ್ಲಿ ಮುಂಬಯಿ ಇಲಾಖಾ ರಾಜಕೀಯ ಪರಿಷತ್ತು ಕೂಡಿ ಪುನಃ ಸಂಧಾನದ ಪ್ರಯತ್ನವಾಯಿತು. ಜೂನ ತಿಂಗಳಲ್ಲಿ ಟಿಳಕರು ಬಿಡಲ್ಪಟ್ಟರು. ಆಗ ಹೊಸ ಹುರುಪು ಬಂದಿತು. ಟಿಳಕರು ಬೇರೆ ಕಾಂಗ್ರೆಸ್ಸಿನ ಕಲ್ಪನೆಗೆ ವಿರುದ್ಧವಿದ್ದರು. ೧೯೧೪ ಆಗಸ್ಟದಲ್ಲಿ ಯುರೋಪದ ಮಹಾಯುದ್ಧವು

ಪ್ರಾರಂಭವಾದಕಾರಣ, ಜನರಲ್ಲಿ ಹೊಸ ಆಕಾಂಕ್ಷೆಗಳು ಉಕ್ಕೇರಿದವು. ೧೯೧೫ರ ಮೇ ತಿಂಗಳಲ್ಲಿ ಪುಣೆಯಲ್ಲಿ ಇಲಾಖಾ ರಾಜಕೀಯ ಪರಿಷತ್ತು ಕೂಡಿತ್ತು. ಹೋಂರೂಲ ಕಲ್ಪನ ಮತ್ತು ಭಾಷಾನ್ವಯ ಪ್ರಾಂತರಚನೆಗಳ ಕಲ್ಪನ ಅಲ್ಲಿ ಹೊರಟಿತು. ಇವೆರಡೂ ಪರಿಷತ್ತುಗಳಿಗೆ ನಾನು ಹೋಗಿದ್ದೆ. ಎರಡರಲ್ಲಿಯೂ ಭಾಗತೆಗೆದುಕೊಂಡೆ. ೨೬/೨೭-೫-೧೫ರಲ್ಲಿ ಸಾತಾರಯಲ್ಲಿ ಕೂಡಿದ ಪರಿಷತ್ತಿಗೆ ನಾ. ಜೋಶಿ ಪತ್ತ್ರರಾಯರು ಅಧ್ಯಕ್ಷರಾಗಿದ್ದರು. ಪುಣೆಯ ಪರಿಷತ್ತಿಗೆ ಬ್ಯಾ. ಬ್ಯಾಪ್ಟಿಸ್ಟ ಇವರು ಅಧ್ಯಕ್ಷರು. ೮-೫-೧೫ನೆಯ ದಿವಸ ಕೂಡಿದ ಪುಣೆಯ ಕಾನ್ಫರನ್ಸದಲ್ಲಿ ಅದೇ ವರ್ಷ ಇಂದರ ೧೯-೨-೧೫ನೆಯ ದಿವಸ ತೀರಿಕೊಂಡ ನಾ। ಗೋಖಲೆಯವರ ವಿಷಯಕರು ತಂದ ದುಃಖಪ್ರದರ್ಶನ ಸೂಚನೆಗೆ ನಾನು ಭಾಷಾನ್ವಯ ಪ್ರಾಂತರಚನೆಯ ತತ್ವವನ್ನು ಸಾಧಿಸುವುದಕ್ಕೋಸ್ಕರ ತಿದ್ದುಪಡಿ ಮಾತಾಡಿ ಓಳಕರಿಗೆ ಅನುಮೋದನಕೊಟ್ಟೆ. ಕನ್ನಡ ಭಾಷಣಮಾಡುವ ತತ್ವವು ಪ್ರಥಮತಃ ಪುರಸ್ಕರಿಸಲ್ಪಟ್ಟದ್ದು ಆದೇ ಸಭೆಯಲ್ಲಿ. ಈ ರಾಜಕೀಯ ವಿಷಯಗಳ ಸಂಬಂಧವು ಮುಂದಿನ ಯುಗಕ್ಕೆ ಹೆಚ್ಚಿಗೆ ಸಂಬಂಧಿಸಿರುವುದರಿಂದ ಅಲ್ಲಿ ಪುನಃ ಹೆಚ್ಚಿಗೆ ಉಲ್ಲೇಖಿಸುವೆ.

**ಪದವೀಧರರ ಕೇಂದ್ರಸಂಸ್ಥೆಯ ನನ್ನ ಕಲ್ಪನೆ:—** ರಾಷ್ಟ್ರೀಯ ಶಾಲೆ ನಿಂತಾಗಿನಿಂದ ನನ್ನ ತಲೆಯಲ್ಲಿ, ಮುಂದೆ ಸ್ವಾರ್ಥತ್ಯಾಗಿಗಳಾದ ಪದವೀಧರರದೊಂದು ಕೇಂದ್ರವನ್ನು ಸ್ಥಾಪಿಸುವ ಕಲ್ಪನೆಯು ಜೋರಿನಿಂದ ಬರಹತ್ತಿತು. ಆ ಉದ್ಯೋಗಕ್ಕೆ ಹತ್ತಿದೆ. ನನಗೆ ಯಾವಾಗಲೂ ದೊಡ್ಡವರಿಗಿಂತ ತರುಣರಲ್ಲಿ ವಿಶ್ವಾಸ ಬಹಳ. ಆದಕಾರಣ, ನನ್ನ

ಉತ್ಸಾಹಶಕ್ತಿಯನ್ನು ತರುಣರಿಗೆ ಪ್ರೇರಣೆಕೊಡುವುದರಲ್ಲಿಯೇ ವಿನಿಯೋಗಿಸುವುದು ನನ್ನ ಸ್ವಭಾವ. **ಸಂಸ್ಥೆಗಳ ಸುತ್ತಲು ವ್ಯಕ್ತಿಗಳನ್ನು ತಂದು ನಿಲ್ಲಿಸುವುದಕ್ಕಿಂತ, ವ್ಯಕ್ತಿಗಳ ಸುತ್ತಲು ಸಂಸ್ಥೆಗಳ ಜಾಳಿಗೆಯನ್ನು ಹೆಣೆಯುವುದು ನನ್ನ ಕಾರ್ಯಪದ್ಧತಿ.** ಆ ಪ್ರಕಾರ ವ್ಯಕ್ತಿಗಳನ್ನು ದೊರಕಿಸಿ, ಸಂಸ್ಥೆಗಳನ್ನು ಕಟ್ಟಲಿಕ್ಕೆ ಪ್ರಾರಂಭಿಸಿದೆ. ವಿಕ್ಟೋರಿಯಾ ಹಾಯಸ್ಕೂಲ ಮತ್ತು ಆರ್ಟ್ಸ ಕಾಲೇಜ ಇವುಗಳ ಘಟನೆಯನ್ನು ಕೈಕೊಂಡದ್ದು ಆ ಉದ್ದೇಶದಿಂದ; ಆದರೆ ಆ ಕಥೆಯನ್ನು ಮತ್ತೊಂದು ಸಂದರ್ಭದಲ್ಲಿ ಹೇಳುವೆ.

**ಡಾ|| ಹರ್ಡೀಕರ ಇವನನ್ನು ೧೯೧೩ ರಲ್ಲಿ ಅಮೇರಿಕೆಗೆ ಕಳುಹಿಸಿದ್ದು**—ನಾರಾಯಣ ಸುಬ್ಬರಾವ ಹರ್ಡೀಕರ ಇವನ ಬಗ್ಗೆ ಒಂದೆರಡು ಸಲ ಉಲ್ಲೇಖ ಬಂದೇ ಇರುವುದು. ಈಗ ನಾನು ಆತನನ್ನು ಅಮೇರಿಕೆಗೆ ಕಳುಹಿಸಿದಾಗಿನ ಒಂದು ಗುಟ್ಟನ್ನು ಒಡೆಯುತ್ತಿರುವೆ ಅದೇನೆಂದರೆ, **ನಾರಾಯಣನು ಅಮೇರಿಕೆಗೆ ಹೋದದ್ದು ಕೇವಲ ಡಾಕ್ಟರ ವಿದ್ಯೆಗಾಗಿ ಅಲ್ಲವೇ ಅಲ್ಲವೆಂಬುದು.** ಈ ಮಾತು ಬಹಳ ಸ್ವಲ್ಪ ಜನರಿಗೆ ಗೊತ್ತಿತ್ತು—ಗೊತ್ತಿದೆ ಆತನು ಹುಟ್ಟಾ ದೇಶಭಕ್ತನು, ಶೂರನು, ಜೀವದ ಪರಿವೆಯಿಲ್ಲದವನು ಧಾರವಾಡಕ್ಕೆ ನನ್ನ ರಾಷ್ಟ್ರೀಯ ಶಾಲೆಯಲ್ಲಿ ವ್ಯಾಯಾಮ ಕಲಿಸಲಿಕ್ಕೆ ಬಂದಾಗೆಲ್ಲ, ಆತನು ಪರದೇಶಕ್ಕೆ ಹೋಗುವ ಮಾತನ್ನು ನಮ್ಮ ಮನೆಯಲ್ಲಿ ರಂಗವ್ವ ಎಂಬ ನಮ್ಮ ಮುದುಕಿಯ ಮುಂದೆ ಎತ್ತುತ್ತಿದ್ದ. ಅಂತೂ ಇಂತೂ ಮಾಡಿ ೬-೭ ಇಯತ್ತೆಗೆ ಬಂದು ಮುಟ್ಟಿ ಶಾಲೆ ಬಿಟ್ಟವನು ಅವನು. ೧೪ ವರುಷದವನಿದ್ದಾಗಿನಿಂದ, ತನ್ನದೊಂದು ಚಿಕ್ಕ ಹುಡುಗರ ತಂಡವನ್ನು ಕಟ್ಟಿಕೊಂಡು, ಧಾರ

ಪಾಡದವರೆಗೆ ಕಾಲ್ನಡಿಗೆಯಿಂದ ಗಣೇಶೋತ್ಸವಾದಿಗಳಿಗೆ ಬರುವ ಸಾಹಸವನ್ನೇನೋ ಆತನು ಮಾಡುತ್ತಿದ್ದನು. ಆದರೆ ಇಷ್ಟು ಸಾಹಸವು ಅಮೇರಿಕೆಗೆ ಹೋಗುವುದಕ್ಕೆ ಸಾಲುವುದೇ? ಆದಕಾರಣ, ನಮ್ಮ ಮುದುಕಿ ನನ್ನ ಮುಂಗೆ ಮಾತು ತೆಗೆದಾಗೆಲ್ಲ, ನಾನು ಹಾರಿಸಿಬಿಡುತ್ತಿದ್ದೆ ಆದರೆ ಆ ಸುಮಾರಕ್ಕೆ ಘಟಿಸಿದ ಒಂದು ಸಂಗತಿಯು ನನ್ನ ಮನಸ್ಸನ್ನು ಪೂರಾ ಬದಲು ಮಾಡಿತು ಅದಾವುದೆಂದರೆ ಹುಬ್ಬಳ್ಳಿಯ **ಮಾರ್ಕೆಟಿಗೆ ಬೆಂಕಿ ಹತ್ತಿದ್ದು. ಆ ಪ್ರಸಂಗದಲ್ಲಿ, ಈ ಚಿಕ್ಕ ನಾರಾಯಣನು ತನ್ನ ಜೀವದ ಹಂಗನ್ನು ತೊರೆದು ಬೆಂಕಿಯಲ್ಲಿ ಟಣ್ಣನೆ ಹಾರಿ, ಜನರನ್ನೂ ಆಸ್ತಿಯನ್ನೂ ಉಳಿಸಿದನು!** ಅದರಿಂದ ಆತನ ಕಾಲುಗಳು ಸುಟ್ಟು ಬಾತವು. ಮೂರು ನಾಲ್ಕು ತಿಂಗಳು ಬೇನೆಯಿಂದ ನರಳಿದನು. ಆ ಸುದ್ದಿಯನ್ನು ಕೇಳಿದ ಕೂಡಲೆ, ಇಂಥ ಶೂರನು ದೇಶಕ್ಕಾಗಿ ಬೇಕಾದುದನ್ನು ಮಾಡಬಲ್ಲನೆಂದು ನನಗೆ ಹೊಳೆಯಿತು. ಮತ್ತು ಆತನನ್ನು ಅಮೇರಿಕೆಗೆ ಕಳುಹಿಸುವುದನ್ನು ನಿಶ್ಚಯಿಸಿದೆ. ಆದರೆ ಕಳುಹಿಸುವುದು ಹೇಗೆ? ನಾವೂ ಆತನೂ ಮಾತಾಡಿ, ಬಂಗಾಲದಲ್ಲಿಯ ನ್ಯಾಶನಲ್ ಮೆಡಿಕಲ್ ಕಾಲೇಜಿನ ಒಂದು ಡಿಗ್ರಿಯನ್ನು ತೆಗೆದುಕೊಂಡು ಬಂದರೆ, ಆ ನೆವದಿಂದ ಘಂಡುಕೂಡಿಸಬಹುದೆಂದು ಗೊತ್ತುಮಾಡಿದೆವು ಆತನು ಡಿಗ್ರಿಯನ್ನು ತಕ್ಕೊಂಡು ಬಂದನು. ಆತನು ಅಮೇರಿಕೆಗೆ ಡಾಕ್ಟರ ವಿದ್ಯೆಯನ್ನು ಕಲಿಯಲಿಕ್ಕೆ ಹೋಗುವವನಿದ್ದಾನೆಂದು ಕೆಲವು ಗೆಳೆಯರ ಸಹಿಯಿಂದ ನಾನು ಒಂದು ಅಪೀಲು ತೆಗೆದೆ. **ಹೆಸರು, ಕೀರ್ತಿ ಮುಂತಾದ ಯಾವುದನ್ನೂ ಕನಸಿನಲ್ಲಿ ಕೂಡ ತಾರದೆ, ಸದ್ದಿಲ್ಲದೆ ನನ್ನ ಯಾವತ್ತು ಸಾರ್ವಜನಿಕ ಕಾರ್ಯ**

ಗಳಲ್ಲಿ ನನಗೆ ಸಹಾಯಮಾಡುವವರೆಂದರೆ, ವಕೀಲಿ ಯಲ್ಲಿಯ ನನ್ನ ಪಾಲುಗಾರರಾದ ಮುದವೇಡಕರ ವೆಂಕಟ ರಾಯರು. ನಾನೂ ಅವರೂ ಇಬ್ಬರೇ ಮನೆ ಮನೆ ತಿರುಗಿ ಈ ಊರಲ್ಲಿ ಹಾಗೂ ಹೀಗೂ ಮಾಡಿ ಸುಮಾರು ೧೦೦೦ ರೂ. ಕೂಡಿಸಿದೆವು ನನ್ನ ಸಲುವಾಗಿ ಅನೇಕರು ಹಣ ಕೊಟ್ಟರು. ನನ್ನ ಕೆಲವು ಗೆಳೆಯರು ಇಂಥವನನ್ನು ಕಳಿಸಿ ಏನು ಉಪ ಯೋಗ ಎಂದು ಹೇಳಿ ಏನೂ ಹಣಕೊಡದೆ ಪೂರಾ ತಿರಸ್ಕರಿಸಿ ಬಿಟ್ಟರು ಪಾಪ, ನಾರಾಯಣನು ನಿಜವಾಗಿ ಹೋಗುವುದು ವೈದ್ಯಕೀಯ ಅಭ್ಯಾಸದ ಸಲುವಾಗಿಯಲ್ಲ, ಎನ್ನುವುದು ಅವ ರಿಗೇನು ಗೊತ್ತು? ಅಲ್ಲದೆ, ನಾರಾಯಣನ ತಂದೆಯ ಪರಮ ಸ್ನೇಹಿತರಾದ ರಾವ. ಕರಂದೀಕರರು ೨೦೦ ರೂಪಾಯಿ ಕೊಟ್ಟರು. ನಮ್ಮ ಜವಳಿ ಅಂಗಡಿಯಿಂದ ಪೋಷಾಕು ಮುಂತಾದವು ಹೊಲಿಸಿಕೊಡಲ್ಪಟ್ಟವು ಹುಬ್ಬಳ್ಳಿಯಲ್ಲಿ ನಾರಾ ಯಣನ ಆಪ್ತರಾದ ಶೇವಡೆಯವರಂತೂ ಆತನಿಗೆ ತಮ್ಮ ಶಕ್ತಿ ಮೀರಿ ಸಹಾಯಮಾಡುತ್ತಲೇ ಇದ್ದರು—ಇನ್ನೂ ಮಾಡು ತ್ತಲೇ ಇದ್ದಾರೆ. ಅಮೇರಿಕೆಗೆ ಹೋಗಿ ಮುಟ್ಟುವ ಮಟ್ಟಿಗೆ ಸಿಕ್ಕ ಹಣದಿಂದಲೇ ಆತನು ಹೋಗಲಿಕ್ಕೆ ಸಿದ್ಧನಾದನು ಆಗ ಮತ್ತೊಂದು ತೊಂದರೆಯುಂಟಾಯಿತು ಪರದೇಶಕ್ಕೆ ಹೋಗು ವುದಕ್ಕೆ ಕಲೆಕ್ಟರರ ಸರ್ಟಿಫಿಕೇಟು ಬೇಕಾಗುತ್ತಿತ್ತು. ನನ್ನ ಹೆಸರೂ ನಾರಾಯಣನ ಹೆಸರೂ ಸರಕಾರದ ಕರೀಪಟ್ಟಿ (Black list) ಯಲ್ಲಿ. ರಾವ. ಕರಂದೀಕರರು ಕಲೆಕ್ಟರರಿಗೆ ಸರ್ಟಿಫಿಕೇಟು ಕೊಡಲಿಕ್ಕೆ ಕೇಳಿದರು. ಇಂಥ ಕಿರಿಗೇಡಿ ಮತ್ತು ಚಳವಳಿಖೋರ ಹುಡುಗನಿಗೆ ನಾನು ಸರ್ಟಿಫಿಕೇಟು ಕೊಡುವುದು ಹೇಗೆ ಎಂದು ಕಲೆಕ್ಟರರು ಅಂದರು. ಕರಂದೀ

ಕರರು ಬಹಳ ಚಾಣಾಕ್ಷರು. ಅವರು ಅವನ್ನೇ ಹೊರಳಿಸಿ, 'ಆತನು ಹಾಗಿದ್ದ ಕಾರಣದಿಂದಲೇ ಆತನನ್ನು ಪರದೇಶಕ್ಕೆ ಅಟ್ಟಿ ಬಿಡುವುದು ಒಳಿತು, ಇಲ್ಲದಿದ್ದರೆ, ಎಲ್ಲಿಯಾದರೂ ಕ್ರಾಂತಿ ಕಾರಕ ಚಳವಳಿಯನ್ನು ಸೇರಬಹುದು' ಎಂದು ಹೇಳಿದರು. ಅದು ಕಲೆಕ್ಟರರ ಮನಸ್ಸಿಗೆ ನಾಟಿತು ಮತ್ತು ಅವರು ಕೂಡಲೆ ಸರ್ಟಿಫಿಕೇಟು ಕೊಟ್ಟುಬಿಟ್ಟರು ಆಗ ಹರ್ಡೀಕರನ ಕಾಲಿಗೆ ಭಯಂಕರ ಇಸಬು. ಹಡಗದಲ್ಲಿ ಮುಂದೆ ಬಿಡುವು ದಿಲ್ಲವೋ ಏನೋ ಎಂದು ನಮಗೆ ಅಂಜಿಕೆಯಿತ್ತು. ಸಾಬೂಣ ಹಚ್ಚಿ ಅದನ್ನು ತೊಳೆದು, ಸಿಪಾಯರಂತೆ ಗಟ್ಟಿಯಾಗಿ ಕಾಲ ಪಟ್ಟಿ ಸುತ್ತಿ ಕಳಿಸಿದೆವು ೧೯೧೩ ನೆಯ ನವ್ಹಂಬರದಲ್ಲಿ ಆತನು ಮುಂಬಯಿಗೆ ಹೋಗಿ ಹಡಗ ಏರುವಷ್ಟರಲ್ಲಿ ಇತ್ತ ಕರಂದೀ ಕರರು ಆಕಸ್ಮಿಕವಾಗಿ ತೀರಿಹೋದರು ಪ್ರಸಂಗ ಬಂದಾಗ ಅವರು ಹಣದಿಂದ ನೆರವಾಗಬಹುದೆಂಬ ಒಳಧೈರ್ಯ ನಮ ಗಿತ್ತು. ಅವರು ಸತ್ತ ಕೂಡಲೆ, ನಾರಾಯಣನು ತಿರುಗಿ ಬರ ಬಹುದೆಂದು ನಾನು ಭಾವಿಸಿದೆ ಆದರೆ ಆತನು ಧೈರ್ಯ ಗುಂದದೆ, ಮುಂದಿಟ್ಟ ಹೆಜ್ಜೆ ಹಿಂದಿಡದೆ ಹೊರಟುಹೋದ ಒಟ್ಟಿಗೆ ಹೇಳುವುದೇನೆಂದರೆ, ಆತನು ಮುಖ್ಯವಾಗಿ ಹೋದದ್ದು ದೇಶಕಾರ್ಯದಲ್ಲಿ ಪರಿಣತನಾಗಿ ಬರುವುದಕ್ಕೆ. ಮುಂದೆ ಆತ ನಿಗೆ ವಿಶೇಷ ಸಹಾಯ ಮಾಡುವುದು ನನ್ನಿಂದಾಗಲಿಲ್ಲ ಅದಕ್ಕೆ ಕಾರಣ, ಮುಂದೆ ೨-೩ ವರ್ಷ ನಮ್ಮ ಮನೆಯಲ್ಲಿ ೮-೧೦ ಜನರು ಒಬ್ಬರ ಮೇಲೊಬ್ಬರು ದೀರ್ಘಕಾಲದವರೆಗೆ ಬೇನೆ ಬಿದ್ದು, ಕೆಲವರು ಸತ್ತುಹೋದದ್ದು ಫಂಡು ಕೂಡಿಸುವ ಕೆಲಸ ಮಾಡಲಿಕ್ಕೆ ನಾರಾಯಣನು ತಮ್ಮ ಅಣ್ಣ ಲಕ್ಷ್ಮಣನಿಗೆ ಒಪ್ಪಿಸಿದ್ದ ಆತನು ನನ್ನ ಕಡೆಗೆ ಬಂದ. ೧೯೧೪ ನೆಯ

ಇಸ್ವಿಯಲ್ಲಿ ನಾನು ಸಾತಾರೆಯ ರಾಜಕೀಯ ಪರಿಷತ್ತಿಗೆ ಹೋದ ವೇಳೆಯಲ್ಲಿ ಅವನಿಗೆ ಶ್ರೀ ಕೇಳಕರ ಮುಂತಾದವರ ಪರಿಚಯ ಮಾಡಿಕೊಟ್ಟೆ ಟಿಳಕರಿಗೆ ಮುಂದೆ ಪತ್ರ ಬರೆದೆ ಮುಂದೆ ಅವರೇ ಆತನಿಗೆ ವಿಶೇಷವಾಗಿ ಹಣದ ಸಹಾಯ ಮಾಡಿದವರು ನಾನು ಒಮ್ಮೆ ಮಾತ್ರವೇ ಸ್ವಂತ ಕೈಯಿಂದ ಒಂದು ನೂರು ರೂಪಾಯಿ ಕಳಿಸಿಕೊಟ್ಟೆ ಆದರೆ ನಾನು ಮೊದಲಿಗೆ ಕೊಟ್ಟ ಪ್ರೇರಣೆಯನ್ನೂ, ಮಾಡಿದ ಅತ್ಯಲ್ಪ ಸಹಾಯವನ್ನೂ ಆತನು ಮರೆತಿರಲಿಲ್ಲ ಅಮೇರಿಕೆಯಿಂದ ೧೯೨೧ ನೆಯ ಇಸ್ವಿಯಲ್ಲಿ ಧಾರವಾಡಕ್ಕೆ ಬಂದೊಡನೆ, ಸಹಸಾ ನೀರು ಉದುರಿಸುವ ಸ್ವಭಾವದವನಲ್ಲದ ಆತನು, ನನ್ನನ್ನು ಕಂಡ ಕೂಡಲೇ ಸ್ಟೇಶನ್ನಿನಲ್ಲಿ ಗಟ್ಟಿಯಾಗಿ ಅಪ್ಪಿಕೊಂಡು, ಆನಂದದಿಂದ ಅತ್ತುಬಿಟ್ಟನು. ನಾನು, ಗಂಗೂತಾಯಿ ಮತ್ತು ಆತನು ಹಾಗೆಯೇ ಹುಬ್ಬಳ್ಳಿಗೆ ಹೋದೆವು. ಮುಂದೆ ಸಾಧನ ಕೇರಿಯಲ್ಲಿ ನನ್ನ ಬಂಗ್ಲೆಗೆ ಬಂದನು. ಅಮೇರಿಕೆಯಲ್ಲಿದ್ದಾಗ, ಮೇಲಿಂದ ಮೇಲೆ ನಾನು ಪತ್ರಬರೆದು, ಕರ್ನಾಟಕದಲ್ಲಿಯೇ ಇದ್ದು, ದೇಶಸೇವೆಮಾಡಲಿಕ್ಕೆ ಪ್ರೇರಿಸುತ್ತಿದ್ದೆ ಆತನು ಮರಳಿ ಬಂದಾಗ, ಆತನನ್ನು ಕರ್ನಾಟಕದಲ್ಲಿಯೇ ಇಟ್ಟುಕೊಳ್ಳುವಂತೆ ನಾನು ಮಾಡಬೇಕೆಂದು ದಿವಾಕರ ರಂಗರಾಯರು ಹೇಳಿದರು. ನಾನೇನೋ ಪ್ರಯತ್ನಮಾಡುವೆ; ಆದರೆ, ಈಗ ಆತನು ಕರ್ನಾಟಕವನ್ನು ಮೀರಿ ಬೆಳೆದಿರುವನೆಂದು ಅಂದೆ ನಮ್ಮ ಬಂಗ್ಲೆಗೆ ಆತನು ಬಂದಾಗ ಆತನೆದುರಿಗೆ ಈ ಮಾತು ತೆಗೆದೆ. ಮುಂಚೆ ಕರ್ನಾಟಕವು ತನ್ನನ್ನು ಅಮೇರಿಕೆಗೆ ಕಳುಹಿಸಿದ್ದು, ಆದಕಾರಣ ಅದು ತನ್ನ ಮನಸ್ಸನ್ನು ಎಳೆಯುತ್ತದೆಂದೂ, ಮಹಾರಾಷ್ಟ್ರವು ಹೋಮರೂಲ ಲೀಗಿನ ಪತಿಯಿಂದ ಹಣದ ಸಹಾಯ ಮಾಡಿ

ರುವುದರಿಂದ, ಅದು ಮನಸ್ಸನ್ನು ಎಳೆಯುತ್ತದೆಂದೂ, ಲಜ
ಪತರಾಯರು ತನ್ನ ಸಾಕ್ಷಾತ್ ಗುರುಗಳಾದ್ದರಿಂದ, ಅವರು
ಮನಸ್ಸನ್ನು ಎಳೆಯುತ್ತಾರೆಂದೂ ಆತನು ಹೇಳಿದ ಅರ್ಥಾತ್
ನಾನು, ನಿನ್ನ ಮನಸ್ಸಿಗೆ ತಿಳಿದಂತೆ ಮಾಡು, ಕರ್ನಾಟಕದಲ್ಲಿ
ದ್ದರೆ ಹೆಚ್ಚಿಗೆ ಸಂತೋಷ ಎಂದು ಅಂಡೆ ಅದೇ ಮೇರೆಗೆ,
ಮುಂಚಿನಿಂದ ಆತನ ವರ್ಚಸ್ಸು ಯಾವಾಗಲೂ ಬಾಲಕರ
ಮೇಲೆ ಕೂಡ್ರುತ್ತಿದ್ದುದನ್ನು ನಾನು ಕಂಡಿದ್ದೆನಾದ್ದರಿಂದ,
ದೊಡ್ಡದೊಂದು ಸ್ವಯಂಸೇವಕರ ದಳವನ್ನು ತೆಗೆಯ
ಬೇಕೆಂದು ಸೂಚಿಸಿದೆ. ಹುಬ್ಬಳ್ಳಿಯಲ್ಲಿ ಆತನು ಒಂದು ಮಿಲಿಟರಿ
ಕಾಲೇಜು ತೆಗೆಯಬೇಕೆಂದು ನಮ್ಮಿಬ್ಬರ ಮನಸ್ಸಿನಲ್ಲಿತ್ತು.

## ಸ್ವರಾಜ್ಯ ಚಳವಳಿಯ ಯುಗ(೧೯೧೫-೨೦)

**ಹೋಮರೂಲ ಲೀಗಿನ ಸ್ಥಾಪನೆ ಮತ್ತು ಕರ್ನಾಟ
ಕಕ್ಕೆ ಪ್ರತ್ಯೇಕಶಾಖೆಯ ನನ್ನ ಕಲ್ಪನೆ**— ೧೯೧೬ರಲ್ಲಿ
ಪುಣೆಯಲ್ಲಿ ಹೋಮರೂಲ ಲೀಗಿನ ಸ್ಥಾಪನೆಯಾಯಿತು
ಪುಣೆಯಲ್ಲಿ ಕೂಡಿದ ಈ ಹೋಮರೂಲಿನ ಸಭೆಯಲ್ಲಿ ನಾನು
ಕರ್ನಾಟಕದ ದೃಷ್ಟಿಯಿಂದ ಒಂದು ಮಹತ್ವದ ಬದಲಾವಣೆ
ಯನ್ನು ಮಾಡಿದೆ ಅದೇನೆಂದರೆ, ಕರ್ನಾಟಕಕ್ಕೆ ಪ್ರತ್ಯೇಕ
ವಾದ ಶಾಖೆಯಿರಬೇಕೆಂದು. ಶ್ರೀ. ಗಂಗಾಧರರಾವ ಮತ್ತು
ಶ್ರೀ. ಮಜಲಿ ಇವರ ಮನಸ್ಸಿನಲ್ಲಿ ಹಾಗೆ ಮಾಡುವುದು ಇರ
ಲಿಲ್ಲ ಆದರೆ ನಾನು ಹಟಹಿಡಿದು ಅದನ್ನು ಮಾಡಿಕೊಂಡೆ.
ಲೋ. ಟಿಳಕರವರಿಗೆ ನನ್ನ ಮತವು ಸಮ್ಮತವಾಯಿತು. ಗಂಗಾ
ಧರರಾಯರನ್ನು ಕರ್ನಾಟಕದ ಶಾಖೆಗೆ ಅಧ್ಯಕ್ಷರನ್ನಾಗಿ
ಮಾಡಲಾಯಿತು. ಟಿಳಕರ ಮೂರು ಭಾಷಣಗಳನ್ನು ಗಂಗಾ

ಧರರಾಯರು ಸ್ವರಾಜ್ಯಸಂಘದ ವತಿಯಿಂದ ಮರಾಠಿಯಲ್ಲಿ ಮುದ್ರಿಸಿ ಹಂಚಿದರು. ಅವನ್ನು ನಾನು ಕನ್ನಡದಲ್ಲಿಯೂ ಭಾಷಾಂತರಿಸಿ ಹಂಚುತ್ತೇನೆಂದು ಅವರನ್ನು ಕೇಳಿದೆ. ಹಣದ ಅಭಾವದ ನೆವವನ್ನು ಮುಂದೆ ಚಾಚಿ ಅವರು ಒಪ್ಪ ಲಿಲ್ಲ. ಆಗಿನಿಂದ ನನಗೂ ಅವರಿಗೂ ಕರ್ನಾಟಕದ ವಿಷಯ ದಲ್ಲಿ ತೀಕ್ಷ್ಣ ಮತಭೇದವುಂಟಾಗಲಿಕ್ಕೆ ಪ್ರಾರಂಭವಾಯಿತು. ನಾನು ಪುಣೆಯ ಮುಖ್ಯಕಾರ್ಯಾಲಯಕ್ಕೆ ಕರ್ನಾಟಕದ ಕೊರತೆಗಳನ್ನು ತಿಳಿಸಿಹೇಳಿದೆ. ಅವರು ನನ್ನ ಮಾತಿಗೆ ಒಪ್ಪಿಗೆ ಕೊಟ್ಟರು ಮತ್ತು ನಾನು ಸ್ವರಾಜ್ಯಸಂಘದ ಕಾರ್ಯ ದರ್ಶಿಯೆಂದು ಧಾರವಾಡದಲ್ಲಿ ವರ್ಷೆರಡು ವರ್ಷಗಳಲ್ಲಿ ಒಟ್ಟು ಹನ್ನೆರಡು ಚಿಕ್ಕ ಹೊತ್ತಿಗೆ ( Pamphlets ) ಗಳನ್ನು ಬರೆದು ತೆಗೆದೆ. ಅವುಗಳಲ್ಲಿ '**ನಾವು ಈಗ ಬೇಡುವ ಸ್ವರಾಜ್ಯ**' '**ಸ್ವರಾಜ್ಯ ವೆಂದರೇನು,**' '**ಸ್ವರಾಜ್ಯವನ್ನೇ ಏಕೆ ಬೇಡುತ್ತೇವೆ,**' '**ಮಿಕ್ಕ ಸುಧಾರಣೆಗಳ ನಿಷ್ಫಲತೆ,**' '**ಸ್ವರಾಜ್ಯವನ್ನು ಕೊಡ ದಿರುವುದಕ್ಕೆ ಹೇಳುವ ನೆವಗಳು**' ಇವೇ ಮುಂತಾದ ೫-೬ ಹೊತ್ತಿಗೆಗಳು ಮುದ್ರಿತವಾಗಿ ಅದರ ಹತ್ತಾರು ಸಾವಿರ ಪ್ರತಿ ಗಳು ಕರ್ನಾಟಕದಲ್ಲೆಲ್ಲ ಹಂಚಲ್ಪಟ್ಟವು. ಅಷ್ಟರಲ್ಲಿ ರಾಲೆಟ್ ಆ್ಯಕ್ಟ ಬಂದಕಾರಣ, ಪ್ರೆಸ್ಸಿನವರು ಮಿಕ್ಕವುಗಳನ್ನು ಮುದ್ರಿಸ ಲಿಕ್ಕೆ ಅಂಜಿದರು

**ಕರ್ನಾಟಕಕ್ಕೆ ಪ್ರತ್ಯೇಕ ರಾಜಕೀಯ ಪರಿಷತ್ತು ಬೇಕೆಂಬ ನನ್ನ ಕಲ್ಪನೆ:**—೧೯೧೭ನೆಯ ಇಸ್ವಿಯಲ್ಲಿ ನಾಸಿಕ ದಲ್ಲಿ ಪ್ರಾಂತಿಕಪರಿಷತ್ತೂ, ಹೋಮರೂಲ ಲೀಗಿನ ಸಭೆಯೂ ಕೂಡಿದ್ದವು. ಅವಕ್ಕೂ ನಾನು ಹೋಗಿದ್ದೆ. ನಾಸಿಕದಲ್ಲಿ ನಾನು ಕರ್ನಾಟಕದ ರಾಜಕೀಯ ಪರಿಷತ್ತು ಬೇರೆಯೇ ಕೂಡ

ಬೇಕೆಂಬ ನನ್ನ ಹೊಸ ವಿಚಾರವನ್ನು ಕರ್ನಾಟಕದ ಪ್ರತಿ
ನಿಧಿಗಳ ಮುಂದೆ ಮಂಡಿಸಿದೆ ನನ್ನ ಮಿತ್ರರಾದ ನಾರಾಯಣ
ರಾವ ಜೋಶಿಯವರೂ ನಾನೂ ಕೂಡಿಯೇ ಸಾತಾರಾ, ಪುಣೆ
ಬೆಳಗಾವಿ ಮುಂತಾದ ಪರಿಷತ್ತುಗಳಿಗೆ ಹೋಗಿದ್ದರೂ ಅವಂಗೆ
ಏಕೋ ಏನೋ, ಕರ್ನಾಟಕತ್ವದ ಕಲ್ಪನೆಯು ಬರಲೇ ಇಲ್ಲ
ನರಗುಂದಕರ ರಾಮರಾಯರು ನನಗೆ ಬೆಂಬಲಕೊಟ್ಟರು
ರಾಜಕೀಯ ಪರಿಷತ್ತುಗಳಲ್ಲಿ ಮುಂಚೆ ಇಂಗ್ಲಿಷಭಾಷೆಯಿಂ
ದಲೇ ಸರ್ವ ವ್ಯವಹಾರವೂ ನಡೆಯುತ್ತಿತ್ತು. ಅಲ್ಲಿಯವರೆಗೆ
ಯಾರಿಗೂ ತೊಂದರೆಯಾಗುತ್ತಿರಲಿಲ್ಲ ಮುಂದೆ, ದೇಶಭಾಷೆಗೆ
ಅನುವುದೊರೆತಾಗ, ಗುಜರಾಥೀಜನರು ಗುಜರಾಥಿಯಲ್ಲಿಯೂ
ಮರಾಠೀ ಜನರು ಮರಾಠಿಯಲ್ಲಿಯೂ ಭಾಷಣಗಳನ್ನು ಮಾಡ
ಹತ್ತಿದರು. ಪುಣೆಯ ರಾಜಕೀಯ ಪರಷತ್ತಿನಲ್ಲಿ ನಾನು
ಕನ್ನಡದಲ್ಲಿ ಭಾಷಣವನ್ನು ಮಾಡಿ, ನಮ್ಮ ಹಕ್ಕನ್ನು ಸ್ಥಾಪಿ
ಸಿದ್ದೆ. ಮುಂದೆ, ಆ ವಿಷಯವಾಗಿ ನಾನು ಹೆಚ್ಚಿಗೆ ವಿಚಾರ
ಮಾಡಿದಾಗ, ನನಗೆ ತೋರಿದ್ದೇನೆಂದರೆ, ಇನ್ನುಮುಂದೆ
ಆಯಾ ಭಾಷಾಮಂಡಲಗಳ ಪ್ರತ್ಯೇಕ ರಾಜಕೀಯ ಪರಿ
ಷತ್ತುಗಳ ಏರ್ಪಾಡಾಗುವುದು ಅನಿವಾರ್ಯವೂ ಆವಶ್ಯಕವೂ
ಎಂದು ಎನಿಸಿತು. ಆದಕಾರಣವೇ, ಈ ನನ್ನ ಕಲ್ಪನೆಯನ್ನು
ನಾಸಿಕದಲ್ಲಿ ನಮ್ಮ ಪ್ರತಿನಿಧಿಗಳ ಮುಂದೆ ಇಟ್ಟೆ. ಎಲ್ಲರಿಗೂ
ಸಮ್ಮತವಾಯಿತು. ಆದರೆ ಗಂಗಾಧರರಾಯರೊಬ್ಬರಿಗೆ ಮಾತ್ರ
ಅದು ಸಮ್ಮತವಾಗಲಿಲ್ಲ. ಆ ದಕಾರಣ, ಆವರ್ಷ ಆ ವಿಚಾ
ರವು ಅಲ್ಲಿಗೇ ಉಳಿಯಿತು. ಹೀಗೆ ನನ್ನ ಕಲ್ಪನೆಯು ಕಲ್ಪನಾ
ಸಾಮ್ರಾಜ್ಯದಲ್ಲಿ ಇರುವಾಗಲೇ ಮುಂದೆ ಸ್ವಲ್ಪ ದಿವಸ
ಗಳಲ್ಲಿ ಗಾಂಧಿಯವರು ಗುಜರಾಥದಲ್ಲಿ ತಮ್ಮ ಗುಜರಾಥದ

ಪ್ರತ್ಯೇಕ ರಾಜಕೀಯ ಪರಿಷತ್ತನ್ನು ಕೂಡಿಸಿಯೇಬಿಟ್ಟರು. ಆಗ, ನಮಗೆ ಆನೆಯ ಬಲ ದೊರೆತಂತಾಯಿತು. ಅಥಣಿಯಲ್ಲಿ ಕೂಡಿದ ಬೆಳಗಾವಿ ಜಿಲ್ಹಾ ಪರಿಷತ್ತಿನಲ್ಲಿ ನಾನು ಕರ್ನಾಟಕದ ಪ್ರತ್ಯೇಕ ರಾಜಕೀಯ ಪರಿಷತ್ತಿನ ಸೂಚನೆ ತಂದೆ. ಅದು ಮಂಜೂರಾಯಿತು ಚಿಕ್ಕೋಡಿಯಲ್ಲಿ ಕೂಡಿದ ಪರಿಷತ್ತಿಗೂ ನಾನು ಹೋಗಿದ್ದೆ ಅಲ್ಲಿಯೂ ಆದು ಮಂಜೂರಾಯಿತು. ಆದರೆ ಕೃತಿಯಲ್ಲಿ ಬರಲಿಕ್ಕೆ ಒಂದೆರಡು ವರ್ಷ ಹಿಡಿದವು.

**ಲೋ. ಟಿಳಕರ ಸಂಬಂಧದ ಸ್ಮೃತಿ:**—೨೩-೬-೧೯೧೬ಕ್ಕೆ ಟಿಳಕರಿಗೆ ೬೦ ವರ್ಷಗಳು ತುಂಬಿದವು. ಆ ಕಾಲಕ್ಕೆ ದೊಡ್ಡದೊಂದು ಫಂಡು ಕೂಡಿಸುವುದು ಗೊತ್ತಾಯಿತು. ಆ ಪ್ರಕಾರ ಪುಣೆಯಿಂದ ಡಿ. ವ್ಹಿ ಗೋಖಲೆಯವರು ನನ್ನ ಕಡೆಗೆ ಬಂದರು. ನಾನು ಒಂದು ನೂರು ರೂಪಾಯಿ ಕೊಟ್ಟು, ಈ ಊರಲ್ಲೆಲ್ಲ ಸಾವಿರಾರು ರೂಪಾಯಿ ಫಂಡು ಕೂಡಿಸಿಕೊಟ್ಟೆ. ಅವರ ಹುಟ್ಟಿದ ದಿನವೇ ಸರಕಾರದವರು ಅವರ ಮೇಲೆ ರಾಜದ್ರೋಹದ ಖಟ್ಲೆ ಹಾಕಿದ್ದರು. ಆ ಖಟ್ಲೆಯಲ್ಲಿ ಹಾಯಕೋರ್ಟಿನವರು ಅವರು ನಿರಪರಾಧಿಗಳೆಂದು ನಿರ್ಣಯಿಸಿದ್ದರು. ಈ ಸುಮಾರಕ್ಕೆ ಅವರು ಇತ್ತಕಡೆಗೆ ಪ್ರವಾಸಕ್ಕೆ ಬಂದರು. ನಾನು ಅವರನ್ನು ಗದಗಿಗೆ ಕರೆದುಕೊಂಡು ಹೋದೆ. ಅಲ್ಲಿ ಪ್ರಚಂಡವಾದ ಸಭೆ ಕೂಡಿತು. ಆಗಿನ ನನ್ನ ಒಂದು ಅನುಭವವು ಬೋಧಪ್ರದವಾಗಿದೆ. ಗದಗಿನಲ್ಲಿ ಆಗ ಕಲೆಕ್ಟರರ ಮುಕ್ಕಾಮು ಇತ್ತು. ಸಭೆ ಕೂಡಿಸಿಯೇ ಕೊಡಬಾರದೆಂದು ಅವರ ಮನಸ್ಸಿನಲ್ಲಿ. ಸಭೆಯ ಸ್ಥಳಕ್ಕೆ ಪೋಲಿಸರು ಹೋಗಿ, ಸಭೆಯನ್ನು ಕೂಡಿಸಗೊಡುವುದಿಲ್ಲ, ಹೋಗಿರಿ ಎಂದು ಜನರನ್ನು ಚದುರಿಸಹತ್ತಿದರು. ನಾನು ಪೋಲಿಸ ಸುಪರಿಂಟೆಂಡೆಂ

ಟರ ಕಡೆಗೆ ಹೋಗಿ ವಿಚಾರಿಸಿದೆ. ಅವರು ಹುಕುಂ ತೋರಿಸ
ಲಿಲ್ಲ. ಹುಕುಮು ಬರುವವರೆಗೆ ಸಭೆ ಕೂಡಿಸದಿರಲಿಕ್ಕೆ ಏನೂ
ಕಾರಣವಿರಲಿಲ್ಲವೆಂದು ನಿಶ್ಚಯಿಸಿದೆ. ಟಿಳಕರು ನನ್ನನ್ನು
ಸಭೆಯ ಸ್ಥಳಕ್ಕೆ ಮುಂಗಡ ಕಳುಹಿಸಿ, ಜನರಿಗೆ ಧೈರ್ಯಕೊಡ
ಲಿಕ್ಕೆ ಹೇಳಿದರು. ನಾನು ಹೋದೆ ಟಿಳಕರು ಬರುವರು,
ಮಾತಾಡುವರು, ಎಂದು ನಾನು ಜನರಿಗೆ ಆಶ್ವಾಸನಕೊಟ್ಟೆ.
ಪೋಲಿಸರು ಜನರಿಗೆ ಹೊರಟುಹೋಗಿರಿ ಎಂದು ಬೆದರಿಸು
ವವರು; ನಾನು ಕೂಡಿರಿ, ಎಂದು ಹೇಳುವವ; ಹೀಗೆ ನಡೆ
ಯಿತು. ಅರ್ಥಾತ್, ಜನರು ಪೋಲಿಸರ ಮಾತು ಕೇಳದೆ,
ನನ್ನ ಮಾತಿನಂತೆ ಜಾಗೆಹಿಡಿದು ಕುಳಿತುಬಿಟ್ಟರು. ಟಿಳಕರು
ಬಂದರು. ಫರ್ಸ್ಟಕ್ಲಾಸ ಮ್ಯಾಜಿಸ್ಟ್ರೇಟರೂ ಅಲ್ಲಿಯೇ ಇದ್ದರು.
ಯಾವ ಹುಕುಮೂ ಕೈಗೆ ಬರಲಿಲ್ಲ. ಪೋಲಿಸರು ಹಿಡಿಯುವ
ಪ್ರಸಂಗ. ಅದಕ್ಕೆ ನೀವೇ ಎದ್ದು ಪ್ರಾರಂಭಿಸಿರಿ ಎಂದು ಟಿಳ
ಕರು ನನಗೆ ಹೇಳಿದರು. ನಾನು ಭಾಷಣಮಾಡಿದೆ. ನನ್ನನ್ನೂ
ಹಿಡಿಯಲಿಲ್ಲ. ಸಭೆಯನ್ನೂ ನಿಲ್ಲಿಸಲಿಲ್ಲ ಟಿಳಕರು ಎದ್ದು
ನಿಂತು ಭಾಷಣಮಾಡಲಿಕ್ಕೆ ಪ್ರಾರಂಭಿಸಿದರು. ಆಗ ಮಾತ್ರ,
ಪೋಲಿಸ ಸುಪರಿಂಟೆಂಡೆಂಟರು ತಮ್ಮ ಕಿಸೆಯೊಳಗಿಂದ
ಹುಕುಮು ತೆಗೆದು ಟಿಳಕರ ಕೈಯಲ್ಲಿ ಕೊಟ್ಟರು. ಟಿಳಕರು
ಭಾಷಣಮಾಡಕೂಡದೆಂದು ಆ ಹುಕುಮಿನಲ್ಲಿ ಬರೆದಿತ್ತು.
ಟಿಳಕರು ಹುಕುಮು ಓದಿದರು ಅದರಲ್ಲಿ Harangue
ಮಾಡಬಾರದೆಂಬ ಶಬ್ದವಿತ್ತು. ತತ್ಕ್ಷಣವೇ ಟಿಳಕರು
ಆ ಹುಕುಮನ್ನು ಕಿಸೆಯಲ್ಲಿ ಹಾಕಿಕೊಂಡು 'I shall obey
this order and yet make a speech' ಎಂದು ಅಂದರು.
ಪೋಲಿಸ ಸುಪರಿಂಟೆಂಡೆಂಟರಿಗೆ ಏನೂ ತಿಳಿಯದಂತಾಯಿತು.

ನನಗೂ ಏನೂ ತಿಳಿಯಲಿಲ್ಲ ಆಗ ಟಿಳಕರು ನಕ್ಕು ' Harangue means excited speech ನಾನೇನೂ ಅಂಥ ಭಾಷಣ ಮಾಡುವುದಿಲ್ಲ'ವೆಂದು ಅಂದರು ಆಗ ಪೋಲಿಸ ಸುಪರಿಂಟೆಂಡೆಂಟರು ಗಾಬರಿಯಾಗಿ ತಾವು ಕಲೆಕ್ಟರರ ಕಡೆಗೆ ಹೋಗಿ ಯಾವ ತರಹದ ಭಾಷಣವನ್ನೂ ಮಾಡಕೂಡದೆಂಬ ಹುಕುಮನ್ನು ತರುವುದಾಗಿ ತಿಳಿಸಿದರು ಅದಕ್ಕೆ ಟಿಳಕರು 'ಹೋಗಿರಿ; ಆ ಹುಕುಮನ್ನು ತಕ್ಕೊಂಡು ಬರ್ರಿ' ಎಂದು ಹೇಳಿಕಳುಹಿಸಿದರು ಅವರು ಅತ್ತ ಹೋಗಿ ಬರುವಷ್ಟರಲ್ಲಿ ಇತ್ತ ಟಿಳಕರು ಭಾಷಣಮಾಡಬಹುದೆಂದು ನಾನು ಬಗೆದಿದ್ದೆ ಆದರೆ ನನ್ನ ತರ್ಕವು ಸುಳ್ಳಾಯಿತು ಟಿಳಕರು ಸ್ವಸ್ಥವಾಗಿ ಕುಳಿತುಬಿಟ್ಟರು. ನಾನು ಹೀಗೇಕೆ ಹಾದೀ ನೋಡುವಿರಿ, ಭಾಷಣ ಮಾಡಿಬಿಡಬಾರದೇ ಎಂದು ಅವರನ್ನು ಕೇಳಿದೆ ಅದಕ್ಕೆ ಅವರು 'ಇದು ನಮಗೂ ಅವರಿಗೂ ಒಂದು ತರಹದ ಯುದ್ಧ. ಅವರ ಕೈಯಲ್ಲಿ ಅಧಿಕಾರ ನಮ್ಮನ್ನು ಅವರು ಬೇಕಾದಾಗ ಬೇಕಾದ ನೆವದಿಂದ ಹಿಡಿದು ಸೆರೆಮನೆಗೆ ಅಟ್ಟಬಹುದು ನಾವು ಅದಕ್ಕೆ ಯಾವಾಗಲೂ ಸಿದ್ಧರೇ ಇರಬೇಕು. ಅವರು ಎಷ್ಟು ಹೆಚ್ಚು ಅನ್ಯಾಯ ಮಾಡುತ್ತಾರೆಂಬುದನ್ನು ಜನತೆಗೆ ತೋರಿಸಿಕೊಟ್ಟು ಜನಮನವನ್ನು ಜಾಗ್ರತಿಗೊಳಿಸುವುದೇ ಇಂಥ ಪ್ರಸಂಗಗಳ ಮುಖ್ಯ ಉದ್ದೇಶ. ಭಾಷಣಮಾಡುವುದೇನೂ ಮುಖ್ಯ ಉದ್ದೇಶವಲ್ಲ. ಇದೋ ನೋಡಿರಿ—Harangue ಎಂಬುದಕ್ಕೆ ನಾನೇನೋ ಪ್ರಕ್ಷೋಭಕಾರಕ ಭಾಷಣ (excited speech) ಎಂದೆನು; ನಾನು ಮಾಡುವ ಭಾಷಣವು ಪ್ರಕ್ಷೋಭಕಾರಕವೋ ಅಲ್ಲವೋ ಎಂಬುದನ್ನು ನಿರ್ಣಯಿಸುವವರು ಸರಕಾರದವರೇ ಅಲ್ಲವೇ? ಸದ್ಯಕ್ಕಂತೂ ನನ್ನನ್ನು ಹಿಡಿದು ಸೆರೆಮನೆಗೆ ಅಟ್ಟಲಿಕ್ಕೆ ಅವ

ರಿಗೆ ಅಡ್ಡೀ ಏನು? ಯಾವ ತರಹದ ಭಾಷಣವನ್ನೂ ಮಾಡಬಾರ
ದೆಂದು ಹುಕುಮು ಬರುತ್ತದೆಯೋ ಹೇಗೆ ನೋಡುವ ಹಾಗೆ
ಮಾಡಿದರೆ, ಆಗ ಏನು ಮಾಡಬೇಕೆಂಬುದನ್ನು ನಾನು ಮುಂದೆ
ನೋಡುತ್ತೇನೆ' ಎಂದು ಹೇಳಿದರು. ಪೋಲಿಸಸುಪರಿಂಟೆಂಡೆಂ
ಟರು ಹೋಗಿ ಕಲೆಕ್ಟರರಿಗೆ ಮತ್ತೊಂದು ಹುಕುಮು ಕೊಡ
ಲಿಕ್ಕೆ ಕೇಳಿದರು. ಆದರೆ, ಹಾಗೆ ಕೊಡಲು ಕಲೆಕ್ಟರರಿಗೆ ಧೈರ್ಯ
ವಾಗಲಿಲ್ಲ. ಟಿಳಕರ ಭಾಷಣವಾಯಿತು

**ಟಿಳಕರ ಕರ್ನಾಟಕದ ಪ್ರವಾಸ**—ಗದುಗಿನಲ್ಲಿ ಬಂದ
ಅನುಭವದಿಂದ ಟಿಳಕರು ನನಗೆ ಮತ್ತೊಂದು ಸಲಹೆ
ಕೊಟ್ಟರು. ಗದುಗಿನಲ್ಲಿ ಸಾರ್ವಜನಿಕ ಸಭೆ ಕೂಡಿದ ಸ್ಥಳವು
ಮ್ಯುನಿಸಿಪಾಲಿಟಿಯದು. ಮ್ಯುನಿಸಿಪಾಲಿಟಿಯ ಸದಸ್ಯರಾದರೋ
ಸರಕಾರದ ಕೈಗೊಂಬೆಗಳು ಆದಕಾರಣ, ಆ ಸ್ಥಳದಲ್ಲಿ ಸಭೆ
ಕೂಡಿಸಬೇಡಿರೆಂದು ಮ್ಯುನಿಸಿಪಾಲಿಟಿಯವರು ಹೇಳಿದ್ದರೆ ಏನು
ಮಾಡಬಹುದಾಗಿತ್ತು? ಅದಕ್ಕೆ ಅವರು ಮುಂದೆ ನನ್ನನ್ನು
ಹುಬ್ಬಳ್ಳಿ ಧಾರವಾಡಗಳಿಗೆ ಕಳುಹಿಸಿ, ಸಭೆಗಳನ್ನು ಖಾಸಗೀ
ಬೈಲುಗಳಲ್ಲಿ ಕೂಡಿಸುವಂತೆ ಏರ್ಪಾಡುಮಾಡಲಿಕ್ಕೆ ಹೇಳಿ
ದರು. ಆ ಪ್ರಕಾರ, ನಾನು ಹುಬ್ಬಳ್ಳಿಯಲ್ಲಿ ಊರ ಹೊರಗೆ
ಪಾಂಜರಪೋಳೆಯಲ್ಲಿಯೂ ಧಾರವಾಡದಲ್ಲಿ ಬಳ್ಳಾರಿ ರಾಮ
ರಾಯರ ಕಂಪಾವುಂಡಿನಲ್ಲಿಯೂ ಸಭೆಗಳನ್ನು ಏರ್ಪಡಿಸಿದೆ
ಮತ್ತು ಇವೆರಡೂ ಸ್ಥಳಗಳಲ್ಲಿ, ಪೋಲಿಸರಿಗೆ ಒಳಗೆ ಬರ
ಲಿಕ್ಕೇನೇ ನಾನು ಬಿಡಲಿಲ್ಲ. ಎರಡೂ ಕಡೆಗೆ ಪ್ರಚಂಡ ಜನ
ಸಮುದಾಯ ಕೂಡಿತ್ತು. ಮೆರವಣಿಗೆ ಆಯಿತು. ಧಾರವಾಡ
ದಲ್ಲಿ ಮೆರವಣಿಗೆ ಹೊರಟಾಗ ಒಂದು ಪ್ರಸಂಗವು ಸಂಭವಿಸಿತು.
ಅದು ನೆನಪಿನಲ್ಲಿಡತಕ್ಕದ್ದಾಗಿದೆ. ಮೆರವಣಿಗೆಯಲ್ಲಿ ಟಿಳಕರ

ಹತ್ತರ ನಾನು ಕುಳಿತಿದ್ದೆ. ಟಿಳಕರು ತಮ್ಮ ಮುಂದಿರುವ ವಿಶಾಲವಾದ ಜನಸಂದಣಿಯ ಘೋಷಣೆಗಳನ್ನು ಕೇಳಿ, ನನ್ನ ವ್ಯಕ್ತಿಯ ಸಲುವಾಗಿ ತೋರಿಸುವ ಈ ಉತ್ಸಾಹವನ್ನು ನಾಳೆ ಹೋಮರೂಲಿನ ಧ್ವಜವು ಹೊರಟಾಗ ತೋರಿಸಿದರೆ ನನಗೆ ಎಷ್ಟು ಆನಂದವಾದೀತು ಎಂದು ಅಂದರು ನಿಜವಾಗಿಯೂ ಅದೇ ಇಂಥ ಮೆರವಣಿಗೆಗಳ ಉದ್ದೇಶವು ಇಂಥ ಪ್ರಸಂಗ ಗಳ ಫೋಟೋ ತೆಗೆಸುವುದೊಂದು ಆಧುನಿಕ ಪದ್ಧತಿ. ಆದರೆ, ನನ್ನದು ಹಳೆಯ ಮನೋವೃತ್ತಿ ಅಲ್ಲದೆ, ಮೆರವಣಿಗೆಯಲ್ಲಿ ಟಿಳಕರ ಹತ್ತರ ಗಾಡಿಯಲ್ಲಿ ಕುಳಿತವ ನಾನೊಬ್ಬನೇ. ಆದ ಕಾರಣ, ಫೋಟೋದ ವ್ಯವಸ್ಥೆಮಾಡುವುದು ಉಚಿತವಲ್ಲವೆಂದು ತಿಳಿದು ನಾನು ಆ ವ್ಯವಸ್ಥೆ ಮಾಡಲಿಲ್ಲ. ಆ ಬಗ್ಗೆ ನನ್ನನ್ನು ನನ್ನ ಮಿತ್ರರು ಬಲವಾಗಿ ದೂಷಿಸಿದರು

**ಡಾ|| ಹಂದೂರ ಮತ್ತು ಬೇವೂರ ಭೀಮರಾವ ಇವರಿಗೆ ಸಂಬಂಧಿಸಿದ ಸ್ಮೃತಿ**—೧೯೧೫ ನೆಯ ಇಸ್ವಿಯ ಸುಮಾರಕ್ಕೆ ಈ ದೇಶದಲ್ಲಿ ಕ್ರಾಂತಿಕಾರಕಚಳವಳಿಯ ಚುಂಗು ತಾಕಿತ್ತು ಭೀಮರಾವ ಹಂದೂರ ಮತ್ತು ಬಾಬುರಾವ ಗಣಿ ಎಂಬವರು ಕಲಕತ್ತಾ ನ್ಯಾಶನಲ್ ಮೆಡಿಕಲ್ ಕಾಲೇಜಿನ ವಿದ್ಯಾರ್ಥಿಗಳು. ಅವರ ಇಬ್ಬರು ಬಂಗಾಲೀ ಸ್ನೇಹಿತರು, ಪದವೀಧರರು ಇತ್ತಕಡೆಗೆ ಗೋವೆಯ ಪ್ರಾಂತದ ಪಣಜಿಯಲ್ಲಿ ವಾಸಮಾಡಲಿಕ್ಕೆ ಬಂದಿದ್ದರು ಅವರ ಹೆಸರಿಲೆ ಅಮೇರಿಕೆಯಿಂದ ಆರ್ಮ್ಸ್ ಮತ್ತು ಆ್ಯಮ್ಯುನಿಶನ್ ಬರತಕ್ಕವಿದ್ದವು. ಅದರ ಸೂಚಕ ತಂತಿ ಸರಕಾರಕ್ಕೆ ಸಿಕ್ಕಿತು. ಸರಕಾರದವರು ಅವರನ್ನು ಸೆರೆಹಿಡಿದರು. ಬೇವೂರ ಭೀಮು ಈತನು ಆ ಬಂಗಾಲಿಗಳನ್ನು ಕಳಿಸಲಿಕ್ಕೆ ಪಣಜಿಗೆ ಹೋಗಿದ್ದ. ಆದಕಾರಣ

೧೯೧೬ ನೆಯ ಜನೆವರಿಯಲ್ಲಿ ಆತನೂ ಬಾಬೂರಾವ ಗಣಿ ಮತ್ತು ಹಂದೂರ ಭೀಮರಾವ ಇವರೂ ಹಿಡಿಯಲ್ಪಟ್ಟರು. ಪುಣೆಯ ಸಿ ಆಯ್. ಡಿ ಆಫೀಸಿಗೆ ಒಯ್ಯಲ್ಪಟ್ಟರು ಮೈಹುಳಿ ಹೊಡೆಯಲ್ಪಟ್ಟರು ಆ ಒಳಸಂಚಿನಲ್ಲಿ ಆಲೂರ ವೆಂಕಟರಾಯರೂ ಮುದವೇಡೀಕರರೂ ಕೂಡ ಇದ್ದರೆಂದು ಹೇಳಲಿಕ್ಕೆ ಅವರನ್ನು ಒತ್ತಾಯಪಡಿಸಿದರು. ಆದರೆ ಅವರು ಸುಳ್ಳು ಹೇಳಲಿಕ್ಕೆ ಒಪ್ಪಲಿಲ್ಲ. ಅವರನ್ನು ಒಂದು ತಿಂಗಳು ಎರವಡಾ ಜೈಲಿನಲ್ಲಿಟ್ಟು, ಮೂವರನ್ನು ಮೂರು ಹಳ್ಳಿಗಳಲ್ಲಿ ದಿಗ್ಬಂಧನ ಮಾಡಿಟ್ಟರು. ಅವರಿಗೆ ನನ್ನ ಸಲುವಾಗಿ ಹೀಗೆ ಪೆಟ್ಟು ತಿನ್ನಬೇಕಾದ ಸುದ್ದಿ ಮುಂದೆ ಬೇವೂರ ಇವನು ನನಗೆ ಭೆಟ್ಟಿಯಾದಾಗ ಹೇಳಿದ.

**ಹೋಮರೂಲ ಲೀಗಿನ ದವಾಖಾನೆ:**—೧೯೧೯ ನೆಯ ಇಸ್ವಿಯಲ್ಲಿ ಈ ದೇಶದಲ್ಲಿ ಇನ್‌ಫ್ಲೂಎಂಝಾ ಬೇನೆಯು ಮೊದಲಿಗೆ ಪ್ರಾದುರ್ಭವಿಸಿ, ಲಕ್ಷಾವಧಿ ಜನರನ್ನು ಆಹುತಿಯಾಗಿ ತೆಗೆದುಕೊಂಡಿತು. ಆಗ, ನಾನು ಹೋಮರೂಲ ಲೀಗಿನ ಸೆಕ್ರೆಟರಿ ಇದ್ದೆ. ಆ ಸಂಸ್ಥೆಯ ವತಿಯಿಂದ ಒಂದು ಪುಕ್ಕಟೆ ದವಾಖಾನೆ ತೆಗೆದೆ. ನಾನು, ಶೀನಪ್ಪಾ ಜೋಗ (ಆತನು ಅದೇ ಸಾರ್ವಜನಿಕ ಕಾರ್ಯಕ್ಕೆ ಬಂದಿದ್ದ) ಇಬ್ಬರೂ ಹಗಲು ರಾತ್ರಿ ದುಡಿದು, ರೋಗಿಗಳಿಗೆ ಮನೆ ಮನೆಗೆ ಹೋಗಿ ಔಷಧ ಮತ್ತು ಗಂಜಿ ಹಾಕಿ ಬರುತ್ತಿದ್ದೆವು. ಒಂದೊಂದು ಮನೆಯಲ್ಲಿ ಸಾಲಾಗಿ ೮-೧೦ ಹಾಸಿಗೆಗಳು ಇರುತ್ತಿದ್ದವು. ಗಂಜೀ ಹಾಕಲಿಕ್ಕೆ ಒಬ್ಬರೂ ಕೂಡ ಇರುತ್ತಿದ್ದಿಲ್ಲ.

**ಸ್ವರಾಜ್ಯ ಚಳವಳಿಯೂ ವಕೀಲರ ಕೋಣೆಯೂ:**— ಹೋಮರೂಲಿನ ಚಳವಳಿಯಲ್ಲಿ, ನಾನು ವಕೀಲಿ ಮಾಡು

ತ್ತಿದ್ದೆ. ಆದರೆ, ನನ್ನ ಪಾಲುಗಾರರಾದ ಮುದವೇಡೇಕರ ವೆಂಕಟರಾಯರು, ನನಗೆ ಸಾರ್ವಜನಿಕ ಕಾರ್ಯಮಾಡುವುದಕ್ಕೆ ಮುಕ್ತದ್ವಾರ ಮಾಡಿಕೊಟ್ಟಿದ್ದರು. ದೇವರ ದಯೆಯಿಂದ, ಆಗಿನ ಸುದಿವಸಗಳಲ್ಲಿ ನಮ್ಮಿಬ್ಬರಿಗೂ ಸಾಕಾಗಿ ಹೆಚ್ಚಾಗುವಷ್ಟು ಹಣ ಅನಾಯಾಸವಾಗಿ ದೊರೆಯುತ್ತಿತ್ತು. ಇಬ್ಬರ ಮನೋವೃತ್ತಿಯೂ ಸಂತುಷ್ಟ ಮನೋವೃತ್ತಿ. ಆಗ, ವಕೀಲರ ಕೋಣೆಯೆಂದರೆ ಅದೊಂದು ನಿತ್ಯದ ಸಭಾಸ್ಥಾನ. ವಕೀಲರಲ್ಲಿ ಸಾರ್ವಜನಿಕ ಹರಟೆಯೇ ಹರಟೆ. ಅಲ್ಲಿ, ನಾನು ಹಲವು ಹೊಸ ಸಂಪ್ರದಾಯಗಳನ್ನು ಹಾಕಿದೆ. ಒಬ್ಬೊಬ್ಬರು ವರ್ಷಕ್ಕೆ ಒಂದೆರಡು ರೂಪಾಯಿ ಕೊಟ್ಟರೆ, ಅಲ್ಲಿಯೇ ಒಂದು ವಾಚನಾಲಯವಾಗುತ್ತಿತ್ತು. ಹಾಗೆ ಹಣ ಕೂಡಿಸಿ, ಮುಂಚೆ ದೈನಿಕ ಪತ್ರಿಕೆಗಳನ್ನು ತರಿಸಿದೆ. ಬರಬರುತ್ತ ನನಗೆ ಬೇಕಾದ ಗ್ರಂಥಗಳನ್ನು ತರಿಸಿಕೊಂಡೆ. ನನ್ನದೊಂದು ಪ್ರತ್ಯೇಕ ಕೋಣೆ ಮಾಡಿಕೊಂಡಿದ್ದೆ ನಾನು ನನ್ನ ಹನ್ನೆರಡು ಸ್ವರಾಜ್ಯದ ಹೊತ್ತಿಗೆಗಳನ್ನು (Pamphlets) ಬರೆದುದು ಕೋರ್ಟಿನ ಆ ಕೋಣೆಯಲ್ಲಿ ಕುಳಿತುಕೊಂಡು.

## ಅಸಹಕಾರ ಯುಗ (೧೯೨೦-೨೫)

**ವಕೀಲಿಗೆ ಪುನಃ ಶರಣು ಹೊಡೆದುದು**—ಸ್ವರಾಜ್ಯ ಚಳವಳಿಯು ಭರದಿಂದ ನಡೆದಾಗ. ಟಿಳಕರು ತೀರಿಕೊಂಡರು. ಕೂಡಲೆ ಮ. ಗಾಂಧಿಯವರು ರಾಜಕಾರಣದ ಸೂತ್ರಗಳನ್ನು ಎತ್ತಿದರು. ಕಲಕತ್ತೆಯಲ್ಲಿ ೧೯೨೦ ನೆಯ ಅಗಸ್ಟದಲ್ಲಿ ಅವರು ಅಸಹಕಾರದ ಘೋಷಣೆ ಮಾಡಿದೊಡನೆ, ನಾನು ಪುನಃ ವಕೀಲಿಗೆ ಶರಣು ಹೊಡೆದೆ. ಅಸಹಕಾರ ತತ್ವವು ನನ್ನ ಪ್ರೀತಿಯ

ತತ್ವವು ಅರವಿಂದ ಘೋಷರು "No control, no co-operation — "ಸ್ವಾತಂತ್ರ್ಯವಿಲ್ಲದಲ್ಲಿ ಸಹಾಕಾರವಿಲ್ಲ" ಎಂಬುದಾಗಿ ಸಾರಿದ್ದರು. ಅದು ನನ್ನ ಮನವನ್ನು ಬಲವಾಗಿ ಹಿಡಿದಿತ್ತು. ಅದರ ಮೂಲಕವೇ, ಹಿಂದಕ್ಕೆ ನಾನು ಕಾಯದೆ ಕೌನ್ಸಿಲಿಗೆ ಕರ್ನಾಟಕದ ಪ್ರತಿನಿಧಿಯಾಗಿ ನಿಲ್ಲಬೇಕೆಂದು ಪುಣೆಯಿಂದಹೋಮರೂಲ ಲೀಗಿನವರು ಒತ್ತಾಯದ ತಂತಿ ಕಳುಹಿಸಿದಾಗ, ನನಗೆ ಅದು ಬೇಡವೆಂದು ತಟ್ಟನೆ ಮಾರುತ್ತರದ ತಂತಿ ಕಳಿಸಿಬಿಟ್ಟೆ. ಅಸಹಕಾರದ ಮನೋವೃತ್ತಿಯುಳ್ಳ ನನಗೆ ಮ ಗಾಂಧಿಯವರ ಘೋಷಣೆಯಿಂದ ಆನಂದವಾದುದೇನಾಶ್ಚರ್ಯ? ವಕೀಲಿಗೆ ರಾಜೀನಾಮೆ ಕೊಟ್ಟೆ. ಆಗ, ನನ್ನ ಸುತ್ತಲೂ ಎಂದಿನಂತೆ ತರುಣರ ತಂಡವಿತ್ತು. ಅರವಿಂದರ ಗ್ರಂಥಗಳನ್ನೂ ಲೇಖಗಳನ್ನೂ ಅವರಿಗೆ ಓದಿ ಹೇಳುತ್ತಿದ್ದೆ ಅವರಲ್ಲಿ ವಾಮನ ಹೊದ್ಧೆ ಮುಂತಾದ ವಿದ್ಯಾರ್ಥಿಗಳೂ ಶಾಲೆಗೆ ಶರಣು ಹೊಡೆದರು.

**ಅಸಹಕಾರ ಚಳವಳಿಯಲ್ಲಿ ನನ್ನ ಭಾಗ:—** ನಾನು ಮೂಲತಃ ವಕೀಲಿ ಬಿಟ್ಟದ್ದು ರಾಜಕಾರಣದ ಸಲುವಾಗಿ· ಆದರೆ ದೇವರ ಸಂಕಲ್ಪವು ಬೇರೆ ಇತ್ತು. ನಾನು ವಕೀಲಿ ಬಿಟ್ಟಂದಿನಿಂದ ಒಂದರ ಮೇಲೊಂದು ವಿಶೇಷ ಘಟನೆಗಳು ಉಂಟಾಗಿ, ಅವು ನನ್ನನ್ನು ರಾಜಕಾರಣದಿಂದ ದಿನದಿನಕ್ಕೆ ದೂರ ಸರಿಸಹತ್ತಿದವು. ಅದನ್ನು ಬಿಡುವುದಕ್ಕೆ ೪-೫ ವರುಷಗಳು ಬೇಕಾದವೇನೋ ಸರಿ. ಆದರೆ, ಈ ಯುಗದಲ್ಲಿ ನನ್ನ ಮನಸ್ಸಿನ ಮುದ್ರೆಯು ಜನತೆಯ ಮೇಲೆ ವಿಶೇಷವಾಗಿ ಮೂಡಲಿಲ್ಲವೆಂದೇ ಹೇಳಬೇಕು. ಆದಕಾರಣ, ಈ ಯುಗದ ನನ್ನ ಸ್ಮೃತಿಗಳನ್ನು ಹೆಚ್ಚಾಗಿ ಕೊಡುವ ಕಾರಣವಿಲ್ಲ. ಕಲಕತ್ತೆ

ಯಲ್ಲಿ ಅಸಹಕಾರದ ಘೋಷಣೆಯಾದ ಕೂಡಲೆ, ಅದರ ಸಂದೇಶವನ್ನು ಬೀರುವುದಕ್ಕೆ ಗಂಗಾಧರರಾಯರು ಧಾರವಾಡಕ್ಕೆ ಬಂದರು ಆಗ ಕಡಪಾ ರಾಘವೇಂದ್ರರಾಯರು,' ಗಂಗಾಧರರಾಯರು ಕನ್ನಡದಲ್ಲಿಯೇ ಮಾತಾಡಬೇಕೆಂದು ಒತ್ತಾಯಪಡಿಸಿದರು ಅದಕ್ಕೆ ನನ್ನ ಬೆಂಬಲ ಗಂಗಾಧರರಾಯರು ಕನ್ನಡದಲ್ಲಿ ಮಾತಾಡುವುದಿಲ್ಲವೆಂದು ಹಟತೊಟ್ಟರು ಆಗ ಆ ಪ್ರಚಂಡ ಸಭೆ ಮುರಿದುಹೋಯಿತು ಅಂದಿನಿಂದ ಗಂಗಾಧರರಾಯರು ನಮಗೆ ತತ್ವತಃ ಅಲ್ಲದಿದ್ದರೂ ಕಾರ್ಯತಃ ವಿರೋಧಿಗಳಾದರು ಅವರು ಮ ಗಾಂಧಿಯವರ ಪಟ್ಟಶಿಷ್ಯರು ಕರ್ನಾಟಕತ್ವದ ನಮ್ಮ ಚಳವಳಿಗೆ ಆಗ ನಮ್ಮವರದೇ ವಿರೋಧ ಆದಕಾರಣ, ಕಾಂಗ್ರೆಸ್ಸಿನಲ್ಲಿದ್ದು ಕರ್ನಾಟಕದ ಹಿತವನ್ನು ಮಾಡುವ ನನ್ನ ಉದ್ದೇಶವು ಸಾಧ್ಯವಾಗುವುದಿಲ್ಲವೆಂದು ತಿಳಿದು ನಾನು ಬರಬರುತ್ತ ರಾಜಕಾರಣದ ಮುಖಂಡತ್ವದಿಂದ ಹಿಂದಕ್ಕೆ ಸರಿಯಹತ್ತಿದೆ

**ಮ. ಗಾಂಧಿಯುವರಿಗೂ ನನಗೂ ತತ್ತ್ವಭೇದ**—ಮ. ಗಾಂಧಿಯುವರು ಟಿಳಕರಿಗಿಂತ ಹೆಚ್ಚಿನ ತಪಸ್ವಿಗಳು. ಅಸಹಕಾರದ ಕಲ್ಪನೆ ಅತ್ಯುತ್ಕೃಷ್ಟ ಕಲ್ಪನೆ ಅದು ನನ್ನ ಮನವನ್ನೆಳೆಯಿತು. ಆದರೆ, ಅವರ ಸಂಗಡ ತಳುಕು ಹಾಕಲ್ಪಟ್ಟ ಮಿಕ್ಕ ಕೆಲವು ಕಲ್ಪನೆಗಳಲ್ಲಿ ನನಗೆ ತಿಲಪ್ರಾಯವೂ ವಿಶ್ವಾಸವಿರಲಿಲ್ಲ. ಇಷ್ಟೇ ಅಲ್ಲ, ಅವುಗಳಿಂದ ಕೊನೆಗೆ ದೇಶಕ್ಕೆ ಹಾನಿಯೇ ಆಗುತ್ತದೆಂದು ನನ್ನ ಪ್ರಾಮಾಣಿಕವಾದ ಭಾವನೆಯಿದೆ. ಅಹಿಂಸೆಯು ಹಿಂಸೆಗಿಂತ ಶ್ರೇಷ್ಠವಾದ ತತ್ವವೆಂಬುದು ಎಲ್ಲರೂ ಒಪ್ಪತಕ್ಕ ಮಾತೇ. ಅದೇ ಮೇರೆಗೆ, ನಿಃಶಸ್ತ್ರವೂ ನಿರ್ವೀರ್ಯವೂ ಆದ ಹಿಂದುಸ್ಥಾನಕ್ಕೆ ಆಗಿನ ಕಾಲದಲ್ಲಿ ಅಹಿಂಸಾತತ್ವವನ್ನು

ಹೆಚ್ಚುವವರೇ ಬೇಕಾಗಿದ್ದರೆಂಬುದೂ ನಿರ್ವಿವಾದ. ಆದರೆ, ಆ ತತ್ವವೊಂದನ್ನೇ ತಲೆಯ ಮೇಲೆ ಎತ್ತಿಕೊಂಡು ಕುಣಿಯುವುದು ಸನಾತನ ಧರ್ಮಕ್ಕೆ ವಿರುದ್ಧವಾದುದೆಂದೇ ನನ್ನ ಮತ. ಸ್ವಭಾವತಃ ನಾನು ಕ್ಷತ್ರಿಯನಲ್ಲ. ಆದ ಮಾತ್ರಕ್ಕೆ ಕ್ಷಾತ್ರತೇಜವು ನಮ್ಮ ದೇಶದಲ್ಲಿ ಎಂದೂ ಮಿಂಚಲೇಬಾರದೆಂಬ ಅಭಿಪ್ರಾಯದವನು ನಾನಲ್ಲ. ಅರಾಜಕ ಚಳವಳಿಯ ತರುಣರು ತಪ್ಪುದಾರಿ ಹಿಡಿದವರೆಂದು ಹೇಳುವುದು ಬೇರೆ; ಅವರು ಪುಕ್ಕರೂ ಹೇಡಿಗಳೂ ನೀಚರೂ ಎಂದೆನ್ನುವುದೆಂದರೆ ಸತ್ಯದ ವಿಪರ್ಯಾಸ! ಅಹಿಂಸೆಯು ಒಂದು ವಿಶಿಷ್ಟಮನೋವೃತ್ತಿಯುಳ್ಳ ವಿಶಿಷ್ಟವರ್ಗದ ಪರಮಧರ್ಮವಾಗಬಹುದೇ—ಪರಮಧರ್ಮವಾಗಬೇಕೇ ವಿನಾ, ಅದು ಇಡೀ ರಾಷ್ಟ್ರದ ಮನೋಭಾವನೆಯಾಗಲಾರದು—ಆಗಬಾರದು ಎಂದು ನನ್ನ ಮತ. ಅದೇ ಮೇರೆಗೆ ಕಾಂಗ್ರೆಸ್ಸು ಮುಖ್ಯತಃ ರಾಜಕಾರಣ ಸಂಸ್ಥೆಯಾಗಿದ್ದು ಅದರಲ್ಲಿ ಸಮಾಜ ಸುಧಾರಣೆಯೇ ಮುಂತಾದ ಮಿಕ್ಕ ವಿಷಯಗಳನ್ನು ಹೊಗಿಸುವುದು—ಅದನ್ನೂ ಅಪ್ರತ್ಯಕ್ಷವಾಗಿ ಹೊಗಿಸುವುದು ಸರಿಯಲ್ಲವೆಂದು ನನಗೆ ತೋರುತ್ತದೆ. ಅದರಿಂದ ಸಮಾಜ ಸುಧಾರಣೆಗೂ ಹಾನಿ, ರಾಜಕಾರಣಕ್ಕೂ ಹಾನಿ. ಹಾಗೆಯೇ, ಸೆರೆಮನೆಗಾಗಿಯೇ ಸೆರೆಮನೆಗೆ ಹೋಗುವುದೂ ಒಂದು ಬಾಹ್ಯಾಡಂಬರ (Fashion) ವಾಗಬಾರದು. ಮ. ಗಾಂಧಿಯವರು ಕುಶಲತೆಯಿಂದ ಅದಕ್ಕೆ ಕೊಟ್ಟ ಸುಲಭ ಸ್ವರೂಪವು ಜನಜಾಗ್ರುತಿಯ ಪ್ರಥಮಪಾಠ; ನ್ಯಾಯಬುದ್ಧಿಯ ಝುರಿಯೇ ಬತ್ತಿಹೋಗಿದ್ದ ಆಳರಸರ ಮೇಲೆ ಅದರ ಪರಿಣಾಮ ಅತ್ಯಲ್ಪ. ಈ ಪ್ರಕಾರವಾಗಿ, ಮ. ಗಾಂಧಿಯವರಿಗೂ ನನಗೂ ಅನೇಕ ವಿಷಯಗಳಲ್ಲಿದ್ದ ಮತಭೇದಗಳನ್ನು ನಾನು ಕೂಡಲೆ

ಅವರಿಗೆ ರಜಿಷ್ಟರ ಪತ್ರದ ಮುಖಾಂತರವಾಗಿ ತಿಳಿಸಿದೆ ಮತ್ತು ನಾನು ಇಲ್ಲಿಯ ಕಾಂಗ್ರೆಸ ಕಮೀಟಿಯ ಉಪಾಧ್ಯಕ್ಷನಾಗಿದ್ದ ಕಾರಣ, ಅವರ ಕಾರ್ಯಕ್ರಮದಲ್ಲಿ ಪೂರ್ಣವಾದ ಶ್ರದ್ಧೆಯಿಲ್ಲದ ನನ್ನಂಥವನು ಅಧಿಕಾರ ಸ್ಥಳದಲ್ಲಿದ್ದು ಅವರ ಕಾರ್ಯಕ್ರಮವನ್ನು ತೋರಗಾಣಿಕೆಯಲ್ಲಿ ನಡೆಯಿಸಿ, ಅವರನ್ನು ತಪ್ಪು ತಿಳಿವಳಿಕೆಯಲ್ಲಿಡುವುದು ಉಚಿತವಲ್ಲವೆಂದು ತಿಳಿದು ನಾನು ಅಧಿಕಾರಪದಕ್ಕೆ ಮುಂದೆ ರಾಜೀನಾಮೆ ಕೊಟ್ಟೆ. ದಿವಾಕರ ರಂಗರಾಯರು ಆ ನನ್ನ ಉಪಾಧ್ಯಕ್ಷ ಸ್ಥಳವನ್ನು ಸ್ವೀಕರಿಸುವವರೆಗೆ ಮಾತ್ರ ನಾನು ಅಲ್ಲಿ ಇದ್ದೆ

ಮತ್ತೊಂದು ಸಂದರ್ಭದಲ್ಲಿ ನಾನು ಗಂಗಾಧರರಾವ ದೇಶಪಾಂಡೆ ಇವರಿಗೆ ೧೪-೬-೧೯೩೯ ನೆಯ ಇಸ್ವಿಯ ದಿವಸ ಬರೆದ ಪತ್ರದಲ್ಲಿ ಈ ವಿಷಯವಾಗಿ ಹೀಗೆ ಬರೆದಿರುತ್ತೇನೆ

"But you know that I have not taken any leading part in politics for the last 8 years Unfortunately, I could not agree with the whole policy of Mahatmaji So, I thought instead of harming his movement by outward adjustment I could better withdraw." ಆದರೆ, ರಾಜಕಾರಣದಲ್ಲಿ ಬಿಚ್ಚಿ ಮಾತಾಡುವುದು ಕಳವು; ಮುಚ್ಚಿ ಮಾತಾಡುವವರೇ ರಾಜಕಾರಣಪಟುಗಳು !

**ನಮ್ಮ ಮನೆತನದ ಬದಲಾದ ಸ್ಥಿತಿ** — ಇದೇ ಕಾಲಕ್ಕೆ ನನ್ನ ಮನೆತನದ ಸ್ಥಿತಿಯಲ್ಲಿಯೂ ಬದಲಾಗಿತ್ತು. ಇಬ್ಬರು ತಮ್ಮಂದಿರು, ಒಬ್ಬ ತಂಗಿ, ತಂದೆ ಮುಂತಾದವರು ತೀರಿಕೊಂಡಿದ್ದರು. ಎರಡು ಮೂರು ಅಂಗಡಿಗಳು ಮುಳುಗಿ, ೧೫-೨೦

ಸಾವಿರ ರೂಪಾಯಿ ಸಾಲ ನ್ನೈಮೇಲೆ ಬಂದಿತ್ತು. ನಾನು ಯಾವ ಸಂಸ್ಥೆಯಿಂದಲೂ ಸಾರ್ವಜನಿಕ ಕಾರ್ಯಕ್ಕೆ ಒಂದು ಪೈ ಸಹ ತೆಗೆದುಕೊಂಡವನಲ್ಲ ಕರ್ನಾಟಕ ನಿಧಿ, ಟಿಳಕ ನಿಧಿ ಮುಂತಾದ ನಿಧಿಗಳನ್ನು ಕೂಡಿಸಿದ್ದರೂ ಯಾವ ನಿಧಿಯನ್ನೂ ನಾನು ಇಟ್ಟುಕೊಂಡವನಲ್ಲ ಯಾವತ್ತು ಚಳವಳಿಗಳನ್ನು ಸ್ವಂತ ಖರ್ಚಿನಿಂದಲೇ ಮಾಡುತ್ತ ಬಂದವ ಆ ಶಕ್ತಿ ಇಲ್ಲ ದಾಯಿತು ನನಗೆ ನನ್ನ ಮಿತ್ರರಿಂದಲೂ ಸಹಾಯ ಸಿಕ್ಕುವ ಆಶೆ ಇದ್ದಿಲ್ಲ ಈ ಕಾರಣದ ಮೂಲಕವೂ ನನಗೆ ರಾಜಕಾರಣ ವನ್ನು ಬಿಡಬೇಕಾಯಿತು

**ಅಸಹಕಾರದಲ್ಲಿಯ ನನ್ನ ಚಟುವಟಿಕೆಗಳು** — ಹೀಗೆ ನಾನು ಈ ಯುಗದಲ್ಲಿ ಪ್ರಮುಖ ಮುಖಂಡನಾಗಿರದಿದ್ದರೂ, ನನ್ನ ರಾಜಕಾರಣದ ಚಟುವಟಿಕೆಗಳಿಗೇನೂ ಕಡಿಮೆ ಇದ್ದಿಲ್ಲ ರಾಷ್ಟ್ರೀಯ ಶಾಲೆಯಲ್ಲಿ ಸಂಬಳವಿಲ್ಲದೆ ದುಡಿದೆ ಜಿಲ್ಹೆಯ ಕಾಂಗ್ರೆಸ ಕಮಿಟಿಗೆ ಹಿರಿಯರಾದ ಜೋಸಿ ವಿನಾಯಕ ರಾಯರು ಅಧ್ಯಕ್ಷರು, ನಾನು ಉಪಾಧ್ಯಕ್ಷ ಅವರು ಮುಪ್ಪಿನವ ರಾದುದರಿಂದ, ಕಾರ್ಯದ ಯಾವತ್ತು ಭಾರವು ಸಹಜವಾಗಿ ನನ್ನ ಮೇಲೆಯೇ ಬೀಳುತ್ತಿತ್ತು. ದೇಶದಲ್ಲೆಲ್ಲ ಧ್ವಜವಂದನೆ ಮುಂತಾದವುಗಳಿಗೋಸ್ಕರ ನಾನೇ ಊರೂರಿಗೆ ಹೋಗುತ್ತಿದ್ದೆ ಅನೇಕ ಪತ್ರಿಕೆಗಳನ್ನು ನಡಿಸುವ ಭಾರವೂ ನನ್ನಮೇಲೆ

**ಧಾರವಾಡದಲ್ಲಿ ಗುಂಡಿನ ಸುರಿಮಳೆಯೂ ಮುದವೇಡಿ ವೆಂಕಟರಾಯರೂ.**— ೧೯೨೧ ರಲ್ಲಿ ದೇಶದಲ್ಲೆಲ್ಲ ಅಸಹ ಕಾರದ ಕೋಲಾಹಲವೇ ಕೋಲಾಹಲ ಧಾರವಾಡದಲ್ಲಿ ಹಿಂದೂ ಮುಸಲ್ಮಾನ ತರುಣರು ಕೂಡಿ ಪಿಕೆಟಿಂಗ ಚಳವಳಿ ಜೋರಿನಿಂದ ನಡಿಸಿದ್ದರು ಪಿಕೆಟಿಂಗ ಚಳವಳಿಯಲ್ಲಿ ಒಂದು

ದಿವಸ ಮುಸಲ್ಮಾನ ತರುಣನಿಗೆ ಆರು ತಿಂಗಳು ಶಿಕ್ಷೆಯಾಯಿತು. ಆ ದಿವಸ ಅಂದರೆ ೩೦-೬-೧೯೨೧ ನೆಯ ದಿವಸ ಸಾಯಂ ಕಾಲಕ್ಕೆ ಪ್ರೋಲಿಸ ಠಾಣೆಯ ಹತ್ತರ ವಿಲಕ್ಷಣ ಜನಸಂದಣಿ ನೆರೆದಿತ್ತು. ಶಿವಲಿಂಗಪ್ಪನೆಂಬ ಪೋಜದಾರನು ಜನರ ಮೇಲೆ ಗುಂಡುಗಳನ್ನು ಹಾರಿಸಿ ಮೂರು ಹೆಣ ಕೆಡಹಿದನು. ಅನೇಕ ರಿಗೆ ಗಾಯಗಳಾದವು. ಆ ಕಾಲದಲ್ಲಿ ವೆಂಕಟರಾಯರು ಧೈರ್ಯ ದಿಂದ ಜನಸಂದಣಿಯಲ್ಲಿ ಒಳಸೇರಿ, ಹೆಣಗಳನ್ನು ಎತ್ತಿ ಕೊಂಡು, ಜನರನ್ನು ಸರಿಸಿ, ಶಿವಲಿಂಗಪ್ಪನಿಗೆ ಶಾಂತವಾಗ ಲಿಕ್ಕೆ ಹೇಳಹೋದರು. ಆ ಪ್ರಕರಣದಲ್ಲಿ ಅವನಿಗೆ ಮೂರು ವರ್ಷದ ಕಠಿಣ ಶಿಕ್ಷೆಯಾಯಿತು. ಗುಂಡಿನ ಸುರಿಮಳೆ ಆದ ದಿವಸ, ಏಕಾದಶಿ ಉಪವಾಸವಿದ್ದುದರಿಂದ, ನಾನು ಊರಿಂದ ದೂರ ಸಾಧನಕೇರಿಯ ನನ್ನ ಬಂಗ್ಲೆಯಲ್ಲಿ ಇದ್ದೆ. ಹಿಂದಿನ ವರ್ಷ, ನಾನು ವಕೀಲಿ ಬಿಟ್ಟಿದ್ದೆ. ಆ ವರ್ಷ, ನನ್ನ ಪಾಲು ಗಾರರಾದ ವೆಂಕಟರಾಯರಿಗೆ, ಸರಕಾರದವರು ವಕೀಲಿ ಬಿಡಿ ಸಿದರು! ಅವರಿಗೂ ೬-೭ ವರ್ಷ ಸನದು ಸಿಕ್ಕಲಿಲ್ಲ. ಹೀಗಾಗಿ ಒಳ್ಳೇ ಭರದಿಂದ ನಡೆದಿದ್ದ ನಮ್ಮಿಬ್ಬರ ಪಾಲುಗಾರಿಕೆಯು ತಾನಾಗಿಯೇ ನಿಂತುಹೋಯಿತು. ಅದರ ಮೂಲಕ, ಪುನಃ ನಮಗೆ ೧೦-೧೫ ಸಾವಿರ ರೂಪಾಯಿಯ ಇನಾಮು ಮುಳುಗಿ ಹೋಗಿ ನಷ್ಟ ಬಡೆಯಿತು. **ದೇವರು ಕೊಡುವ ಹೊತ್ತಿಗೆ ಕೊಡುತ್ತಾನೆ, ಕಸಿದುಕೊಳ್ಳುವ ಹೊತ್ತಿಗೆ ಹೇಗೋ ಕಸಿದುಕೊಂಡು ಹೋಗುತ್ತಾನೆ.**

**ಅನೇಕ ಪತ್ರಗಳ ಸಂಪಾದಕತ್ವ** — ಗುಂಡಿನ ಸುರಿ ಮಳೆಯಾದ ಕೂಡಲೆ, ಸರಕಾರದವರು ಮಾಡಿದ ಮೊದಲಿನ ಕೆಲಸವೆಂದರೆ, ಪತ್ರಿಕೆಗಳ ಸಂಪಾದಕರನ್ನೆಲ್ಲ ಸೆರೆಹಿಡಿದು,

ಇಲ್ಲಿಂದ ನಿಜಸುದ್ದಿ ಹೊರಗೆ ಹೋಗದಂತೆ ಮಾಡಿದ್ದು. ಅದಕ್ಕೆ ಮಾರುತ್ತರವಾಗಿ ಆವೆಲ್ಲ ಪತ್ರಿಕೆಗಳನ್ನು ನಡಿಸಿಯೇ ತೀರು ವುದು ನಮ್ಮ ಹಟ ಸೆರೆಹಿಡಿಯಲ್ಪಟ್ಟ ಸಂಪಾದಕರ ಪತ್ರ ಗಳನ್ನೆಲ್ಲ ನಾನೊಬ್ಬನೇ ನಡಿಸುತ್ತೇನೆಂದು ಕಾಂಗ್ರೆಸ ಕಮಿ ಟಿಯವರಿಗೆ ಹೇಳಿದೆ ರಾಜಹಂಸ, ವಿಜಯ, ಕರ್ಮವೀರ, ಕರ್ನಾಟಕ ವೃತ್ತ ಮುಂತಾದ ಪತ್ರಿಕೆಗಳನ್ನೆಲ್ಲ ಕೆಲವು ತಿಂಗಳುಗಳವರೆಗೆ ನಾನೊಬ್ಬನೇ ನಡಿಸಿದೆ

**ಕರ್ಮವೀರ ಪತ್ರಿಕೆಯ ಸಂಪಾದಕತ್ವ**—ಅಸಹಕಾರ ಚಳವಳಿಯ ಕಾಲಕ್ಕೆ ರಾಜಕಾರಣದಲ್ಲಿ ಧುಮುಕಿದ ಮುಖ್ಯ ವ್ಯಕ್ತಿಯೆಂದರೆ "ಕರ್ಮವೀರ" ರೆಂಬ ನಿಜವಾಗಿಯೇ 'ಅನ ರ್ಥಕನಾಮ' ಪಡೆದಿರುವ ದಿವಾಕರ ರಂಗರಾಯರು ಅದೆ. ಅವರ ಪ್ರಥಮ ಪ್ರವೇಶ ಕಬ್ಬೂರ ಮುದ್ದು ಮತ್ತು ಅವರು ಕೂಡಿ ಕರ್ಮವೀರವೆಂಬ ವಾರಪತ್ರಿಕೆಯನ್ನು ಹೊರಡಿಸಿದ್ದರು ನಾನು ಅದರಲ್ಲಿ ಮೊದಲಿನಿಂದಲೂ ಲೇಖ ಬರೆಯುತ್ತಿದ್ದೆ ಗುಂಡಿನ ಪ್ರಕರಣದಲ್ಲಿ ಅವರಿಬ್ಬರೂ ಸೆರೆಹಿಡಿಯಲ್ಪಟ್ಟಾಗ, ನಾನೇ ನಡಿಸಿದೆ ೮-೧೦-೧೯೩೧ ನೆಯ ದಿವಸ ಅನೇಕರಿಗೆ ಕಡುತರವಾದ ಶಿಕ್ಷೆಗಳಾದವು ದಿವಾಕರ ರಂಗರಾಯರಿಗೆ ಶಿಕ್ಷೆ ಆಗದೆ ಅವರು ಬಿಡಲ್ಪಟ್ಟರು ಅದೇ ದಿವಸ ಬೆಳಗಾಂವಿಯಿಂದ ಗಂಗಾಧರರಾಯರನ್ನು ಸೆರೆಹಿಡಿದು ಧಾರವಾಡಕ್ಕೆ ತಂದರು ನಾನು ರಾಷ್ಟ್ರೀಯ ಶಾಲೆಯಲ್ಲಿ ಕಲಿಸಿ ಬಂದು ನೋಡುತ್ತೇನೆ, ಜರಾರ ಬಳವಂತರಾಯರ ಮನೆಯಲ್ಲಿ ಗದ್ದಲವೇ ಗದ್ದಲ. ಬೆಳಗಾಂವಿಯವರು ದಿವಾಕರ ರಂಗರಾಯರನ್ನು ಅಭಿನಂದ ನಾರ್ಥವಾಗಿ ಬೆಳಗಾಂವಿಗೆ ಒಯ್ಯುತ್ತೇವೆಂದು ಹೇಳಿದರು. ಕರ್ಮವೀರದ ಆ ಸಂಚಿಕೆಯನ್ನು ನಾನೇ ಬರೆಯಬೇಕೆಂದು

ಗೊತ್ತಾಯಿತು ನಾನು ಅಲ್ಲಿಯೇ ಕೂತು " ಭೂರಕ್ಕಸಾಯ್ಯ ಸ್ವಾಹಾ ' (ಈ ಗುಟ್ಟನ್ನು ರಂಗರಾಯರು ತಮ್ಮ ಸೆರೆಯ ಮನೆ ಯಲ್ಲಿ ಎಂಬ ಪುಸ್ತಕವಲ್ಲಿ ವೊಸ್ನೆ ವೊಸ್ನೆ ಒಡೆದೇ ಇದ್ದಾರೆ ) ಎಂಬ ಲೇಖ ಬರದ ಆಗಿನ ಪ್ರಕ್ಷುಬ್ಧ ವಾತಾವರಣಕ್ಕೆ ತಕ್ಕಂತೆ ಅದು ಅತಿಶಯ ಉಗ್ರವಾಗಿತ್ತು ಅದಕ್ಕಾಗಿ ರಂಗರಾಯರನ್ನು ಸೆರೆಹಿಡಿದರು ಅದು ತಮ್ಮ ಲೇಖವು ಅಲ್ಲವೆಂದು ಅವರು ಸತ್ಯವನ್ನು ಹೇಳಿದರು ಅವರನ್ನು ಬಿಡಬೇಕಾಯಿತು ಆದರೆ, ಅವರು ಹೊರಬಂದ ಕೂಡಲೆ ಮತ್ತೊಂದು ನೆವದಿಂದ ಅವ ರನ್ನು ಪುನಃ ಸೆರೆಹಿಡಿದು ಸೆರೆಮನೆಗೆ ಅಟ್ಟಿದರು ಇವೆಲ್ಲ ಖಟ್ಲೆ ಗಳು ನಡೆದಾಗ ನಾನು ಕಚೇರಿಗಳಿಗೆ ಹೋಗುತ್ತಲೇ ಇದ್ದೆ ಲೇಖಕನು ನಾನೇ ಎಂಬುದು ಊರೊಳಗಿನವರೆಲ್ಲರಿಗೂ ಗೊತ್ತು ಕೊನೆಯ ದಿವಸ ರಂಗರಾಯರಿಗೆ ಶಿಕ್ಷೆಯಾದ ಕೂಡಲೆ, ನಾನು ಅಲ್ಲಿಂದಲ್ಲೆ ಮ್ಯಾಜಿಸ್ಟ್ರೇಟರಿಗೆ ಕರ್ಮವೀರದ ಹೊರೆಯನ್ನು ಹೊರುತ್ತೇನೆಂದು ಹೇಳಿದೆ ಮತ್ತು ನಿಷ್ಕಾರಣ ವಾಗಿ ಒಂದಕ್ಕಿಂತ ಹೆಚ್ಚು ಹೆಸರು ಸಿಕ್ಕಿಸುವುದು ಲೇಸಲ್ಲ ವೆಂದು ತಿಳಿದು ಕರ್ಮವೀರ ಪತ್ರಿಕೆಯ ಸಂಪಾದಕನೂ ನಾನೇ ಆದೆ, ಪ್ರಕಾಶಕನೂ ನಾನೇ ಆದೆ. ಅಲ್ಲದೆ, ಕರ್ಮವೀರ ಮುದ್ರಣಾಲಯದ ಮುದ್ರಕನೂ ನಾನೇ ಆದೆ ನಾನೂ ಜೋಶಿ ಶಂಕರರಾಯರೂ ಪುನಃ ಮೊದಲಿಗಿಂತ ಉಗ್ರವಾದ ಲೇಖಗಳನ್ನು ಬರದು ಹೆಸರನ್ನು ಕಾಯ್ದುಕೊಂಡೆವು. " ಧೃತ- ರಾಷ್ಟ್ರ (Bureaucrats) ರೆಲ್ಲರೂ ಕುರುಡರೇ ' ಮುಂತಾದ ನನ್ನ ಕೆಲವು ಅತ್ಯುಗ್ರ ಲೇಖಗಳ ಬಗ್ಗೆ ನನ್ನ ಮೇಲೆ ಖಟ್ಲೆ ಯಾಗುವುದು ಗೊತ್ತಾಯಿತು ಆದರೆ ಅಷ್ಟರಲ್ಲಿ, ಗುಂಡಿನ ಪ್ರಕರಣದ ಉಪಾಧ್ಯಾಪಿಗಳಾದ ಪೇಂಟರ ಸಾಹೇಬರಿಗೆ ಕಮಿಶ

ನರ ಜಾಗೆಯು ದೊರೆತದ್ದರಿಂದ ಅವರು ಬೆಳಗಾಂವಿಗೆ ಹೊರಟು ಹೋದರು ಮತ್ತು ನನ್ನ ಮೇಲಿನ ಪ್ರಕರಣವು ಅಲ್ಲಿಗೇ ಉಳಿದುಹೋಯಿತು ಒಂದು ವರ್ಷ ಕರ್ಮವೀರವನ್ನು ನಡಿಸಿ, ರಂಗರಾಯರು ಮರಳಿ ಬಂದ ಬಳಿಕ ಅವರ ಪತ್ರವನ್ನೂ ಮುದ್ರಣಾಲಯವನ್ನೂ ಅವರಿಗೆ ಒಪ್ಪಿಸಿ ನಾನು ಮುಕ್ತನಾದೆ

**ಕರ್ನಾಟಕದ ಧ್ವಜ**— ಕಾಂಗ್ರೆಸ ಕಮಿಟಿಯವರು ಕರ್ನಾಟಕದ ವಿಶಿಷ್ಟ ಧ್ವಜವಾವುದಿರಬೇಕೆಂಬುದನ್ನು ಗೊತ್ತು ಮಾಡುವ ಸಲುವಾಗಿ ನನ್ನನ್ನೂ ಮತ್ತಿಬ್ಬರನ್ನೂ ನೇಮಿಸಿ ದರು ನಾನು ಆ ಬಗ್ಗೆ ದೀರ್ಘವಿಚಾರಮಾಡಿ, ಈಗಿನ ಕರ್ನಾಟಕದ ಧ್ವಜವನ್ನು ಗೊತ್ತುಮಾಡಿ, ವರದಿಯನ್ನು ಕೊಟ್ಟೆ ಮತ್ತು ಕರ್ಮವೀರದಲ್ಲಿ ಆ ಬಗ್ಗೆ ಒಂದು ಲೇಖವನ್ನು ಬರೆದು, ಆ ಚಿಹ್ನವನ್ನೇ ನಾನು ಯಾವ ಕಾರಣಗಳಿಗೋಸ್ಕರ ಗೊತ್ತು ಪಡಿಸಿದೆನೆಂಬುದನ್ನು ತಿಳಿಸಿಹೇಳಿದೆ ಅದು ಮುಂದ ಪ್ರಾಂತಿಕ ಕಾಂಗ್ರೆಸ ಕಮಿಟಿಯಲ್ಲಿ ಅವಸರದಲ್ಲಿ ಸ್ವೀಕೃತವಾಯಿತು ಆಗ ನಾನು ಅಲ್ಲಿ ಇರಲಿಲ್ಲ ನಾನು ಅಲ್ಲಿ ಇದ್ದರೆ, ಗಜ-ವೃಷಭಗಳ ಚಿತ್ರಗಳೊಂದಿಗೆ ಮುಸುರಿ ಮುಸುರಿಯಾಗಿ ಮಿಕ್ಕ ಚಿಕ್ಕ ಚಿಹ್ನೆಗಳನ್ನು ಕೂಡಿಸಬೇಡಿರಿ ಎಂದು ಹೇಳುತ್ತಿದ್ದೆ ಆದರೂ ನನ್ನ ಮುಖ್ಯ ಕಲ್ಪನೆಯು ಇದ್ದಕ್ಕಿದ್ದಂತಯೇ ಇವೆ ಎಂಬುದೇ ನನಗೆ ಸಂತೋಷ.

**ಬೆಳಗಾಂವಿಯ ಕಾಂಗ್ರೆಸ್ಸೂ, ತತ್ಪೂರ್ವದ ಹುಬ್ಬಳ್ಳಿಯ ಸಭೆಯೂ**—ಕಾಂಗ್ರೆಸ್ಸ ಚಟುವಟಿಕೆಗಳಲ್ಲಿ ನನ್ನ ಭಾಗವು ಕಡಿಕಡಿಮೆಯಾಗುತ್ತ ಹೋಯಿತೆಂಬುದನ್ನು ನಾನು ಹೇಳಿಯೇ ಇರುವೆ. ಕರ್ನಾಟಕಕ್ಕೆ ಕಾಂಗ್ರೆಸ್ಸು ಕರೆಯಲ್ಪಟ್ಟಾಗ, ಅದನ್ನು ಯಾವ ಪಟ್ಟಣದಲ್ಲಿ ಕೂಡಿಸಬೇಕೆಂಬ

ಬಗ್ಗೆ ಹುಬ್ಬಳ್ಳಿಯಲ್ಲಿ ದೊಡ್ಡ ಸಭೆ ನಡೆಯಿತು ಗಂಗಾಧರ ರಾಯರೇ ಮುಖ್ಯ ಮುಂದಾಳುಗಳಾದ್ದರಿಂದ, ಅರ್ಥಾತ್ ಅದು ಬೆಳಗಾಂವಿಯಲ್ಲಿಯೇ ಕೂಡುವುದೆಂಬುದು ಕಟ್ಟಿಟ್ಟಮಾತಿನಂತೆ ಆಗಿತ್ತು. ಆದರೆ, ಅಲ್ಲಿ ಕೂಡಿದರೆ ಮರಾಠಿಯ ಮುದ್ರೆಯೇ ಅದಕ್ಕೆ ಬಿದ್ದು ಅದು ಹೆಸರಿಗೆ ಮಾತ್ರ ಕರ್ನಾಟಕ ಕಾಂಗ್ರೆಸ್ಸು ಆಗುವುದಲ್ಲ ಎಂಬ ಅಂಜಿಕೆ ಕನ್ನಡಿಗರೆಲ್ಲರಿಗೆ ಉಂಟಾಯಿತು ಆ ಕಾರಣಕ್ಕಾಗಿ ಅದನ್ನು ಅಲ್ಲಿ ಕೂಡಿಸಬಾರದೆಂಬ ಬಗ್ಗೆ ದೊಡ್ಡ ಆಂದೋಲನ ಎದ್ದಿತು ನಾನು ಜಯಕರ್ನಾಟಕ ದಲ್ಲಿ ಆ ಬಗ್ಗೆ ಲೇಖ ಬರೆದೆ ಹುಬ್ಬಳ್ಳಿಯ ಸಭೆಯಲ್ಲಿ ಕಡಪಾ ರಾಘವೇಂದ್ರರಾಯರಿಗೂ ಗಂಗಾಧರರಾಯರಿಗೂ ಘೋರ ವಾಗ್ಯುದ್ಧವಾಯಿತು ಕಾಂಗ್ರೆಸ್ಸು ಧಾರವಾಡದಲ್ಲಿ ಆಗ ಬೇಕೆಂದು ನಾನು ಗೊತ್ತುವಳಿ ತಂದ. ಆದರೆ, ಆಗ ನಮ್ಮ ವರ್ಚಸ್ಸು ಎಷ್ಟು ಕಡಿಮೆಯಾಗಿತ್ತೆಂದರೆ, ನನ್ನ ಗೊತ್ತುವಳಿಗೆ ಅನುಮೋದನ ಕೊಡುವುದಕ್ಕೆ ಕೂಡ ಒಬ್ಬ ಮುಖಂಡನೂ ಮುಂದೆ ಬರಲಿಲ್ಲ ದೂರಿನಿಂದ ಗೋವರ್ಧನ ಮಳಿಯೆ ಎಂಬ ಆಪತುಕಾರದ ತರುಣನು ನನಗ ಧೈರ್ಯದಿಂದ ಅನುಮೋದನ ಕೊಟ್ಟ ಗಂಗಾಧರರಾಯರು ಕಾಂಗ್ರೆಸ್ಸು ನಿಜವಾಗಿ ಕರ್ನಾಟಕದ್ದೇ ಆಗುವಂತೆ ಎಚ್ಚರಪಡುತ್ತೇನೆಂದು ಆಶ್ವಾಸನ ಕೊಟ್ಟಿದ್ದರಿಂದ, ಅರ್ಥಾತ್ ನನ್ನ ಸೂಚನೆ ಬಿದ್ದುಹೋಯಿತು ಆದರೆ, ಜನಮತದ ಒಲವು ತಿಳಿದ ಕಾರಣ, ಬೆಳಗಾಂವಿಯ ಮರಾಠಿಗರಿಗೂ ಅದರಲ್ಲಿ ಸಿಕ್ಕಸಿಕ್ಕಂತೆ ಕೂಡಲು ಸಾಧಿಸಲಿಲ್ಲ.

ಬೆಳಗಾವಿಯ ಕಾಂಗ್ರೆಸ್ಸು ಆದ ಬಳಿಕ ನಾನು ಕಾಂಗ್ರೆಸ್ಸನ್ನು ಬಹುಶಃ ಪೂರ್ಣವಾಗಿಯೇ ಬಿಟ್ಟೆನೆಂದು ಹೇಳಬಹುದು. ಮುಂದೆ ಸಹ, ನನ್ನ ಹೆಸರು ಅನೇಕವರ್ಷ ಕಾರ್ಯಸಮಿತಿ

ಯಲ್ಲಿ ಹಾಕುತ್ತಲೇ ಇದ್ದರು. ಆದರೆ, ಅಲ್ಲಿ ನನ್ನ ಆಟವೇನೂ ಸಾಗುವಂತಿದ್ದಿಲ್ಲ ನಾನು ಮಂಗಳೂರು ಕಾರ್ಕಳ ಮುಂತಾದ ಅನೇಕ ಕಡೆಗೆ ಸಭೆಗಳಿಗೆ ಹೋಗುತ್ತಿದ್ದೆ. ೧೯೩೮ ನೆಯ ಇಸ್ವಿಯಲ್ಲಿ ಧಾರವಾಡದಲ್ಲಿ ಅನೇಕ ರಾಷ್ಟ್ರೀಯ ಪರಿಷತ್ತುಗಳು ಕೂಡಿದ್ದವು. ಖಾದೀಪರಿಷತ್ತಿಗೆ ನಾನು ಸ್ವಾಗತಮಂಡಳದ ಅಧ್ಯಕ್ಷನಾಗಿ ಆರಿಸಲ್ಪಟ್ಟು ಕೆಲಸವನ್ನು ಮಾಡಿದೆ. ಮುಂದಿನ ಕಾಯದೆಭಂಗ ಮುಂತಾದ ಯಾವತ್ತು ಚಟುವಟಿಕೆಗಳಲ್ಲಿ ಸಹಾಯಮಾಡಿದೆ. ನಾನು ಊರಲ್ಲಿಲ್ಲದಾಗ ೧೫-೨೦ ಪೋಲಿಸರು ಬಂಗ್ಲೆಯನ್ನು ಸುತ್ತುಗಟ್ಟಿ ಒಳಗೆಹೊಕ್ಕು ಸರ್ಚ(ಝಡತಿ) ಮಾಡಿದರು ನನ್ನ ಹೆಂಡತಿ ಮತ್ತು ಚಿಕ್ಕಮಕ್ಕಳು ಇದ್ದರು. ಅನೇಕ ಕಾಗದಪತ್ರ ಒಯ್ದರು. ಮೂವರು ಗುಪ್ತಪೋಲಿಸರ ಪಹಾರೆಯಂತೂ ಹಗಲೂರಾತ್ರಿ ಯಾವಾಗಲೂ ಇದ್ದೇಇತ್ತು. ನನ್ನ ಪತ್ರಗಳನ್ನು ಒಡೆದುನೋಡುವ ಕ್ರಮವು ತಪ್ಪಿದ್ದಿಲ್ಲ.

ಒಮ್ಮೆ ಒಂದು ದಿವಸ ನನ್ನನ್ನು 'ಲಾಕಪ್ಪಿ'ನಲ್ಲಿ ಇಟ್ಟು ಬಿಟ್ಟುಬಿಟ್ಟರು. ಮುಂದೆ ನನ್ನಮೇಲೆ ವಾರಂಟು ಹೊರಟಿರುವುದೆಂದು ಸುದ್ದಿ ಹಬ್ಬಿತು. ನಾನೂ ಮನೆಯವರೂ ಅಪರಾತ್ರಿಯಲ್ಲಿ ೮-೧೦ ದಿನ, ದಿನಾಲು ವಾರಂಟಿನ ಹಾದಿ ನೋಡಿದೆವು. ಒಂದು ದಿವಸ, ಹನ್ನೆರಡುಗಂಟೆ ರಾತ್ರಿಯಲ್ಲಿ ಒಬ್ಬನು ಬಂದು ಬಾಗಿಲು ಬಡೆದ ವಾರಂಟು ಬಂತು ಎಂದು ನನ್ನ ಹೆಂಡತಿ ನನ್ನನ್ನು ಎಬ್ಬಿಸಿದಳು. ಬಾಗಿಲ ತೆರೆಯುವಷ್ಟರಲ್ಲಿ ತಟ್ಟ ರಾಮರಾಯ ಬಂದಿದ್ದ ರಾತೋರಾತ್ರಿ ದೂರದಿಂದ ನಡೆದು ಹಸಿದು ಕಳ್ರಾಂತನಾಗಿ ಬಂದಿದ್ದ ಅಡಿಗೆ ಮಾಡಿಸಿ ಊಟಕ್ಕೆ ಹಾಕಿ ಕಳಿಸಿದೆ ಆತನು ನನ್ನ ನವಜೀವನ ಗ್ರಂಥಭಾಂಡಾರದ ಏಜೆಂಟನೆಂದು ನನ್ನಿಂದ ಪತ್ರಗಳನ್ನೊಯ್ದು

ಕೊಡಗು ಮುಂತಾದ ಪ್ರದೇಶಗಳಿಗೆ ಹೋಗಿ, ಚಳವಳಿಯ ಪ್ರಸಾರಮಾಡುತ್ತಿದ್ದ. ಆ ಬಳಿಕ ಕೆಲವು ದಿವಸಗಳ ಮೇಲೆ ನನಗೆ ಶಿರಸಿಯಿಂದ ಒಂದು ಪತ್ರ ಬಂದಿತು ಅದರಲ್ಲಿ ಹಿಂಡಲಿಗಿ ಜೇಲಿನಿಂದ ಕೆಲವು ಹೆಣ್ಣುಮಕ್ಕಳು ಬಿಟ್ಟುಬರುವರೆಂದೂ ನಾನು ಅವರ ಆದರಸತ್ಕಾರಮಾಡಿ, ಅವರನ್ನು ಸುರಕ್ಷಿತವಾಗಿ ಶಿರಸಿಗೆ ಕಳಿಸಬೇಕೆಂದೂ ಬರೆದಿತ್ತು. ಆ ಪ್ರಕಾರ ನಮ್ಮ ಮನೆಯಲ್ಲಿದ್ದ ಹೇಜೀಬ ರಾಮಚಂದ್ರನಿಗೆ ತಿಳಿಸಿ, ವ್ಯವಸ್ಥೆ ಮಾಡಿ, ನನ್ನ ಪತ್ರವನ್ನು ಪೋಲಿಸರು ಒಡೆದುನೋಡು ತ್ತಲೇ ಇದ್ದದ್ದು ನನಗೆ ಗೊತ್ತಿದ್ದಕಾರಣ, ಅವರು ಅದನ್ನು ಒಯ್ಯಲಿಕ್ಕೆ ಬರುವರೆಂದು ಹಾದೀ ನೋಡುತ್ತಿದ್ದೆ ಮರು ದಿವಸ ನಸಿಕ್ಕಲೆ 'ಸರ್ಚವಾರಂಟು' ತಂದರು. ಅಲ್ಲದೆ ನನ್ನನ್ನೂ ಹಿಡಿದೊಯ್ದು, ಹುಕುಮಿನ ಪ್ರಕಾರ ಕಲಘಟಗಿ ಗ್ರಾಮದಲ್ಲಿ ದಿಗ್ಬಂಧನ ಮಾಡಿಟ್ಟರು ಅಲ್ಲಿ ಸುಮಾರು ಒಂದು ವರ್ಷ ಇದ್ದೆ.

ಆದರೆ ನಾನು ಮುಂಚೆ ಹೇಳಿದಂತೆ, ಅಸಹಕಾರಯುಗ ದಿಂದಿತ್ತ, ನಾನು ಚಳವಳಿಯೊಡನೆ ತಾದಾತ್ಮ್ಯಹೊಂದಿಲ್ಲ ವಾದ ಕಾರಣ, ನನ್ನ ಈ ರಾಜಕೀಯ ಜೀವನಕ್ಕೆ ವಿಶೇಷ ಮಹತ್ವವಿಲ್ಲ.

**ರಂಗರಾವ ದಿವಾಕರ ಇವರಿಗೆ ಬರೆದ ಪತ್ರ:—** ಈ ಸಂಬಂಧವಾಗಿ, ನನ್ನ ವಿಚಾರಗಳು ಏನಿರುವವೆಂಬುದನ್ನು ನಾನು ದಿವಾಕರರಿಗೆ ೯-೧೦-೩೮ ನೆಯ ದಿವಸ ಬರೆದ ಪತ್ರದಲ್ಲಿ ಸ್ಪಷ್ಟಮಾಡಿರುವೆ. ನಾನು ಚಳವಳಿಯಲ್ಲಿ ಪುನಃ ಬರ ಬೇಕೆಂದೂ, ಕಾಂಗ್ರೆಸ ಕಮಿಟಿಗಳಲ್ಲಿ ಚುನಾವಣೆಯ ಮಾತು ಗಳೇ ನಡೆಯುತ್ತಿರುವುದರಿಂದ ತಾವು ಬಹಳ ಬೇಸತ್ತಿರುವೆ

ವೆಂದೂ ಅವರು ತಿಳಿಸಿ, ೫-೧೦-೧೯೩೪ಲ ನೆಯ ದಿವಸ ಬರೆದ ಪತ್ರದಲ್ಲಿ " ಈಗ ನೀವು ಚಳವಳಿಯಲ್ಲಿಲ್ಲ, ಇದು ನಿಜ ಅವರ ಬರಬೇಕು ಎಂದು ನಾವು ಇಚ್ಛಿಸುವದು ಸಹಜಲ್ಲವೆ ? ನಮಗೆ ಬೇಸರ ಬಂದಿರುವದಾದರೂ ನಿಜ ! ಆದರೂ ನೀವು ಹೇಳುವಂತೆ ಬಿತದ ಕರ್ಮ ' ಎಂಬುದಾಗಿ ಬರೆದರು. ನಾನು ಬರೆದ ಉತ್ತರದ ಕೆಲಭಾಗ ಹೀಗೆ ಇದೆ

" ಇನ್ನು ನನ್ನ ಸ್ವಂತದ ವಿಚಾರ ಪುನಃ ನಾನು ಚಳವಳಿಯಲ್ಲಿ ಬರಬೇಕೆಂದು ನೀವು ಇಚ್ಛಿಸುವುದು ನನ್ನ ಮೇಲಿನ ಪ್ರೇಮಾದರಗಳ ದ್ಯೋತಕ. ನಾನು ಬರುವಂತಿಲ್ಲವೆಂಬುದನ್ನು ಚಾಣಾಕ್ಷರಾದ ನೀವು ಕಂಡು ಹಿಡಿದಿರಲಿಕ್ಕೆ ಸಾಕು ಅದರ ಕಾರಣವು ಮತ್ತೇನೂ ಇರದೆ, ನನ್ನ ಸ್ವಂತದ ದುರ್ಬಲತೆ. ಹಾಗೆ ಬರುವುದಕ್ಕೆ ಬೇಕಾಗುವ ಯೋಗ್ಯತೆಯೂ ನನ್ನಲ್ಲಿ ಇಲ್ಲ, ಅನುಕೂಲತೆಯೂ ನನಗಿಲ್ಲ, ಅಲ್ಲದೆ ಅನುಕೂಲ ವಾತಾವರಣವೂ ಇಲ್ಲ ಏನೋ, ಏನೂ ಸ್ವಂತ ವಿಚಾರಗಳೇ ಇಲ್ಲದಿದ್ದರೆ, ಅದೊಂದು ರೀತಿಯಿಂದ ಸುಖವಾಗುತ್ತಿತ್ತು. ಹಾಗೂ ಇಲ್ಲ ನನ್ನ ತಲೆಯಲ್ಲಿ ಮನೆಮಾಡಿಕೊಂಡಿರುವ ಕೆಲವು ವಿಚಾರಗಳು ನನ್ನನ್ನು ಚಳವಳಿಯಿಂದ ದಿನದಿನಕ್ಕೆ ದೂರ ಮಾಡಹತ್ತಿವೆ ಆ ವಿಚಾರಗಳನ್ನು ಬಿಡದೆ, ಎಲ್ಲಿಯವರೆಗೆ ಕೆಲಸಮಾಡಲಿಕ್ಕೆ ಬರುತ್ತಿತ್ತೋ ಅಲ್ಲಿಯವರೆಗ ಮಾಡಿದೆ ಚ್ಯುತಿ ಬರುವ ಪ್ರಸಂಗ ಬಂದ ಕೂಡಲೇ ಹೊರಬಿದ್ದೆ ನನ್ನ ವಿಚಾರಗಳು ಈಗಿನ ಕಾಲಕ್ಕೆ ತೀರ ವಿಕ್ಷಿಪ್ತವೆಂದು ಕಾಣುವ ವಿಚಾರಗಳೆಂಬುದು ನಿಜ ಆದರೆ ಅವುಗಳಲ್ಲಿ ನನ್ನ ವಿಶ್ವಾಸವು ದಿನದಿನಕ್ಕೆ ಬಲಿಯುತ್ತಿದೆ. ಅದಕ್ಕಾಗಿಯೇ ನನ್ನ ಸ್ವಂತದ ಮಟ್ಟಿಗೆ ಸರಿದು ನಿಲ್ಲುವ (Policy of withdrawal)

ಈ ಹೊಸ ವಿಕ್ಷಿಪ್ತ ಧೋರಣವನ್ನು (Non-co-operation ಅಲ್ಲ) ಸ್ವೀಕರಿಸಿದ್ದು ನನ್ನ ಆಯುಷ್ಯದಲ್ಲಿ ಅದಕ್ಕನುಸಾರವಾಗಿ ನಡೆಯುತ್ತ ಬಂದಿರುವೆನು ತಪ್ಪಿದ್ದರೆ ಅದು ನನ್ನ ಪ್ರಾಕೃತಿಕ ದೌರ್ಬಲ್ಯ (Weekness of flesh). **ಸಾರ್ವಜನಿಕ ಕೆಲಸದಲ್ಲಿ ಸ್ಪರ್ಧೆಗೆ ಆಸ್ಪದವಿಲ್ಲವೆಂದು ನನಗೆ ತೋರುತ್ತದೆ.** ಒಬ್ಬರು ಒಂದು ದಾರಿಯಿಂದ ಹೋದರೆ, ಬೇಡಾದರೆ ಮತ್ತೊಬ್ಬರು ಮತ್ತೊಂದು ದಾರಿಯಿಂದ ಹೋಗಬಹುದು ಕ್ಷೇತ್ರಗಳು ಭಿನ್ನವಾಗಬಹುದು, ಧೋರಣಗಳೂ ಭಿನ್ನವಾಗಬಹುದು; ವಿರುದ್ಧವಾಗಲಾರವು ಹೀಗಿರುವುದರಿಂದ, ಪ್ರತ್ಯಕ್ಷವಾಗಿ ಅಥವಾ ಅಪ್ರತ್ಯಕ್ಷವಾಗಿ ಸರಿದು ನಿಂತು ಕೆಲಸಮಾಡುವುದು ನನ್ನ ಧೋರಣ. ಆದಕಾರಣವೇ **ರಾಜೀನಾಮೆಯನ್ನು ಕೊಡುವುದು ನನ್ನ ಜನ್ಮಸಿದ್ಧ ಹಕ್ಕು.** ಅದನ್ನು ನೀವು ಕಸಿದುಕೊಳ್ಳಲೆತ್ನಿಸಿದರೆ ನಾನು ಕಸಿದುಕೊಡುವವನಲ್ಲ. ನನ್ನ ಆಯುಷ್ಯವೇ ರಾಜೀನಾಮೆಗಳನ್ನು ಕೊಡುವುದರಲ್ಲಿ ಹೋಗಿವೆ. ಆದರೆ ಅವರಲ್ಲಿಯೇ ನನಗೆ ವಿಶ್ವಾಸ. **ಸರಿದು ನಿಂತು ಕೆಲಸ ಮಾಡುವುದರಲ್ಲಿಯೂ ಒಂದು ಸೂಕ್ಷ್ಮ ಶಕ್ತಿಯುಂಟು.** ಸರಿದು ನಿಲ್ಲದೆ, ಧಡಪಡಿಸುತ್ತಿರುವುದು ನಿಮ್ಮ ಧೋರಣ. ಇಷ್ಟೇ ನನ್ನ ನಿಮ್ಮಲ್ಲಿ ಭೇದ. ಇವೆರಡಕ್ಕಿಂತಲೂ ಹೆಚ್ಚಿನ ಧೋರಣವೆಂದರೆ, ಸರಿದುನಿಂತರೂ ಎಲ್ಲವನ್ನೂ ಸರಿಪಡಿಸಿಕೊಂಡು ಹೋಗುವೆನೆಂಬ ಆತ್ಮವಿಶ್ವಾಸ ಅದು ಮಹಾತ್ಮಾ ಗಾಂಧಿಯವರದು ಇರಲಿ, ನನ್ನ ಅಲ್ಪಶಕ್ತಿಯ ಮೂಲಕವೇ ನಾನು ರಾಜೀನಾಮೆ ಕೊಡುತ್ತ ಹೊರಟಿರುವುದು. ಕೌನ್ಸಿಲುಗಳ ಒಳಗೆ ನಿಂತು ಕೆಲಸಮಾಡಬೇಕೆನ್ನುವವರು ಕೆಲವರು, ಹೊರಗೆ ನಿಂತು ಕೆಲಸಮಾಡಬೇಕೆನ್ನುವವರು ಕೆಲವರು. ಅಲ್ಪ

ಸ್ವಲ್ಪ ಆದರಂತೆಯೇ ನಮ್ಮ ನಿಮ್ಮ ಧೋರಣದೊಳಗಿನ ಭೇದ.

*　　　　*　　　　*

"ಇಷ್ಟೆಲ್ಲ ರಾಜೀನಾಮೆಗಳನ್ನು ನೋಡಿ, ಯಾರಿಗಾದರೂ ಆಶ್ಚರ್ಯವಾದರೆ ಆಶ್ಚರ್ಯವೇನು? ನಾನು ವಕೀಲಿ ಬಿಟ್ಟಿದ್ದೇ ತಕ್ಕೆ? ಮಾಡಿದ ಪುರುಷಾರ್ಥವೇನು? ಎಂದು ಅವರು ಕೇಳು ವುದು ಸಹಜವಿದೆ. ನನ್ನ ಗುಳಿಗೆಗಳು ಆಯುರ್ವೇದದ ಗುಳಿಗೆ ಗಳು. ಆಲೋಪಥಿಯವು ಅಲ್ಲವೆಂದು ಹಿಂದಕ್ಕೊಮ್ಮೆ ಡಾ. ಕಾಂತರಾಯರಿಗೆ ಉತ್ತರ ಕೊಟ್ಟದ್ದೆ 'ನಾನೇ ಹೊರಬಿದ್ದೆ ಎನ್ನುವುದಕ್ಕಿಂತಲೂ ಹೊರಬೀಳಬೇಕಾಯಿತು.' ಎಂದೆನ್ನ ಬೇಕೆಂದು ನೀವು ಒಮ್ಮೆ ಅಂದದ್ದು ನಿಮ್ಮ ನೆನಪಿನಲ್ಲಿರಬಹುದು. ಆದರಲ್ಲಿ ನನ್ನ ರಾಜೀನಾಮೆಯ ಮರ್ಮವಿದೆ.

"ಮ. ಗಾಂಧಿಯವರ ತತ್ವಗಳೂ ಧೋರಣವೂ ನನ್ನ ಮನಸ್ಸಿಗೆ ಪೂರಾ ಹಿಡಿಸಲಿಲ್ಲ, ಹಿಡಿಸಿರುವುದಿಲ್ಲ. ಜನರಿಗೆ ಸ್ಪಷ್ಟವಾಗಿದ್ದರೂ ನನಗೆ ಅವು ಅಸ್ಪಷ್ಟವಾಗಿಯೇ ಉಳಿದಿವೆ.... ಗಾಂಧಿಯವರ ಧೋರಣದ ಬಗ್ಗೆ ನಾನು ಕಟ್ಟಿದ ಭವಿಷ್ಯವು ನಿಜವೆಂದು ನನಗೆ ದಿನದಿನಕ್ಕೆ ಹೆಚ್ಚಿಗೆ ದೃಢವಾಗಹತ್ತಿದೆ. ಇಂಥ ಸ್ಥಿತಿಯಲ್ಲಿ ನನ್ನಿಂದ ಕೆಲಸವಾಗುವದೆಂತು? ಕೀರ್ತಿ ಕಾಮಿನಿಗೆ ಮರುಳಾಗಿ ಕೆಲಸಮಾಡಬಹುದಾಗಿತ್ತು. ಅದಕ್ಕಾಗಿ, ಸೆರೆಮನೆಗೆ ಹೋಗಬೇಕೆಂಬ ಮೋಹವೂ ನನಗೆ ೮-೧೦ ದಿವಸ ಆವರಿಸಿತ್ತು. ಸುದೈವದಿಂದ ಅದನ್ನು ಬಿಗಿಹಿಡಿದೆ. ಅಂಥ ಮೋಹವನ್ನು ತಡೆಯುವುದರಲ್ಲಿಯೇ ಶಕ್ತಿಯಿದೆಯೆಂದು ಎನಿ ಸುತ್ತದೆ"

———

೪ನೆಯ ಪ್ರಕರಣ

# ನನ್ನ ವಾಙ್ಮಯಜೀವನ

**ನನ್ನ ಸಾಂಸ್ಕೃತಿಕ ಜೀವನದ ವೈಶಿಷ್ಟ್ಯ.**— ನನ್ನ ಮೊದಲಿನ ೧೫—೨೦ ವರುಷಗಳ ಜೀವನದಲ್ಲಿ ರಾಷ್ಟ್ರೀಯತ್ವಕ್ಕೆ ಪ್ರಾಧಾನ್ಯ. ಮುಂದಿನ ೧೫-೨೦ ವರುಷಗಳ ಸಾಂಸ್ಕೃತಿಕ ಜೀವನದಲ್ಲಿ ಕರ್ನಾಟಕತ್ವಕ್ಕೆ ಪ್ರಾಧಾನ್ಯ. ರಾಜಕೀಯ ಜೀವನವು ದೇಹವು; ಸಾಂಸ್ಕೃತಿಕ ಜೀವನವು ಜೀವವು. ಇವೆರಡೂ ಕೂಡಿದ ಜೀವನವೇ ಪೂರ್ಣಜೀವನ; ಆದ ಕಾರಣ, ನಾನು ರಾಜಕೀಯ ಜೀವನವನ್ನು ಪ್ರಾಧಾನ್ಯವಾಗಿ ನಡಿಸಿದಾಗ ಸಹ, ವಾಙ್ಮಯ, ಇತಿಹಾಸ, ಧರ್ಮ ಮುಂತಾದ ಸಾಂಸ್ಕೃತಿಕ ಜೀವನದ ಪ್ರಮುಖ ಅಂಗಗಳನ್ನು ಧಾರಾಳವಾಗಿ ನಡಿಸಿಯೇ ಇದ್ದೆನು **ಪರಮಾವಧಿ ಸಾರ್ವಜನಿಕ ಸೇವೆ, ಕನಿಷ್ಠಾವಧಿ ಸಾಂಸಾರಿಕ** ಜೀವನವೆಂಬ ಸೂತ್ರವನ್ನಿಟ್ಟುಕೊಂಡಿದ್ದ ಕಾರಣ, ಇವೆಲ್ಲ ಚಟುವಟಿಕೆಗಳನ್ನು ಏಕಸಮಯಾವಚ್ಛೇದವಾಗಿ ನಡಿಸಲು ಪ್ರತ್ಯವಾಯವಾಗಲಿಲ್ಲ ರಾಜಕೀಯ ಜೀವನಕ್ಕೂ ಸಾಂಸ್ಕೃತಿಕ ಜೀವನಕ್ಕೂ ಕೆಲವು ಭೇದಗಳಿವೆ. **ರಾಜಕೀಯ ಜೀವನದಲ್ಲಿ ಬಹಿರಂಗ ಚಳವಳಿಯ ಭಾಗ ಹೆಚ್ಚು, ಅಂತರಂಗ ವಿಕಾಸಕ್ಕೆ ಆಸ್ಪದ ಕಡಿಮೆ. ಸಾಂಸ್ಕೃತಿಕ ಜೀವನವು ತದ್ವಿರುದ್ಧ ಜೀವನವು. ಅದರಲ್ಲಿ ಆತ್ಮೋನ್ನತಿಗೆ ಅವಕಾಶ ಹೆಚ್ಚು, ಬಾಹ್ಯ ಚಳವಳಿಗೆ ಕಡಿಮೆ.** ರಾಜಕೀಯ ಜೀವನದ ಪರಿಣಾಮಗಳು ಶಾಶ್ವತವಾಗಿ ನಿಲ್ಲದೆ, ದಿನದಿನಕ್ಕೆ ಬದಲಾಗುತ್ತ ಹೋಗುವಂಥವು. ಸಾಂಸ್ಕೃತಿಕ

ಜೀವನದ ಪರಿಣಾಮಗಳು ಹೆಚ್ಚು ಶಾಶ್ವತವಾದವುಗಳು. ಆದ ಕಾರಣವೇ, ರಾಜಕೀಯ ಜೀವನದ ಸ್ಮೃತಿಗಳಂತೆ ಇವನ್ನು ವಿಶೇಷವಾಗಿ ನಾನು ಕೊಡಹೋಗುವುದಿಲ್ಲ ಅಲ್ಲದೆ ನನ್ನ ರಾಜಕೀಯ ಜೀವನದಲ್ಲಿ, ನನ್ನ ಆಯುಷ್ಯದ ಅನೇಕ ತತ್ವ ಗಳು ಬಂದೇಹೋಗಿರುವುದರಿಂದಲೂ, ನನ್ನ ಸಾಂಸ್ಕೃತಿಕ ಜೀವನದ ಸ್ಮೃತಿಗಳು ಕಡಿಮೆಯಾಗುತ್ತಹೋಗಿವೆ ಸ್ವತಂತ್ರ ವಿಚಾರವೇ ನನ್ನ ಸಾಂಸ್ಕೃತಿಕ ಜೀವನದ ವೈಶಿಷ್ಟ್ಯ. ನನ್ನ ರಾಜಕೀಯ ಜೀವನವು ಸ್ವತಂತ್ರ ಜೀವನವಲ್ಲ ಹಿಂದು ಸ್ಥಾನದ ಮುಖಂಡರು ಹಾಕಿಕೊಟ್ಟ ಮಾರ್ಗವನ್ನು ತುಳಿಯು ವುದೇ ಆಗಿನ ಧೋರಣ ರಾಜಕೀಯ ಜೀವನದಲ್ಲಿ ನಾನು ಮಾಡಿದ ಒಂದೇ ಒಂದು ವಿಶಿಷ್ಟಕಾರ್ಯವೆಂದರೆ, ಆ ರಾಜ ಕೀಯ ಚಟುವಟಿಕೆಗಳಿಗೆ ಆದಷ್ಟುಮಟ್ಟಿಗೆ ಕರ್ನಾಟಕತ್ವದ ಸ್ವರೂಪವನ್ನು ಕೊಟ್ಟದ್ದು ಇರಲಿ. ಸಾಂಸ್ಕೃತಿಕ ಜೀವನದ ಒಂದು ಅಂಗವಾದ ವಾಙ್ಮಯ ಜೀವನದ ಕೆಲವು ಸ್ಮೃತಿಗಳನ್ನು ಈ ಪ್ರಕರಣದಲ್ಲಿ ಕೊಡುವೆನು

**ನನ್ನ ವಾಙ್ಮಯ ಜೀವನವು ಒಂದು ಸಾಧನಮಾತ್ರವು, ಆಯುಷ್ಯದ ಮುಖ್ಯ ಗುರಿಯಲ್ಲ:**—ನಿಜವಾಗಿ ನನ್ನ ಜೀವ ನವು ಇಡಿಯಾದ ಜೀವನವು, ಬಿಡಿಬಿಡಿಯಾದ ಜೀವನವು ಅಲ್ಲವೇ ಅಲ್ಲ. ನಾನು ಸಾಹಿತಿಯೂ ಅಲ್ಲ, ಅಂದರೆ ಸಾಹಿತ್ಯ ವೊಂದನ್ನೇ ಜೀವಿತದ ಗುರಿಯನ್ನಾಗಿ ಇಟ್ಟುಕೊಂಡವನೂ ನಾನಲ್ಲ. ನನಗೆ ಸಾಹಿತ್ಯಯೋಗವು ಕರ್ನಾಟಕದ ನಿರ್ಮಾ ಣಕ್ಕೆ ಒಂದು ಸಾಧನಮಾತ್ರವು **ನನ್ನದು ಸರ್ವಾಂಗ ವಿಕಾಸಯೋಗವು ಅಥವಾ ಸಾಧನ ಸಮುಚ್ಚಯ ಯೋಗವು.** ಆದಕಾರಣ, ನಾನು ಯಾವುದೊಂದೇ ವಿಷಯ

ದಲ್ಲಿ ಪರಿಣತಪ್ರಜ್ಞನಾಗಲಿಲ್ಲ—ಆಗಲು ಇಚ್ಛಿಸಲಿಲ್ಲ ಕರ್ನಾಟಕದಲ್ಲಿ ನವಚೈತನ್ಯವನ್ನು ಹುಟ್ಟಿಸುವುದೊಂದನ್ನೇ ಧ್ಯೇಯವನ್ನಾಗಿ ಇಟ್ಟುಕೊಂಡಿದ್ದೆ. ಸಂಸ್ಥೆ-ಸಂಘಟನ ಮುಂತಾದ ಹೆಚ್ಚಿನ ಹಂಬಲಕ್ಕೆ ಹೆಚ್ಚಾಗಿ ಹೋಗಲಿಲ್ಲ ಆದಕಾರಣ, **ನನ್ನ ಜೀವನವು ಪಕ್ವಾನ್ನ ಜೀವನವಲ್ಲ, ಕಲಸನ್ನ; ಕಲಸುಮೇಲೋಗರ.** ನನ್ನ ಜೀವನದಲ್ಲಿ ಅನೇಕ ವಿಷಯಗಳು ಹಾಸುಹೊಕ್ಕಾಗಿ ಹೆಣೆವ.ಕೊಂಡಿವೆ ಆದಕಾರಣವೇ, ನನಗೆ ಸಂಸ್ಥೆಯಿಲ್ಲ, ಪಂಥವಿಲ್ಲ, ನನ್ನದೊಂದು ಮಠವಿಲ್ಲ, ನನಗೆ ಶಿಷ್ಯರಿಲ್ಲ, ಅನುಯಾಯಿಗಳಿಲ್ಲ, ಸುತ್ತಲು ಗಣಂಗಳನ್ನು ಸಾಕಿಲ್ಲ, ಯಾವುದೊಂದೇ ವಿಷಯದಲ್ಲಿ ಮೇಲ್ಮಟ್ಟವನ್ನೇರಲು ಬಯಸಲಿಲ್ಲ ನನ್ನಲ್ಲಿ ಮಹತ್ವಾಕಾಂಕ್ಷೆಗಳೇ ಬಹಳ ಕಡಿಮೆ **ಭೋರ್ಗರೆದು ಹರಿಯುವ ಹೊಳೆಯು ನಾನಲ್ಲ; ಅಥವಾ ಆರ್ಭಟಿಸಿ ಬಂದು ಅಪ್ಪಳಿಸುವ ಜಲಪಾತವೂ ನಾನಲ್ಲ. ಮಂದವಾಗಿ ಜುಳು ಜುಳು ಹರಿಯುವ ಜೀವನವು ನನ್ನದು.** ಆದಕಾರಣ, ವಾಚಕರು ಕೇವಲ ವಾಙ್ಮಯ ಜೀವನವನ್ನಷ್ಟೇ ಅಲ್ಲ, ನನ್ನ ಯಾವತ್ತೂ ಜೀವನವನ್ನು ಇಡಿಯಾಗಿ ನೋಡಿಯೇ ಬೆಲೆ ಕಟ್ಟಬೇಕು. ನನ್ನ ಆಯುಷ್ಯದ ಮುಖ್ಯ ಧ್ಯೇಯವು ಸಾಹಿತ್ಯವಲ್ಲವಾದುದರಿಂದ ನಾನು ಸಾಹಿತ್ಯಕ್ಕಾಗಿ ಸಾಹಿತ್ಯವನ್ನು ಅಭ್ಯಾಸ ಮಾಡುವ ಗೋಜಿಗೆ ಹೋಗಲಿಲ್ಲ ಕರ್ನಾಟಕವು ಜಾಗ್ರತವಾಗಬೇಕಾದರೆ ಮುಂಚೆ ಕನ್ನಡ ನುಡಿಯ ಅಭಿಮಾನ ಬೆಳೆಯಬೇಕು, ಅದರ ಅಭಿವೃದ್ಧಿಯಾಗಬೇಕು ಈ ದೃಷ್ಟಿಯಿಂದ ನಾನು ಕನ್ನಡವನ್ನು ಅಭ್ಯಾಸ ಮಾಡಲಿಕ್ಕೆ ಪ್ರಾರಂಭಿಸಿದೆ

**ನನ್ನ ವಾಙ್ಮಯದ ಅಭ್ಯಾಸಕ್ಕೆ ಪ್ರಾರಂಭ:**—೧೮೯೮

ನೆಯ ಇಸ್ವಿಯಲ್ಲಿ ನಮ್ಮ ತಂದೆಯವರಿಂದ ನನಗೆ ಗ್ರಂಥ ಲೇಖನದಲ್ಲಿ ಪ್ರೇರಣೆ ದೊರೆಯಿತೆಂಬ ಸಂಗತಿಯನ್ನು ನಾನು ಹಿಂದಕ್ಕೆ ( ಪೂರ್ವರಂಗ, ಪು ೬೩) ಉಲ್ಲೇಖಿಸಿಯೇ ಇರು ವೆನು ಆಬಳಿಕ, ೧೯೦೫ರ ವರಗೆ ಕನ್ನಡವನ್ನು ಕಣ್ಣೆತ್ತಿ ಕೂಡ ನೋಡಲಿಲ್ಲ ೧೯೦೫ ರಲ್ಲಿ ಧಾರವಾಡಕ್ಕೆ ಬಂದೊಡನೆ ನಾನು ಮಾಡಿದ ಮೊದಲನೆಯ ಕೆಲಸವೆಂದರೆ, ಕನ್ನಡದ ಅಭ್ಯಾಸ ಕ್ಕಾಗಿ ಕರ್ನಾಟಕ ವಿದ್ಯಾವರ್ಧಕ ಸಂಘವನ್ನು ಸೇರಿದ್ದು. ಅಲ್ಲಿ ಹೋಗಿ ನೋಡುತ್ತೇನೆ, ಸ್ತಬ್ಧವಾದ ವಾತಾವರಣ, ನಿರ್ಜೀವಸ್ಥಿತಿ ಕರಿಗುದರಿ ನಾರಾಯಣರಾಯರು ಅದಕ್ಕೆ ಕಾರ್ಯದರ್ಶಿಗಳು. ಅವರು ಒಳ್ಳೇ ಕನ್ನಡ ಅಭಿಮಾನಿಗಳು. ಆದರೆ ಮಾಡುವುದೇನು? ಧಾರವಾಡವು ಆಗ ಮರಾಠಿಯ ಮೋಹದಲ್ಲಿ ಸಿಕ್ಕಿತ್ತು ಮುಖಂಡರಲ್ಲರೂ ಮರಾಠಿಗರೇ, ಅಲ್ಲದೆ, ನಾರಾಯಣರಾಯರಿಗೆ ತುಂಬಾ ವಕೀಲಿಯ ಕೆಲಸ. ಅಲ್ಲಿಯ ಸ್ಥಿತಿಯನ್ನು ನೋಡಿ ಬೇಸತ್ತೆ ಸಂಘದ ಸ್ಥಾಪಕ ರಾದ ದೇಶಪಾಂಡೆ ರಾಮಚಂದ್ರರಾಯರು ಒಮ್ಮೆ ಇಲ್ಲಿಗೆ ಬಂದಾಗ ನಾನು ಈ ಮಾತು ಎತ್ತಿದೆ ಸಂಘವನ್ನು ಹೀಗೆ ನಿರ್ಜೀವ ಸ್ಥಿತಿಯಲ್ಲಿ ಇಡುವುದಕ್ಕಿಂತ, ಅದನ್ನು ಪೂರಾ ಮುಚ್ಚಿಬಿಡುವುದೇ ಲೇಸಲ್ಲವೇ ಎಂದು ಹಂಗಿಸಿದೆ ಅವರು ನೀನೇ ಏಕೆ ಕೆಲಸಮಾಡಬಾರದು ಎಂದು ಅಂದರು. ಕೆಲಸಕ್ಕೆ ಅಣಿಯಾದೆ ವಾಗ್ಭೂಷಣ: ಸಂಪಾದಕತ್ವವನ್ನು ಕೈಕೊಂಡೆ. ಅದಕ್ಕೆ ಹೊಸ ಸ್ವರೂಪ ಕೊಟ್ಟೆ ಆಗಿನ ರಾಜಕೀಯ ಮುಖಂ ಡರೇ ಆಗಲಿ, ವಾಙ್ಮಯ ಮುಖಂಡರೇ ಆಗಲಿ ಆಯಾ ವಿಷಯ ಳನ್ನು ಅಭ್ಯಾಸಮಾಡದೆ, ಕಾರ್ಯಪ್ರವೃತ್ತರಾಗುವುದು ನನ್ನ ಮನಸ್ಸಿಗೆ ಬರಲಿಲ್ಲ. ಕನ್ನಡದ ಅಭ್ಯಾಸವನ್ನು ಪ್ರಾರಂಭಿಸಿದೆ.

**ಕನ್ನಡ ವಾಙ್ಮಯದ ಬಗ್ಗೆ ನನ್ನ ಸ್ವತಂತ್ರ ವಿಚಾರ·** ಕನ್ನಡದಲ್ಲಿ ಚಲೋ ಪುಸ್ತಕಗಳೇ ಇದ್ದಿಲ್ಲ. ಬಿ ವೆಂಕಟಾ ಚಾರ್ಯರ ಕೆಲವು ಕಾದಂಬರಿ ಓದಿದೆ. ಕಥೆ ಕಾದಂಬರಿಗಳಲ್ಲಿ ನನಗೆ ಅಭಿರುಚಿಯಿಲ್ಲ ಜೈಮಿನಿಯನ್ನು ಎತ್ತಿದೆ ನನಗೆ ಅದು ಬಹಳ ಬಿಗಿಯಾಗಿ ತೋರಿತು ಹಳೆಗನ್ನಡವೆಂಬುದು ಆಗ ನಮಗೆ ಸಂಸ್ಕೃತಕ್ಕಿಂತಲೂ ಕಠಿನವೆನಿಸುತ್ತಿತ್ತು ಮುಳ ಬಾಗಲರಂಥ ಘನವಿದ್ವಾಂಸರು ರಚಿಸಿದ ಸಂಸ್ಕೃತ ನಾಟಕ ಗಳ ಭಾಷಾಂತರಗಳು ನನ್ನ ಮನದಲ್ಲಿ ಹಳೆಗನ್ನಡದ ಬಗ್ಗೆ ಮತ್ತಿಷ್ಟು ತಿರಸ್ಕಾರವನ್ನು ಹುಟ್ಟಿಸಿದ್ದವು ಹಳೆಯ ಕವಿತೆ ಗಳು ಕಬ್ಬಿಣದ ಕಡಲೆಗಳಂತೆನಿಸಿದವು ಜೈಮಿನಿಯನ್ನು ಓದಿದಾಗ ನನಗೆ ಒಂದು ವಿಚಾರ ಹೊಳೆಯಿತು **ಹಳೆಗನ್ನಡ ಪದ್ಯಕಾವ್ಯಗಳು ಹೊಸಗನ್ನಡದ ಗದ್ಯವಾಙ್ಮಯ ನಿರ್ಮಾ ಣಕ್ಕೆ ವಿಶೇಷ ಉಪಯೋಗವಾದವುಗಳಲ್ಲವೆಂದು ಎನಿ ಸಿತು.** ಆ ಬಗ್ಗೆ ದೀರ್ಘವಿಚಾರಮಾಡಿದೆ. ಮತ್ತು ನನ್ನ **ಉದ್ದೇಶಕ್ಕೆ ಹಳೆಗನ್ನಡ ವಾಙ್ಮಯವನ್ನು** ಓದುವುದರಲ್ಲಿ **ಕಾಲ ಕಳೆಯುವುದು ವ್ಯರ್ಥ ಕಾಲಹರಣವೆಂಬ** ನಿರ್ಧಾರಕ್ಕೆ ಬಂದೆ· **ಇದನ್ನು ಕೇಳಿ, ಕನ್ನಡ ಪಂಡಿತರು ನನ್ನ ಮೇಲೆ ಬೆಂಕಿ ಕಾರಬಹುದೆಂಬುದನ್ನು** ನಾನು ಬಲ್ಲೆ; ಆದರೆ ಅದಕ್ಕೆ ಉಪಾಯ ವಿಲ್ಲ. ನನ್ನ ಅನುಭವವನ್ನು ಮುಚ್ಚಿಡುವುದು ಒಳಿತಲ್ಲ ಕನ್ನಡ ದಲ್ಲಿ ಗದ್ಯವಾಙ್ಮಯವು ವಿಶೇಷ ಇದ್ದಿಲ್ಲ **ಗದ್ಯವಾಙ್ಮಯವನ್ನು ನಾವು ಹೊಸದಾಗಿಯೇ ಹುಟ್ಟಿಸಬೇಕೆಂದು ನನ್ನಮತ.** ಅದನ್ನು ಹುಟ್ಟಿಸುವ ಬಗೆ ಹೇಗೆ ಎಂಬ ವಿಚಾರಕ್ಕೆಹತ್ತಿದೆ.

**ಕನ್ನಡದ ಜಾತಿಗೋತ್ರಗಳ ನಿರ್ಣಯ:—** ಮಧ್ವಾ ಚಾರ್ಯರು ಮೋಕ್ಷಕ್ಕೆ 'ಭಕ್ತಿಸ್ತು ತತ್ಸಾಧನಂ 'ಎಂಬುದಾಗಿ

ಹೇಳಿರುವರು ಕನ್ನಡದ ಅಭಿವೃದ್ಧಿಯ ವಿಷಯದಲ್ಲಿ ನಾನು ಈ ಸೂತ್ರವನ್ನವಲಂಬಿಸಿರುವೆ ಹಳೆಗನ್ನಡವನ್ನು ಅಭ್ಯಾಸ ಮಾಡುವ ಗೋಜಿಗೆ ಹೋಗಲಿಲ್ಲ ಕೇವಲ ಕನ್ನಡದ ಮೇಲಿನ ಭಕ್ತಿಯಿಂದ ನಾನು ಒಂದು ತೀರ ಹೊಸದಾದ, ಸ್ವತಂತ್ರವಾದ ಮಾರ್ಗವನ್ನು ಕಂಡುಹಿಡಿದಿರುವೆ. ನನ್ನ ಆ ಮಾರ್ಗವಲ್ಲಿ ನನಗೆ ಶ್ರದ್ಧೆಯಿದೆ ಕನ್ನಡದ ಜಾತಿ - ಗೋತ್ರಗಳನ್ನು ನಿರ್ಣಯಿಸಿಕೊಂಡುದೇ ನಾನು ಮುಂಚೆ ಮಾಡಿದ ಕೆಲಸ ಕನ್ನಡದ ಮೂಲವೇನೆಂಬುದನ್ನು ನಾನು ಸಂಶೋಧಕರಿಗೆ ಬಿಟ್ಟುಕೊಡುತ್ತೇನೆ ನನಗೆ ತೋರಿದ ಒಂದು ಮೂಲವನ್ನು ನಾನು ಇಲ್ಲಿ ಹೇಳುತ್ತೇನೆ ಕೆಲವು ಸ್ವರ ಮತ್ತು ವ್ಯಂಜನಗಳ ಮತ್ತು ವಿವಿಧ ವ್ಯಂಜನಗಳ ಎರಡಕ್ಷರಗಳ ಜೋಡಣೆಗಳೇ ಕನ್ನಡದ ಮೂಲ ಧಾತುಗಳು ಅವುಗಳಿಗೆ ವಿವಿಧ ಪ್ರತ್ಯಯ ಹಚ್ಚಿ ಹೆಚ್ಚಿನ, ಧಾತುಗಳೂ ನಾಮಪದಗಳೂ ಆಗಿವೆ ಉದಾ ಅಕ-ಅಕಲು, ಅಕಟ, ಅಕಸಾಲೆ, ಅಕ್ಕಿ, ಅಕ್ಕಟ, ಅಕ್ಕಡಿ; ಅಗ—ಅಗಚು, ಅಡಗು, ಅಗಲು, ಅಗತ, ಅಗದು ಅಗಡ, ಅಗಡತನ, ಅಗಲಿಕೆ, ಅಗಸಿಗ, ಅಗಸೆ, ಅಚ—ಅಚ್ಚೇರು, ಅಚ್ಚ, ಅಚ್ಚರಿ, ಅಜ—ಅಜಿಗಿಜಿ, ಅಜ್ಜಿ; ಅಟ,—ಅಟಮಟ, ಅಟವಿ, ಅಟ್ಟ,ಅಟ್ಟಸು, ಅಟ್ಟು, ಅಟ್ಲೆ; ಅಡ—ಅಡು, ಅಡಿಗೆ, ಅಡಕ, ಅಡಕಿಲ, ಅಡಕಿ, ಅಡಕು, ಅಡಗಿಸು, ಅಡಗು, ಅಡಚು, ಅಡಲು, ಅಡವು, ಅಡ್ಡ, ಅಡ್ಡಣಿಗೆ; ಅತ—ಅತ್ತ, ಅತ್ತಿ, ಅತ್ತು; ಅದ-ಅದ್ದು, ಅದರು, ಅದಟು ಇದರಮೇಲಿಂದ, ರೂಢಿಯಲ್ಲಿ ಒಟ್ಟು ಎಷ್ಟು ಮೂಲ ಕ್ರಿಯಾಪದಗಳೂ ಹೆಚ್ಚಿನ ಧಾತುಗಳೂ ನಾಮಪದಗಳೇ ಮುಂತಾದವುಗಳೂ ಆಗಿವೆ ಯೆಂಬುದನ್ನು ನಾವು ಸುಲಭವಾಗಿ ಗೊತ್ತುಹಿಡಿಯಬಹುದು.

ಇದನ್ನು ನಾನು ಅನೇಕರಿಗೆ ಹಿಂದೆಯೇ ಸೂಚಿಸಿದ್ದೇನೆ

ಕನ್ನಡ ಜಾತಿಯನ್ನು ಹೀಗೆ ಗೊತ್ತುಮಾಡಿದರೆ, ನಾವು ಮುಂದೆ ಇದೇ ರೀತಿಯಿಂದ ಹೊಸಧಾತುಗಳನ್ನು ಹೊಸ ಶಬ್ದಗಳನ್ನು ಕೂಡ ನಿರ್ಮಾಣಮಾಡಬಹುದೆಂದು ನನಗೆ ತೋರುತ್ತದೆ ಈ ರೀತಿಯಿಂದ ಕನ್ನಡವನ್ನು ಬೆಳಿಸುವುದೂ ಕನ್ನಡದ ಕುಲಗೋತ್ರಗಳಿಗೆ ತಕ್ಕದು ಎಂದು ನನ್ನ ಮತ. ಅರ್ಥಾತ್, ಯಾವುದೇ ಕ್ಷೇತ್ರದಲ್ಲಿ, **ನನ್ನ ಕೆಲಸವು ಕೇವಲ ಸೂಚನಾತ್ಮಕವಾದುದು, ರಚನಾತ್ಮಕವಾದುದಲ್ಲ**. ನನಗೆ ಕಂಡುಬಂದ ಮತ್ತೊಂದು ಸಂಗತಿಯೆಂದರೆ, ತಮಿಳಿನಂತೆ ಕನ್ನಡದಲ್ಲಿಯೂ ಮಹಾಪ್ರಾಣಗಳಿಲ್ಲ ಕನ್ನಡದಲ್ಲಿ ಒತ್ತಕ್ಷರಗಳಿಂದ ಅದರ ಕಾರ್ಯವಾಗುತ್ತಿತ್ತು ಹೀಗೆ ಮಹಾಪ್ರಾಣವನ್ನು ವರ್ಜ್ಯಮಾಡುವುದಕ್ಕೆ ನನಗೆ ತೋರಿದ ಕಾರಣವೆಂದರೆ, ಕ್ಲಿಷ್ಟವಾದ ಸಂಸ್ಕೃತವನ್ನು ನೋಡಿ ತಮ್ಮ ಭಾಷೆಯನ್ನು ಮಿದುವಾಗಿ ಮಾಡುವ ನಮ್ಮ ಕನ್ನಡಿಗರ ಹವಣಿಕೆ. ಸಂಸ್ಕೃತದ ಶಬ್ದಗಳನ್ನು ಕನ್ನಡಕ್ಕೆ ಇಳಿಸುವಾಗಲೂ ಇದೇ ಪ್ರವೃತ್ತಿ ಉದಾ ಚಂದ್ರ-ಚಂದಿರ, ಸಹಸ್ರ-ಸಾಸಿರ. ಈ ರೀತಿಯಾಗಿ ಪ್ರಯತ್ನಿಸಿದರೆ, ಒಂದೂ ಗಡಚಾದ ಶಬ್ದವಿಲ್ಲದೆ ಕನ್ನಡ ಗದ್ಯವನ್ನು ಸರಸವಾಗಿ ಬರೆಯಬಹುದು. ಆದರೆ, ಮುಂದೆ ಸಂಸ್ಕೃತದ ಅನುಕರಣಮಾಡಹೋಗಿ, ಬರ್ಕುಂ, ತರ್ಕುಂ, ಗೆಲ್ಗೆ ಮುಂತಾದ ಸಂಕ್ಷಿಪ್ತರೂಪಗಳು ಬಂದು ಕನ್ನಡವು ಬಿಗಿಯಾಯಿತು, ಕರ್ಕಶವೂ ಆಯಿತು ಎಂದು ನನ್ನ ಅಭಿಪ್ರಾಯ.

**ಕನ್ನಡದ ಕುಂದುಕೊರತೆಗಳು:**—ಮೇಲೆ ಹೇಳಿದ್ದು ಕನ್ನಡವನ್ನು ಬೆಳಿಸುವ ಕ್ರಮವಾಯಿತು. ಆದರೆ ಅದರೊಳ

ಗಿನ ಕುಂದುಕೊರತೆಗಳನ್ನೂ ನಾವು ಲಕ್ಷ್ಯಕ್ಕೆ ತರಬೇಕಲ್ಲವೆ ? ಕನ್ನಡದಲ್ಲಿ ಮಹಾಪ್ರಾಣಗಳು ವಿಶೇಷವಿಲ್ಲವೆಂದುಬಗೆದು ಅನೇಕರು ಸಂಸ್ಕೃತ ಮಹಾಪ್ರಾಣಗಳಿಗೆ ಅಲ್ಪಪ್ರಾಣಗಳ ರೂಪ ಕೊಟ್ಟುಬಿಟ್ಟರೆ ಮಿದುವಾದ ಕನ್ನಡವಾಯಿತೆಂದು ಬಗೆಯುತ್ತಾರೆ. ಉದಾ: ಕಥೆ-ಕತೆ ಇದು ನನಗೆ ಸರಿದೋರುವುದಿಲ್ಲ ಇದರಿಂದ ಶಬ್ದಗಳ ಪ್ರಾಣವೇ ಹಾರಿಹೋಗುತ್ತದೆ. ಇತ್ತ ಗೋಷ್ಠಿ ಮುಂತಾದ ಕಿವಿಗೆ ಕರ್ಕಶವೆನಿಸುವ ಸಂಸ್ಕೃತ ಶಬ್ದಗಳನ್ನು ನಿಷ್ಕಾರಣವಾಗಿ ಇದ್ದಕ್ಕಿದ್ದಂತೆ ರೂಢಿಯಲ್ಲಿ ತರುವುದು, ಇತ್ತ ಇಂಪಾದ ಶಬ್ದಗಳನ್ನು ಅಂದಗೆಡಿಸುವುದು ಯಾವ ನ್ಯಾಯವೋ ದೇವರೇ ಬಲ್ಲ ! ಹೊಸಗನ್ನಡದಲ್ಲಿ ಕೆಲವೆಡೆಯಲ್ಲಿ ಮಹಾಪ್ರಾಣವನ್ನು ತರಲೇಬೇಕೆಂದು ನನಗೆ ತೋರುತ್ತದೆ ಹೊಸಗನ್ನಡದ ಬರಹಾಕ್ಷರ, ಮುದ್ರಣದ ಅಕ್ಷರ, ಲಘುಲಿಪಿ, ಟಾಯಿಪುಮಾಡುವ ಅಕ್ಷರ, ದಪ್ಪವಾದ ಅಕ್ಷರ, ವಿವಿಧ ತರಹದ ಅಕ್ಷರ ಇವೇ ಮುಂತಾದವುಗಳಲ್ಲಿ ಬಹಳೇ ಸುಧಾರಣೆಯಾಗುವುದೂ ಬದಲಾವಣೆಯಾಗುವುದೂ ಅವಶ್ಯವಿದೆ. ಹಾಗೆಯೇ ಮಿಕ್ಕ ಭಾಷೆಗಳೊಳಗಿನ ಶಬ್ದಗಳನ್ನು ಎಷ್ಟರಮಟ್ಟಿಗೆ ಮತ್ತು ಯಾವ ರೂಪದಲ್ಲಿ ಸ್ವೀಕರಿಸಬೇಕೆಂಬುದೂ ಒಂದು ದೊಡ್ಡ ಪ್ರಶ್ನೆಯೇ ಆಗಿದೆ. ಕನ್ನಡದಲ್ಲಿಯ ಒತ್ತಕ್ಷರಗಳೆಂದರೆ ಕನ್ನಡದ ಅಂಕಿಗಳು ಎಂಬುದನ್ನು ನಾನು ಟಾಯಿಪಿಸ್ಟರಿಗೆ ಸೂಚಿಸಿರುವೆ. ಗ=೧, ತ=೨, ನ-೩, ಳ-ಳ, ೫ ಗೊತ್ತಿಲ್ಲ, ಮ-೬, ಯ-೭, ವ-೮, ರ-೯. ೩೨ ವರುಷಗಳ ಹಿಂದೆ, ಶ್ರೀಕೃಷ್ಣಸೂಕ್ತಿಯಲ್ಲಿ ಒಂದು ಲೇಖ ಬರೆದು, ಹೊಗೆಬಂಡೆಯಲ್ಲಿ ಕುಳಿತುಕೊಂಡವರು ಹೊರಗಿನಿಂದ ಬರುವವರನ್ನು ಮುಂಚೆ ನೂಕಿಸುತ್ತಲೇ ಇದ್ದು,

ಜೋರಿನಿಂದ ಒಳಗೆ ಬಂದಬಳಿಕ, ಅವರಿಗೆ ಸ್ಥಳಕೊಟ್ಟು ಸ್ನೇಹಬೆಳಿಸುವಂತೆ ನಾವು ಪರಭಾಷೆಯ ಶಬ್ದಗಳ ವಿಷಯದಲ್ಲಿ ಧೋರಣವನ್ನಿಡಬೇಕೆಂದು ಸೂಚಿಸಿದ್ದೆನು. ಆಯಾ ಊರುಗಳ ಮತ್ತು ಹೆಸರುಗಳ ವಿಷಯದಲ್ಲಿಯೂ ಒಂದು ಗೊಂದಲವೇ ಇದೆ ಆಯಾ ಸ್ಥಳಿಕಜನರು ಉಚ್ಚಾರ ಮಾಡುವುದನ್ನು ತಿಳಕೊಂಡು ಅದನ್ನೇ ಅನುಸರಿಸಬೇಕೆಂದು ನನ್ನ ಮತ. 'ಮುಂಬಯಿ' ಬರೆಯುವುದನ್ನು ಬಿಟ್ಟು ಬೊಂಬಾಯಿ ಎಂದೂ 'ಗೋಖಲೆ' ಎಂಬುದನ್ನು ವಿಕೃತ ಮಾಡಿ ಗೋಖಾಲಿ ಎಂದೂ ಬರೆಯುವುದು ಶುದ್ಧ ತಪ್ಪೆಂದು ನನಗೆ ತೋರುತ್ತದೆ ಹಾಗೆಯೇ ಹೆಸರು ಸಂಕ್ಷೇಪಮಾಡುವ ವಿಚಾರ. ಹೆಚ್ ಎಮ್ ಹಳೆಬೀಡು, ವ್ಹಿ ಎಸ್. ಹೊಸಮನಿ ಮುಂತಾಗಿ ಬರೆಯುವುದು ಯಾವ ಕನ್ನಡವೋ ತಿಳಿಯದು. ನಾಟಕದ ಭಾಷೆಗೂ ಮಾತಾಡುವ ಭಾಷೆಗೂ ಈಗ ಮಹದಂತರ ಪದ್ಯದ ವಿಚಾರ ನಾನು ಮಾಡಿಲ್ಲ ಆದರೆ ನಾನು ಇಷ್ಟು ಮಾತ್ರ ಹೇಳಬಲ್ಲೆ ಕನ್ನಡನುಡಿಯಲ್ಲಿ ಇರುವ ಗದ್ಯ ಪದ್ಯಗಳ ಅಂತರವನ್ನು ಕಡಿಮೆಮಾಡುವುದು ಅಗತ್ಯ ಹೊಸ ತರಹದ ಕವನಗಳು ಅದನ್ನು ಕೆಲಮಟ್ಟಿಗೆ ಸಾಧಿಸಿವೆ, ಆದರೆ ಸಂಗೀತವು ಹಾರಿಹೋಗಹತ್ತಿದೆ ಸುಲಭವಾಗಿಯೂ ಇಂಪಾಗಿಯೂ ಇರುವಂತ ಅವುಗಳನ್ನು ರಚಿಸಬೇಕಾದರೆ ದಾಸರಿಗೆ ಮತ್ತು ಶರಣರಿಗೆ ಶರಣುಹೋಗುವುದು ಅವಶ್ಯ ಇನ್ನು ಹೊಸಗನ್ನಡದಲ್ಲಿ ಸಿಗು, ಕಳಿಸು, ಕೂಡ್ರು, ಹೋಗುತ್ತೆ ಮುಂತಾದ ರೂಪಗಳನ್ನು ತಂದುಬಿಡುವುದು ಲೇಸಲ್ಲವೆ? ವಿವಿಧಭಾಗಗಳಲ್ಲಿಯ ಭಾಷೆಯಲ್ಲಿ ಏಕರೂಪತೆ ಉಂಟುಮಾಡುವ ಪ್ರಯತ್ನವೂ ಆಗಬೇಕು. ಸಾಹಿತ್ಯಸಮ್ಮೇಲನದ ಅಧ್ಯಕ್ಷರು ಆಯಾ

ವರ್ಷದಲ್ಲಿ ಉಂಟಾಗಿರುವ ಯಾವತ್ತೂ ಗ್ರಂಥಗಳನ್ನು ವರ್ಗೀಕರಿಸಿ, ವಿಮರ್ಶೆಮಾಡಬೇಕು. ೧೯೩೦ನೆಯ ಇಸ್ವಿಯ ಸಾಹಿತ್ಯ ಸಮ್ಮೇಲನಕ್ಕೆ ನಾನು ಅಧ್ಯಕ್ಷನಾದಾಗ ಹಾಗೆ ಮಾಡುವ ವಿಚಾರವಿತ್ತು. ಆದರೆ ನನಗೆ ಸಿಕ್ಕ ಅವಧಿಯು ಮೂರೇ ದಿವಸದ್ದು. ಅಧ್ಯಕ್ಷಪದವಿಯನ್ನು ಸ್ವೀಕರಿಸಲೇಬೇಕೆಂದು ಒತ್ತಾಯದ ತಂತಿ ಬಂದಕಾರಣ ಹಾಗೆ ವಿಮರ್ಶೆಮಾಡುವುದು ನನಗೆ ಸಾಧ್ಯವಾಗಲಿಲ್ಲ ಇನ್ನು ಶೈಲಿಯ ವಿಚಾರ ಹಳೆಗನ್ನಡಶೈಲಿಯು ಹೊಸಗದ್ಯಕ್ಕೆ ಉಪಯೋಗವಾಗುವುದಿಲ್ಲವೆಂದು ನನ್ನ ಖಂಡಿತಮತ ಹೊಸ ಗದ್ಯಶೈಲಿಯನ್ನು ಹೊಸದಾಗಿಯೇ ಹುಟ್ಟಿಸಬೇಕು ಸಂಸ್ಕೃತ ಮತ್ತು ಇಂಗ್ಲಿಷ ಭಾಷೆಗಳು ನಮಗೆ ಸಹಾಯಕವಾಗುವವು, ಹಳೆಗನ್ನಡದ ಅಚ್ಚಗನ್ನಡ ಶಬ್ದಭಾಂಡಾರವೂ, ಅಲ್ಪಮಟ್ಟಿಗೆ ಮಾತ್ರ ಆದರ ಶೈಲಿಯೂ ನಮಗೆ ಕನ್ನಡತನವನ್ನು ತಿಳಿಯುವುದಕ್ಕೆ ಸಹಾಯವಾಗಬಹುದು; ಇರಲಿ ಅನೇಕ ವರ್ಷ ವಿಚಾರಮಾಡಿ ನಾನು ಹೊಸ ವಾಙ್ಮಯದ ಸಂಬಂಧವಾಗಿ ಮಾಡಿದ ವಿಚಾರಗಳು ಇಷ್ಟೇ ಹೆಚ್ಚಿನ ವಿಚಾರವನ್ನು ಅಧಿಕಾರಿಗಳಿಗೆ ಬಿಟ್ಟು ಕೊಡುತ್ತೇನೆ. ಸವಿಹತ್ತಿದುದನ್ನು ಸವಿಯಬಹುದು; ಕಹಿ ಹತ್ತಿದುದನ್ನು ಉಗಳಬಹುದು.

**ಕನ್ನಡದ ನನ್ನ ಅಭ್ಯಾಸಕ್ರಮ.**—೧೯೦೪ರಲ್ಲಿ ನಾನೂ ದೇಸಾಯಿ ಹಣಮೂ ಇಬ್ಬರೂ ಕೂಡಿ ಸ್ಪೆನ್ಸರನ ಶಿಕ್ಷಣ ಮೀಮಾಂಸೆಯನ್ನು ಭಾಷಾಂತರಿಸಲಿಕ್ಕೆ ಉಪಕ್ರಮಿಸಿದೆವು. ೪-೬ ಪುಟವಾಗುವಷ್ಟರಲ್ಲಿ ಇಬ್ಬರೂ ಬೇಸತ್ತು ಬಿಟ್ಟುಕೊಟ್ಟೆವು. ಮುಂದಿನ ವರ್ಷ, ನಾನು ಎಲ್‌ಎಲ್‌ಬಿ ಪಾಸಾಗಿ ಬಂದೊಡನೆ ಮತ್ತೆ ಅದರ ಭಾಷಾಂತರ ಕೈಕೊಂಡೆ. ಜಿಗ್ಲರ ಡಿಕ್ಶನರಿ ಮುಂದೆ

ಇಟ್ಟುಕೊಳ್ಳುವುದು, ಭಾಷಾಂತರ ಮಾಡುತ್ತ ಹೋಗುವುದು. ಆದರೆ ಒಂದು ಮಾತು ಮಾತ್ರ ಮರೆಯಲಿಲ್ಲ ಮೂಲದೊಳಗಿನ ರಸವು ಕನ್ನಡದಲ್ಲಿ ಇಳಿಯುವ ತನಕ ಭಾಷಾಂತರವನ್ನು ಅಳಿ ಅಳಿಸಿ ಬರೆಯುತ್ತಿದ್ದೆ; ಮತ್ತು ಅದಕ್ಕೆ ಕನ್ನಡತನ ಬಂದಿರು ವುದೋ ಇಲ್ಲವೋ ಎಂಬುದನ್ನು ಪರೀಕ್ಷಿಸುವುದಕ್ಕಾಗಿ, ಕನ್ನಡ ಶಾಲೆಯ ಮಾಸ್ತರರಿಗೆ ಅದನ್ನು ಓದಿ ತೋರಿಸುತ್ತಿದ್ದೆ. ೧೦-೨೦ ಸಲ ನಾನು ಅದನ್ನು ಭಾಷಾಂತರಿಸಿ ತಿದ್ದಿರಬಹುದು. ಅದೇ ಮೇರೆಗೆ, ಆಗ ಅನೇಕ ಪತ್ರಿಕೆಗಳ ಸಂಪಾದಕನಾಗಿ ಕೆಲಸಮಾಡಿದುದರಿಂದ ನನಗೆ ಹೊಸಗನ್ನಡವನ್ನು ಹೇಗೆ ಬೆಳಿಸಬಹುದೆಂಬುದು ತಿಳಿದುಬಂದಿತು **ಪತ್ರಿಕೆಗಳು ಶಬ್ದ ಗಳನ್ನು ಹುಟ್ಟಿಸುವ ಟಂಕಸಾಲೆಗಳು.** ಅಲ್ಲಿ ಅವುಗಳನ್ನು ಹುಟ್ಟಿಸಿ, ಪರೀಕ್ಷಿಸಿ ಆಬಳಿಕ ಅವನ್ನು ಮಾಸಪತ್ರಿಕೆಗೆ ತೆಗೆದು ಕೊಳ್ಳತಕ್ಕದ್ದು ಅಲ್ಲಿಯೂ ಅವು ದೃಢವಾಗಿ ನಿಂತ ಬಳಿಕ ಗ್ರಂಥಗಳಿಗೆ ಅವನ್ನು ಒಯ್ಯುವುದು ವಿಶಿಷ್ಟ ಶಬ್ದಗಳ ವಿಷಯ ದಲ್ಲಿ ನಾನು ಕೈಕೊಂಡ ಕ್ರಮ ಇದೇ ಕಿವಿಗೆ ರೂಢಿಯಿಲ್ಲದ ಯಾವ ಹೊಸ ಶಬ್ದವನ್ನೂ ಒಮ್ಮೆಲೆ ರೂಢಿಗೆ ತರುತ್ತಿರಲಿಲ್ಲ ಸಂದರ್ಭಾನುಸಾರವಾಗಿ ಅದನ್ನು ವಾಕ್ಯಗಳಲ್ಲಿ ಜಾರಿಸಿ ಬಿಡು ತ್ತಿದ್ದೆ. ಇದರಿಂದ ಹೊಸ ಅಚ್ಚಗನ್ನಡ ಶಬ್ದಗಳನ್ನೇ ಆಗಲಿ, ಅಥವಾ ನೂತನವಾಗಿ ರಚಿಸಿದ ವಿಶಿಷ್ಟ ಶಬ್ದಗಳನ್ನೇ ಆಗಲಿ, ತಿಳಿದುಕೊಳ್ಳಲು ವಾಚಕರಿಗೆ ಶ್ರಮವಾಗುತ್ತಿದ್ದಿಲ್ಲ ಅರ್ಥ ಗರ್ಭಿತವಾದ ಚಿಕ್ಕ ಚಿಕ್ಕ ವಾಕ್ಯಗಳನ್ನು ರಚಿಸುವುದೊಂದು ನನ್ನ ಪದ್ಧತಿ. ೧೯೧೬ ನೆಯ ಇಸ್ವಿಯಲ್ಲಿ ನಾನು ವಾಗ್ಭೂಷ ಣದ ಸಂಪಾದಕನಾದಾಗ ಬರೆದ ಮೊದಲಿನ ಲೇಖವನ್ನು ನನ್ನ ಮಿತ್ರರಾದ ಕಡಪಾ ರಾಘವೇಂದ್ರರಾಯರು ವಕೀಲರ ಕೋಣೆ

ಯಲ್ಲಿ ಓದಿ ಓದಿ ತೋರಿಸುತ್ತಿದ್ದರು ಆದರೆ, ನಾನು ರೂ
ಯಲ್ಲಿ ತಂದ ಹೊಸ ಮಾದರಿಯು ನನ್ನ ವಿಶಿಷ್ಟವಾದ ಗ
ಶೈಲಿಯು ನನಗೆ ಕೂಡ ತಿಳಿಯುವಂತೆ ತಾನಾಗಿಯೇ ಬೆಳ
ಬಂದುದು; ನಾನು ಕೃತ್ರಿಮವಾಗಿ ಹುಟ್ಟಿಸಿದುದು ಅಲ್ಲ. **ಹೊ
ಯಿಂದ ಹೊರಸೂಸಿದ ಸಾಹಿತ್ಯವೇ ಸಾಹಿತ್ಯವೆಂದು ನ
ಮತ.** ಆದಕಾರಣ, ನಾನು ಲೇಖಗಳನ್ನೇ ಬರೆಯಲಿ ಗ್ರಂ
ಗಳನ್ನೇ ಬರೆಯಲಿ, ಮುಂಚೆ ಭಾಷೆಯ ವಿಚಾರವನ್ನೆ
ಮಾಡುವುದಿಲ್ಲ. ವಿಚಾರಗಳನ್ನು ತಲೆಯಲ್ಲಿ ತುಂಬಿಕೊಂ
ಅವುಗಳನ್ನು ಕಾಗದದ ಮೇಲೆ ಕೆಡಹಿದ ಬಳಿಕ, ಅದಕ್ಕೆ ಅಲ್ಲ
ಮೆರಗುಕೊಡುವುದು ನನ್ನ ಸಂಪ್ರದಾಯ, ಗಣಪ್ಪನನ್
ಮಾಡಿದ ಬಳಿಕ, ಅಲ್ಲಲ್ಲಿ ಅದಕ್ಕೆ ನುಣಾಪುಕೊಟ್ಟಂತೆ ಒಮ
ಬರೆದ ಲೇಖವನ್ನು ತಿದ್ದಿ ಬರೆಯುವ ಸಂಪ್ರದಾಯವಿಲ್ಲ ಹಾ
ಮಾಡಹೋದರೆ ಹೊಸ ಲೇಖವೇ ಆಗುತ್ತದೆ ಯೋಗ
ನಾಗಿಯಲ್ಲದೆ, ಮಿಕ್ಕ ಸಮಯಗಳಲ್ಲಿ ನನ್ನಿಂದ ಲೇಖಗಳ
ಹೊರಡುವುದಿಲ್ಲ

**ನನ್ನ ಗ್ರಂಥಗಳನ್ನು ಬರೆಯುವುದರಲ್ಲಿಯ ವಿಶಿಷ
ಉದ್ದೇಶಗಳು:**—ಹೊಸಗನ್ನಡದಲ್ಲಿ ಎಲ್ಲ ತರಹದ ಗ್ರಂ
ಗಳು ಹುಟ್ಟಬೇಕೆಂದು ನನ್ನ ಆಕಾಂಕ್ಷೆ ಆದಕಾರಣ ನಾನ
ಸ್ವತಃ ಪ್ರತಿಯೊಂದು ದಿಶೆಯಲ್ಲಿಯೂ ಕೆಲವು ಮಾದರಿಯ
ಗ್ರಂಥಗಳನ್ನು ಬರೆಯುವ ಸಂಕಲ್ಪಮಾಡಿದ್ದೆ. ಸಾಮಾನ್ಯಜನ
ಗಾಗಿ ಲಘುಪುಸ್ತಕ ಮಾಲೆಯನ್ನು ಹೊರಡಿಸಿದೆ. ಮಧ್ಯಮ
ತರಗತಿಯ ಜನರಿಗಾಗಿ ಮಧ್ಯಮ ತರಗತಿಯ ಗ್ರಂಥಗಳನ್ನು
ಪ್ರಕಟಿಸಿದೆ. ಮತ್ತು ಕನ್ನಡ ನುಡಿಗೆ ಮೂಲನಿಧಿಗಳಂತಿರು

ಉದ್ಗ್ರಂಥಗಳನ್ನೂ ಬರೆದೆ, ಬರೆಯಿಸಿದೆ, ಪ್ರಕಟಿಸಿದೆ ಹೀಗೆ **ಮೂರೂ ಅಂತಸ್ತುಗಳಲ್ಲಿ ನಾನು ಒಮ್ಮೆಲೆ ಕೆಲಸ ನಡಿಸಿದೆ.** ಯಾರಿಗೂ ತಮ್ಮ ಮನಸ್ಸಿಗೆ ತಕ್ಕ ಗ್ರಂಥಗಳು ದೊರೆಯಲಿಲ್ಲವೆಂಬ ಆಕ್ಷೇಪವನ್ನೆತ್ತಲಿಕ್ಕೆ ಆಸ್ಪದ ದೊರೆಯಬಾರದೆಂಬುದೇ ನನ್ನ ಉದ್ದೇಶ. ಲಘುಪುಸ್ತಕ ಮಾಲೆಯು ಚಿಕ್ಕ ಹೊತ್ತಿಗೆಗಳದು ಅದರ ಬೆಲೆ ಒಂದಾಣೆ, ಎರಡು ಆಣೆ ಮಾತ್ರ. ಅದರ ಖರ್ಚು ಅದಕ್ಕೆ ಹೋದರೆ ತೀರಿತು, ಮಿಕ್ಕವುಗಳನ್ನು ಹಂಚಿಬಿಡತಕ್ಕದ್ದು ಇದರಿಂದ ಸಾಮಾನ್ಯ ಜನತೆಯಲ್ಲಿ ವಾಚನಾಭಿರುಚಿ ಸಹಜ ಬೆಳೆಯುತ್ತದೆ ವಿದ್ಯಾರಣ್ಯ ಚರಿತ್ರೆ, ಕನ್ನಡಿಗರ ಭ್ರಮನಿರಸನ, ಹೋಮರೂಲ ಲೀಗಿನ ಹನ್ನೆರಡು ಚಿಕ್ಕ ಹೊತ್ತಿಗೆಗಳು ಇವು ನಾನು ಈ ರೀತಿಯಲ್ಲಿ ಬರೆದ ಹೊತ್ತಿಗೆಗಳು ಮಧ್ಯಮ ಪುಸ್ತಕಮಾಲೆಯಲ್ಲಿ ನೂರು ನೂರಾ ಐವತ್ತು ಪುಟಗಳುಳ್ಳ ಪುಸ್ತಕಗಳು ಈ ಪುಸ್ತಕಗಳು ನಿಜವಾಗಿ ಅಭಿಮಾನವುಳ್ಳವರು ಕೊಳ್ಳತಕ್ಕವುಗಳು ಬೆಲೆ ಸುಮಾರು ಒಂದು ರೂಪಾಯಿ ಈ ಗ್ರಂಥಗಳನ್ನು ಪೋಷಿಸುವ ಭಾರವು ಮಧ್ಯಮ ತರಗತಿಯ ಜನರದು ನಾನು ಬರೆದ ಕರ್ನಾಟಕ ಗತವೈಭವ, ಕರ್ನಾಟಕದ ವೀರರತ್ನಗಳು ಮತ್ತು ನಾನು ಪ್ರಕಟಿಸಿದ ರಾಜಪುರೋಹಿತರು ಬರೆದ ದಾನಧರ್ಮಪದ್ಧತಿ ಇವು ಈ ಮಾದರಿಯ ಗ್ರಂಥಗಳು. ಉದ್ಗ್ರಂಥಗಳನ್ನು ಪ್ರಕಾಶಿಸುವುದಕ್ಕೆ ಕರ್ನಾಟಕ ಗ್ರಂಥ ಪ್ರಸಾರಕ ಮಂಡಲವನ್ನು ೧೯೨೦ರಲ್ಲಿ ಸ್ಥಾಪಿಸಿದೆ. ಅದು ಸಹಕಾರ ಸಂಘವು. ೫ ರೂಪಾಯಿಗಳಿಗೊಂದು ಪಾಲು (Share). ಅದರಲ್ಲಿ ೨೫೦—೩೫೦ ಪುಟಗಳ ಉದ್ಗ್ರಂಥಗಳನ್ನು ಹೊರಡಿಸತಕ್ಕದ್ದು ಅದನ್ನು ಪೋಷಿಸುವ ಭಾರವು ಅಭಿಮಾನಿಗಳಾದ ಧನಿಕರ ಮೇಲೆ ಇರತಕ್ಕದ್ದು.

ಅವರು ಓದಲಿ, ಬಿಡಲಿ, ಕನ್ನಡಕ್ಕಾಗಿ ಅವನ್ನು ಅವರು ಕೊಳ್ಳ ಬೇಕು ಒಂದೊಂದು ನೂರು ರೂಪಾಯಿ ಹಾಕಿ ನಾವು ಕೆಲ ವರು ಈ ಗ್ರಂಥ ಪ್ರಸಾರಕ ಮಂಡಲವನ್ನು ಸ್ಥಾಪಿಸಿದ್ದೆವು ನನ್ನ ಕೆಲವು ಮಿತ್ರರಿಗೆ ಕೆಲವು ಉದ್ಗ್ರಂಥಗಳನ್ನು ಬರೆಯಲು ಹಚ್ಚಿದೆ ನಾನು ಸ್ವತಃ (೧) ಶಿಕ್ಷಣಮೀಮಾಂಸೆ ( Spencer's Education) (೨) ನೀತಿಮೀಮಾಂಸ (Aristotle's Data of Ethics) (೩) ಸ್ವಾತಂತ್ರ್ಯ ( Mill's Liberty ) (೪) ಸುಖವೂ ಶಾಂತಿಯೂ (Peace and Happiness) ಹೀಗೆ ನಾಲ್ಕು ಉದ್ಗ್ರಂಥಗಳನ್ನು ಬರೆದೆ ಮುದವೇಡಿಕರ ಕೃಷ್ಣರಾಯರು ಜಸ್ಟಿಸ್ ರಾನಡೆಯವರ ಮರಾಠಾ ಇತಿಹಾಸವನ್ನು ಭಾಷಾಂತರಿ ಸಿದರು. ಹಣಮಂತರಾವ ದೇಶಪಾಂಡೆಯವರು ಸಂಸಾರಸುಖ (Pleasure of Life) ವನ್ನು ಭಾಷಾಂತರಿಸಿದರು ಮಿಕ್ಕವ ರಾರೂ ಬರೆಯಲೇ ಇಲ್ಲ. ಇವುಗಳಲ್ಲಿ ನನ್ನ ಶಿಕ್ಷಣಮೀಮಾಂಸೆ ಮತ್ತು ದೇಶಪಾಂಡೆಯವರ ಸಂಸಾರಸುಖ ಇವೆರಡು ಗ್ರಂಥ ಗಳು ಆ ಮಂಡಲದಿಂದ ಪ್ರಕಾಶಿತವಾದವು ಮುದವೇಡೀ ಕರರ ಪುಸ್ತಕ ಕಳೆದುಬಿಟ್ಟಿತು. ಸುಖವೂ ಶಾಂತಿಯೂ ಎಂಬ ಪುಸ್ತಕದ ಒಂದೆರಡು ಪ್ರಕರಣಗಳು ಮಾತ್ರ ಬಾಪೂ ಸುಬ್ಬ ರಾಯರಿಂದ ಕರ್ಣಾಟಕ ಗ್ರಂಥಮಾಲೆಯಲ್ಲಿ ಸು ೩೦ ವರ್ಷಗಳ ಹಿಂದೆ ಅಚ್ಚಾದವು ಮುಂದೆ ಅವರು ಸತ್ತರು—ಮಿಕ್ಕ ಭಾಗವು ಅವರಲ್ಲೇ ಉಳಿದುಹೋಯಿತು ಮಿಕ್ಕ ಗ್ರಂಥಗಳು ಧೂಳು ತಿನ್ನುತ್ತ ಎಲ್ಲೆಲ್ಲಿಯೋ ಬಿದ್ದಿವೆ. ಮುದ್ರಿಸಲು ಗ್ರಂಥಗಳೇ ಇಲ್ಲದ್ದರಿಂದ, ಮತ್ತೆ ಮತ್ತೆ ನನ್ನವೇ ಗ್ರಂಥಗಳನ್ನು ಮುದ್ರಿ ಸುವುದು ನನಗೆ ಇಷ್ಟವಾಗಿ ತೋರದ್ದರಿಂದ, ಹಾಗು ಗ್ರಾಹ ಕರೂ ಸಿಗದ್ದರಿಂದ, ಮಂಡಲವನ್ನು ಗುಡಚಾಪೆ ಕಟ್ಟಿದೆ.

**ಬೆಂಗಳೂರಿನಲ್ಲಿ ನನಗೆ ಕೊಡಲ್ಪಟ್ಟ ಒಂದು ಮಾನ ಪತ್ರದ ಸ್ಮೃತಿ** — ಈ ಸಂದರ್ಭದಲ್ಲಿ, ೧೯೨೧ ನೆಯ ಇಸ್ವಿಯಲ್ಲಿ ಬೆಂಗಳೂರಿನಲ್ಲಿ ನನಗೆ ಕೊಡಲ್ಪಟ್ಟ, ವಾಙ್ಮಯಕ್ಕೆ ಸಂಬಂಧಿಸಿದ ಒಂದು ಮಾನಪತ್ರದ ಸ್ಮೃತಿಯನ್ನು ಕೊಡದೆ ಇರಲಾರೆ. ೧೯೨೧ ನೆಯ ಇಸ್ವಿಯಲ್ಲಿ ನನಗೆ ಬೆಂಗಳೂರಿಗೆ ರಾಮೋತ್ಸವಕ್ಕೆ ಬರುವುದಕ್ಕೆ ಒಂದು ಆಮಂತ್ರಣ ಬಂದಿತು. ನಾನು ಹೋದೆ ಅಲ್ಲಿ ನನಗೆ ಒಂದು ಮಾನಪತ್ರವು ಸಂಸ್ಕೃತ ದಲ್ಲಿ ಶ್ಲೋಕರೂಪದಿಂದ ಕೊಡಲ್ಪಟ್ಟಿತು .ಕರ್ನಾಟಕ ಗತ ವೈಭವದ ಮೂಲಕವಾಗಿ ನಾನು ಮಾಡಿದ ಕರ್ನಾಟಕದ ಸೇವೆ ಗಾಗಿ ಅದರಲ್ಲಿ ನನ್ನ ಸ್ತುತಿ ಇತ್ತು ಆಗ ನನ್ನ ಹೆಸರು ಇಲ್ಲಿಯ ಪದ್ಧತಿಯಂತೆ "ವೆಂಕಟೇಶ ಭೀಮರಾವ ಆಲೂರ ' ಎಂದು ಇತ್ತು. ಅಂದರೆ ಮುಂಚೆ ನನ್ನ ಹೆಸರು, ಅಲ್ಲಿಂದ ತಂದೆಯ ಹೆಸರು, ಕೊನೆಗೆ ಅಡ್ಡಹೆಸರು ಇದು ಅಲ್ಲಿಯ ಜನರಿಗೆ ಗೊತ್ತಿಲ್ಲ, ಅವರಿಗೆ ನನ್ನ ಪ್ರತ್ಯಕ್ಷ ಪರಿಚಯವಿಲ್ಲ ಆದ ಕಾರಣ ಶ್ಲೋಕಗಳನ್ನು ರಚಿಸುವಾಗ, ತಮ್ಮಲ್ಲಿಯ ಪದ್ಧತಿಯಂತೆ ನನ್ನ ಹೆಸರು ಭೀಮರಾಯನೆಂದಿರಬೇಕೆಂದೂ ನಮ್ಮ ತಂದೆಯ ಹೆಸರು ವೆಂಕಟೇಶನೆಂದಿರಬೇಕೆಂದೂ ತಿಳಿದು, ಆ ಪ್ರಕಾರವಾಗಿ ಶ್ಲೋಕಗಳನ್ನು ರಚಿಸಿ ಮುದ್ರಿಸಿ ಬಿಟ್ಟಿದ್ದರು ಇದು ಆಕಸ್ಮಿಕವಾಗಿ ಅಲ್ಲಿಯ ನನ್ನ ಮಿತ್ರರಾದ ಎಚ್. ವ್ಯಾಸರಾಯರಿಗೆ ತಿಳಿಯಿತು. ಅವರು ನಿಜಸಂಗತಿ ಯನ್ನು ಅವರಿಗೆ ಅರುಹಿದರು. ಆಗ, ಅವೆಲ್ಲ ಪ್ರತಿಗಳನ್ನು ಹರಿದುಹಾಕಿ, ಹೊಸ ಶ್ಲೋಕಗಳನ್ನು ರಚಿಸಿ, ಮತ್ತೆ ಮುದ್ರಣ ಮಾಡಿಸಿ ಮಾನಪತ್ರವನ್ನು ಕೊಡಬೇಕಾಯಿತು ! ಮುಂದೆ, ಹೀಗೆ ತಪ್ಪುತಿಳವಳಿಕೆಗೆ ಆಸ್ಪದವುಂಟಾಗಬಾರ

ದೆಂದು, ನಾನು ಅಲ್ಲಿಯ ಮತ್ತು ಇಲ್ಲಿಯ ಪದ್ಧತಿಗಳ ಏಕೀಕರಣ ಮಾಡಿ "ಆಲೂರ ವೆಂಕಟರಾಯ" ನೆಂದು ಬರೆಯುಹತ್ತಿದೆ. ವ್ಹಿ. ಬಿ. ಎಂಬ ಅಸಹ್ಯವಾದ ಪದ್ಧತಿಯನ್ನು ಮಾತು ಪೂರಾ ಹಾರಿಸಿಬಿಟ್ಟೆ. ಇಷ್ಟಾದರೂ, ಮುಂಬಯಿಯಲ್ಲಿಯ "ಅನುರಾಧಾ" ಎಂಬೊಬ್ಬ ಹೆಣ್ಣುಮಗಳು ಪುಣೆಯ ಸಹ್ಯಾದ್ರಿ ಮಾಸಪತ್ರಿಕೆಯ ಹೋದ ಸಪ್ಟಂಬರ ಸಂಚಿಕೆಯಲ್ಲಿ ಮೊನ್ನೆ ಮೊನ್ನೆ ನಡೆದ ನನ್ನ ೭೧ನೆಯ ವರ್ಷದ ಹುಟ್ಟಿದ ಹಬ್ಬಕ್ಕಾಗಿ ನನ್ನ ಗುಣಗೌರವದ ಲೇಖ ಬರೆಯುವಾಗ, ನನ್ನ ಪರಿಚಯವಿಲ್ಲದ ಮೂಲಕ ನನ್ನ ಹೆಸರಿಗೆ "ವೆಂಕಟೇಶರಾವ" ಎಂದು ಹೊಸದೊಂದು ರೂಪವನ್ನೇ ಕೊಟ್ಟಿರುವಳು!

**ಪದವಿಗಳ ಹುಚ್ಚು**. ಇತ್ತೀಚೆಗೆ ತಮ್ಮ ಹೆಸರುಗಳಿಗೆ ತಾವೇ ಆ ಮಾರ್ತಾಂಡ, ಈ ಶಿಖಾಮಣಿ ಮುಂತಾದ ಸ್ವಯಂದತ್ತ ಪದವಿಗಳನ್ನು ಜೋಡಿಸಿಕೊಳ್ಳುವುದೊಂದು ಹುಚ್ಚು ಜನರಲ್ಲಿ ಮಿತಿಮೀರಿ ಬೆಳೆದಿದೆ ಸರಕಾರದವರಿಂದ ರಾವಸಾಹೇಬ, ರಾವಬಹಾದ್ದೂರ ಮುಂತಾದ ಪದವಿಗಳನ್ನು ಪಡೆದುಕೊಳ್ಳುವುದಕ್ಕೆ ಹೇಗೆ ಕೆಲವು ದಾಸ್ಯ ಮನೋವೃತ್ತಿಯ ಜನರು ಹಾತೊರೆಯುತ್ತಾರೋ ಹಾಗೆ ವಾಙ್ಮಯಸೇವಕರೂ ದೇಶಸೇವಕರೂ ಕೂಡ ಹಾತೊರೆಯಹತ್ತುವುದು ಹೀನತನದ ಲಕ್ಷಣವಲ್ಲವೆ? ಹಿಂದಕ್ಕೆ ಡಿ. ಕೆ. ಭಾರದ್ವಾಜ ಇವರು ಕಲಕತ್ತೆಯ ಯಾವುದೊ ಒಂದು ಪದವಿದಾನದ ಸಾಹಿತ್ಯ ಸಂಘದ ಪರವಾಗಿ ನಾನು ಪರೀಕ್ಷಕನಾಗಿ ನೇಮಿಸಲ್ಪಟ್ಟಿರುವೆನೆಂದೂ ನನಗೆ 'ಸಾಹಿತ್ಯಭೂಷಣ'ನೋ ಯಾವದೋ ಒಂದು ಪದವಿಯನ್ನು ಕೊಟ್ಟಿರುವರೆಂದೂ ತಿಳಿಸಿದರು. ಕೂಡಲೇ ಅಂಥ ಪದವಿ ನನಗೆ ಬೇಡವೆಂದು ತಿಳಿಸಿಬಿಟ್ಟೆ. ಪದವಿಗಳನ್ನು

ಅಗ್ಗ ಮಾಡಬಾರದೆಂದು ನನ್ನ ಅಭಿಪ್ರಾಯ ಕಾಯಿದೆಯಿಂದ ಇಂಥ ಪ್ರವೃತ್ತಿಗೆ ತಡೆಹಾಕುವುದು ಲೇಸಲ್ಲವೆ? ಕನಿಷ್ಠ ಪಕ್ಷಕ್ಕೆ, ಉಚ್ಚಮನೋವೃತ್ತಿಯ ಸಾಹಿತಿಗಳಾದರೂ ಇಂಥ ಮನೋವೃತ್ತಿಗೆ ತಾವೇ ತಡೆಹಾಕಿಕೊಳ್ಳಬೇಕು

**ನಾನು ಬರೆದ ಮತ್ತು ಪ್ರಕಟಿಸಿದ ಗ್ರಂಥಗಳು.**— ಸಾಹಿತ್ಯವನ್ನು ಯಥೇಚ್ಛವಾಗಿ ಹುಟ್ಟಿಸುವುದು ನನ್ನ ಉದ್ದೇಶವಿರದೆ, ಮಾದರಿಗಾಗಿ ಕೆಲವನ್ನು ಬರೆಯುವುದನ್ನಷ್ಟೇ ನಾನು ಉದ್ದೇಶವನ್ನಾಗಿ ಇಟ್ಟುಕೊಂಡಿದ್ದೆ **ಒಂದೊಂದು ವಿಶೇಷ ಉದ್ದೇಶದಿಂದ ಒಂದೊಂದು ಗ್ರಂಥ ಬರೆದಿರುವೆ.** ಇಂಗ್ಲಿಷಿನಲ್ಲಿಯ ಉತ್ತಮವಾದ ವಾಙ್ಮಯದ ಪರಿಚಯವನ್ನು ಕನ್ನಡಿಗರಿಗೆ ಮಾಡಿಕೊಡುವದಕ್ಕಾಗಿ 'ಶಿಕ್ಷಣ ಮೀಮಾಂಸೆ', 'ನೀತಿಮೀಮಾಂಸೆ', 'ಸ್ವಾತಂತ್ರ್ಯ', 'ಸುಖವೂ ಶಾಂತಿಯೂ' ಇವೇ ಮುಂತಾದ ಗ್ರಂಥಗಳನ್ನು ಬರೆದದ್ದು 'ಕರ್ನಾಟಕ ಗತವೈಭವ'ವು ಕರ್ನಾಟಕತ್ವದ ಕಲ್ಪನೆಯನ್ನು ಕೊಡುವ ಮೊಟ್ಟಮೊದಲಿನ ಮಹತ್ವದ ಗ್ರಂಥ. 'ಕರ್ನಾಟಕ ವೀರ ರತ್ನಗಳು' ಎಂಬುದನ್ನು ಬರೆಯುವದರಲ್ಲಿಯ ನನ್ನ ಉದ್ದೇಶವು, ಕನ್ನಡದ ವೀರಭಾಷೆಯನ್ನು ನಾವು ಹಿಂದಿನ ಜೀವವಂತ ಭಾಷೆಯುಳ್ಳ ಶಿಲಾಲಿಪಿಗಳೊಳಗಿಂದ ಎತ್ತಿ ಬರೆದರೆ, ಕನ್ನಡವು ಎಷ್ಟರಮಟ್ಟಿಗೆ ವೀರ್ಯವಂತವಾಗಬಹುದೆಂಬುದನ್ನು ತೋರಿಸುವುದಕ್ಕೆ. ಆ ಮಾದರಿಯ ಗ್ರಂಥಗಳಲ್ಲಿ 'ಕರ್ನಾಟಕ ವೀರ ರತ್ನಗಳು' ಎಂಬ ನನ್ನ ಪುಸ್ತಕವನ್ನು ಸರಿಗಟ್ಟುವುದು ಮಾತ್ರವೇ ಅಲ್ಲ, ಅದನ್ನು ಮೀರಿಸುವ ಗ್ರಂಥಗಳನ್ನು ಕನ್ನಡಿಗರು ಬರೆಯಬೇಕೆಂದು ನನ್ನ ಆಶೆ. ರಾಷ್ಟ್ರೀಯತ್ವದ ನಿಜವಾದ ಕಲ್ಪನೆ ಏನಿರಬೇಕೆಂಬುದನ್ನು ತೋರಿಸುವುದಕ್ಕಾಗಿ "ರಾಷ್ಟ್ರೀ

ಯತ್ವದ ಮೀಮಾಂಸೆ" ಎಂಬ ಗ್ರಂಥವನ್ನು ಬರೆದದ್ದು. ನವ ಜೀವನ ಗ್ರಂಥಭಾಂಡಾರವೆಂಬ ಗ್ರಂಥಮಾಲೆಯನ್ನು ಪ್ರಾರಂಭಿಸಿದುದು, ಜ್ಞಾನಲಾಲಸೆಯುಳ್ಳವರಿಗೆ ಜ್ಞಾನದ ಇಚ್ಛಾಭೋಜನವನ್ನು ಉಣಿಸುವುದಕ್ಕಾಗಿ. 'ವಿದ್ಯಾರಣ್ಯ ಚರಿತೆ' ಕನ್ನಡದ ಪ್ರಾಚೀನ ವೈಭವದ ಮಹಾವಿಭೂತಿಗಳಾದ ವಿದ್ಯಾರಣ್ಯರನ್ನು ಎಲ್ಲಕ್ಕೂ ಮುಂಚೆ ಕನ್ನಡಿಗರಿಗೆ ಪರಿಚಯ ಮಾಡಿಕೊಟ್ಟ ಚಿಕ್ಕಪುಸ್ತಕ 'ವಿದ್ಯಾರಣ್ಯ ಕೀರ್ತನೆ'ಯನ್ನು ಶ್ರೀ ಶಾಂತಕವಿಗಳಿಂದ ಬರೆಯಿಸಿ, ಪ್ರಕಟಿಸಿದುದು ಆ ವಿದ್ಯಾರಣ್ಯರ ಚರಿತ್ರೆಯನ್ನು ಕೀರ್ತನರೂಪವಾಗಿ ಹಾಡಿ ಮನೆಮನೆಗೆ ಮುಟ್ಟಿಸುವುದಕ್ಕೆ. ಹೋಮರೂಲಿನ ೧೨ ಚಿಕ್ಕ ಹೊತ್ತಿಗೆಗಳನ್ನು ಬರೆದುದು ರಾಜಕಾರಣದ ಜ್ಞಾನವನ್ನು ಸುಲಭವಾಗಿ ಕನ್ನಡ ಜನತೆಗೆ ಮಾಡಿಕೊಡುವುದಕ್ಕಾಗಿ. 'ಕನ್ನಡಿಗರ ಭ್ರಮನಿರಸನ' ವನ್ನು ಬರೆದುದು ಪರಭಾಷೆಯ ಮೋಹಕ್ಕೀಡಾಗಿರುವ ಕನ್ನಡಿಗರನ್ನು ಹೊಡೆದೆಬ್ಬಿಸುವುದಕ್ಕಾಗಿ ಮತ್ತು ಶಾಲೆಯ ವಿದ್ಯಾರ್ಥಿಗಳು ಸ್ತ್ರೀಪಾತ್ರವನ್ನು ವಹಿಸಿ, ಅಕಾಲದಲ್ಲಿ ಕಾಮವಿಕಾರ ಕ್ಕೊಳಗಾಗಬಾರದೆಂಬುದನ್ನು ತಿಳಿಸುವುದಕ್ಕಾಗಿ. ಬೇಂದ್ರೆಯವರ 'ಕೃಷ್ಣಾಕುಮಾರಿ'ಯನ್ನು ೧೯೨೨ ರಲ್ಲಿ ಪ್ರಕಟಿಸಿದುದು, ಆ ತರುಣಕವಿಯನ್ನು ಮೊಟ್ಟಮೊದಲಿಗೆ ಜಗತ್ತಿನ ಮುಂದೆ ತಂದು ನಿಲ್ಲಿಸುವುದಕ್ಕಾಗಿ ಗೀತಾಕುಸುಮಮಂಜರಿ ಗ್ರಂಥವನ್ನು ಪ್ರಾರಂಭಿಸಿದುದು ಗೀತೆಯ ಮೇಲೆ ಕನ್ನಡದಲ್ಲಿ ವಿಪುಲ ಗ್ರಂಥಗಳನ್ನು ಸ್ವಂತ ಬರೆಯುವುದಕ್ಕಾಗಿ ಟಿಳಕರ ಗೀತಾರಹಸ್ಯವನ್ನು ಭಾಷಾಂತರಿಸಿದುದು ಆ ಪ್ರಚಂಡಗ್ರಂಥದ ಲಾಭವನ್ನು ಕನ್ನಡಿಗರಿಗೆ ಒದಗಿಸಿಕೊಡುವುದಕ್ಕಾಗಿ. ನವಜೀವನ ಗ್ರಂಥಭಾಂಡಾರದಲ್ಲಿ ನನ್ನ ಮಿತ್ರರನೇಕರಿಗೆ ಸುಮಾರು

೩೦ ಉತ್ಕೃಷ್ಟ ಗ್ರಂಥಗಳನ್ನು ಬರೆಯಲಿಕ್ಕೆ ಹಚ್ಚಿ ಹೆಸರುಗಳನ್ನು ಪ್ರಸಿದ್ಧಿಸಿದ್ದೆನು ಆದರೆ, ಕಾಯದೆಭಂಗ ಚಳವಳಿಯು ಕಲಘಟಗಿ ಗ್ರಾಮದಲ್ಲಿ ನನ್ನನ್ನು ಬಂಧಿಸಿಟ್ಟದ್ದರಿಂದ, ನಾನು ತಿರುಗಿ ಎಂದು ಬರುವೆನೋ ಎಂದು ಗ್ರಂಥ ಬರೆಯುವುದನ್ನು ಬಿಟ್ಟುಕೊಟ್ಟರು; ಮತ್ತು ಆ ಗ್ರಂಥಮಾಲೆಯು ನಿಂತು ಹೋಯಿತು ಇವಲ್ಲದೆ ಪ್ಯಾಂಫ್ಲೆಟು ಮುಂತಾದ ಗ್ರಂಥಗಳಲ್ಲಿ ಕೆಲವು ಪ್ರಕಟವಾಗದೆ ಜಪ್ತ ಆದವು. ಕೆಲವು ಪ್ರಕಟವಾದ ಬಳಿಕ ಜಪ್ತ ಆಗಿ ಸುಡಲ್ಪಟ್ಟವು ಹೀಗೆ ಒಂದೊಂದು ವಿಶಿಷ್ಟವಾದ ಉದ್ದೇಶದಿಂದ ನಾನು ನನ್ನ ಸಾಹಿತ್ಯರಾಶಿಯನ್ನು ನಿರ್ಮಾಣಮಾಡಿದ್ದು

**ಸ್ವಂತ ಬರೆದ ಮತ್ತು ಪ್ರಕಟಿಸಿದ ಗ್ರಂಥಗಳು** —(೧) ಶಿಕ್ಷಣಮೀಮಾಂಸೆ (೧೯೦೮); ಕರ್ನಾಟಕಗತವೈಭವ (೧೯೧೭); (೩) ಗೀತಾರಹಸ್ಯ (೧೯೧೮); (೪) ಕರ್ನಾಟಕ ವೀರರತ್ನಗಳು (೧೯೩೦); (೫) ಗೀತಾಪ್ರಕಾಶ (೧೯೩೪); (೬) ಗೀತಾಸಂದೇಶ (೧೯೩೫); (೭) ಗೀತಾಪರಿಮಳ (೧೯೩೬); (೮) ಗೀತಾಭಾವ ಪ್ರದೀಪ; ಭಾಗ ೧ (೧೯೩೭); (೯) ಗೀತಾಭಾವಪ್ರದೀಪ; ಭಾಗ ೨ (೧೯೩೮); (೧೦) ರಾಷ್ಟ್ರೀಯತ್ವದ ಮೀಮಾಂಸೆ; (೧೧) ನನ್ನ ಜೀವನಸ್ಮೃತಿಗಳು, ಭಾಗ ೧ (೧೯೪೦); (೧೨) ವಿಜಯನಗರ ಉತ್ಸವದ ದೊಡ್ಡವರದಿ (೧೯೩೮).

**ಮುದ್ರಿಸದಿದ್ದ ನನ್ನ ಸ್ವಂತ ಗ್ರಂಥಗಳು** —(೧) ನೀತಿ ಮೀಮಾಂಸೆ (Aristotle's Data of Ethics) (೨) ( Mill's Liberty);(೩)ಸುಖವೂ ಶಾಂತಿಯೂ(Peace and Happiness) ಇದರ ಒಂದೆರಡು ಪ್ರಕರಣಗಳು ಸುಮಾರು ೧೯೨೧ ರಲ್ಲಿ ಬಾಪೂ ಸುಬ್ಬರಾಯರಿಂದ ಅವರ ಕರ್ನಾಟಕ ಗ್ರಂಥಮಾಲೆ

ಯಲ್ಲಿ ಪ್ರಸಿದ್ಧವಾಗಿವೆ; (೪) ಗಾಂಧಿಯವರ ಚರಿತ್ರೆ; (೫) ಮ್ಯಾಝಿನಿ ಚರಿತ್ರೆ; (ಸಾವರಕರ ಇವರ ಮರಾಠಿ ಗ್ರಂಥದ ಭಾಷಾಂತರ); (೬) ಪೂರ್ವ ಮತ್ತು ಪಶ್ಚಿಮ (East and West by Vivekananda) (೭) ವಿವೇಕಾನಂದರ ಭಕ್ತಿಯೋಗ (೮) ಗೀತೆಯ ಮೇಲೆ ಇನ್ನೂ ಸುಮಾರು ೩೦೦೦ ಪುಟಗಳಾಗು ವಷ್ಟು ಸಾಮುಗ್ರಿ ಸಿದ್ಧವಿದೆ.

**ಸ್ವಂತ ಬರೆದು ಪ್ರಕಟಿಸಿದ ಚಿಕ್ಕ ಪುಸ್ತಕಗಳು**—(೧) ವಿದ್ಯಾರಣ್ಯ ಚರಿತ್ರೆ (೧೯೦೭); ಇದರ ಮರಾಠೀ ಭಾಷಾಂತರದ ಪುಸ್ತಕವನ್ನು ರಾಮಚಂದ್ರ ಹಯಗ್ರೀವ ಎಂಬವರು ಪ್ರಕಟಿಸಿ ರುವರು; (೨) ಹೋಮರೂಲ ಲೀಗಿನ ೫-೬ ಹೊತ್ತಿಗೆಗಳು (೧೯೧೭); (೩) ಕನ್ನಡಿಗರ ಭ್ರಮನಿರಸನ (೧೯೧೩); (೪) ಚಳವಳಿಗಳ ಆತ್ಮವು (೧೯೧೦); (೫) ಅರವಿಂದರು ತಮ್ಮ ಹೆಂಡತಿಗೆ ಬರೆದ ಪತ್ರ; (೬) ಅರವಿಂದರ ಕೊನೆಯ ರಾಜ ಕಾರಣ ಮೃತ್ಯುಪತ್ರ (೪+೫—೬ ಇವು ೧೯೧೦ರ ಸುಮಾರಕ್ಕೆ ಜಪ್ತಮಾಡಲ್ಪಟ್ಟು ಸುಡಲ್ಪಟ್ಟವು) (೭) ಅನೇಕ ಸಮ್ಮೇಲನ ಗಳ ವರದಿಗಳು.

**ಮುದ್ರಿಸದೆ ಇದ್ದ ಚಿಕ್ಕ ಪುಸ್ತಕಗಳು**—ಹೋಮರೂಲ ಲೀಗಿನ ೫-೬ ಹೊತ್ತಿಗೆಗಳು.

**ಪ್ರಕಟಿಸಿದ ಗ್ರಂಥಗಳು:**—(೧) ಸಂಸಾರ ಸುಖ (ದೇಶ ಪಾಂಡೆ ಕೃತ); (೨) ದಾನಧರ್ಮ ಪದ್ಧತಿ (ರಾಜಪುರೋಹಿತ ಕೃತ) (೩) ವಿದ್ಯಾರಣ್ಯ ಕೀರ್ತನ (ಶಾಂತಕವಿಕೃತ); (೪) ಶ್ರೀ ಕೃಷ್ಣದಾನಾಮೃತ (ಶಾಂತಕವಿಕೃತ); (೫) ಕೃಷ್ಣಾಕುಮಾರಿ (ಬೇಂದ್ರೆಕೃತ), (೬) ಆಕಾಶದೊಳಗಿನ ಅದ್ಭುತ ಚಮತ್ಕಾರಗಳು (ಪ್ರೊ. ಪಾಟೀಲ ಕೃತ); (೭) ಧರ್ಮಸಂಭವ (ಪಂ. ತಾರಾನಾಥ

ಕೃತ); (೮) ಹಿಂದುಸ್ಥಾನದ ರಾಜ್ಯಪದ್ಧತಿಗಳು (ಶ್ರೀ. ವಿಷ್ಣು ಒಡೆಯರ ಕೃತ); (೯) ಖಾದೀಶಾಸ್ತ್ರ (ಮುಂಜಪ್ಪಾ ಹರ್ಡೇಕರ ಕೃತ), (೧೦) ಏಶಿಯಾಖಂಡದ ಜಾಗೃತಿ (ದೊರೆಸ್ವಾಮಿ ಅಯ್ಯಂಗಾರ್ ಎಂ ಎ ಬಿ ಎಲ್ ಕೃತ, (೧೧) ಶಾರದೆಯ ಸಂಸಾರ ಅಥವಾ ಭಾಷಾಶಾಸ್ತ್ರ (ಪ್ರೊ ಜಹಾಗೀರದಾರ ಕೃತ); (೧೨) ಜಯಕರ್ನಾಟಕದಲ್ಲಿ ಮುದ್ರಿಸಿದ ಪ್ರೇಮಭಂಗ, ಭೀಷ್ಮ ಚರಿತ್ರ, ಯಾದವಾಭ್ಯುದಯ ಮುಂತಾದವುಗಳು ಮತ್ತೂ ಅನೇಕ ಪುಸ್ತಕಗಳು

**ನಾನು ಪ್ರಾರಂಭಿಸಿದ ವಾಙ್ಮಯಸಂಸ್ಥೆಗಳು** —ಕರ್ನಾಟಕ ಗ್ರಂಥಪ್ರಸಾರ ಮಂಡಲ, ನವಜೀವನ ಗ್ರಂಥ ಭಾಂಡಾರ, ಗೀತಾ ಕುಸುಮಮಂಜರಿ ಇವು ಮೂರು ಉದಾತ್ತ ಗ್ರಂಥಗಳನ್ನು ಪ್ರಕಟಿಸುವುದಕ್ಕಾಗಿ ನಾನು ಸ್ಥಾಪಿಸಿದ ಸಂಸ್ಥೆಗಳು. ಮೂರೂ ಸಂಸ್ಥೆಗಳಲ್ಲಿ ಕೆಲಕೆಲವು ಗ್ರಂಥಗಳು ಹೊರಟವು ಮುಂದೆ ಭಿನ್ನಭಿನ್ನ ಕಾರಣಗಳ ಮೂಲಕ ಅವು ಈಗ ನಿಂತುಹೋಗಿವೆ. ಅವುಗಳಲ್ಲಿ ಗೀತಾಕುಸುಮ ಮಂಜರಿಯು ಒಂದು ಮಾತ್ರ ಕೇವಲ ಖಾಸಗಿಯದು. ಮಿಕ್ಕೆರಡು ಸಾರ್ವಜನಿಕ ಸಂಸ್ಥೆಗಳು. ಅವುಗಳ ಸಂಬಂಧದ ಋಣದ ಯಾವ ಭಾರವನ್ನೂ ಹೊರದೆ, ಅವನ್ನು ಬೇಕಾದವರು ಮುಂದೆ ನಡಿಸಬಹುದು.

**ಕನ್ನಡ ಗ್ರಂಥಕರ್ತರ ಸಮ್ಮೇಲನ.**—ನಾನು ಸಾರ್ವಜನಿಕ ಜೀವನವನ್ನು ಕೈಕೊಂಡಾಗ ವಾಙ್ಮಯ, ಇತಿಹಾಸ, ರಾಜಕಾರಣ ಮುಂತಾದ ಅನೇಕತರಹದ ಚಟುವಟಿಕೆಗಳನ್ನು ಏಕಸಮಯಾವಚ್ಛೇದದಿಂದ ಕೈಕೊಂಡೆನೆಂದು ಹಿಂದೆ ಹೇಳಿದೆನಷ್ಟೆ. ಅದರಲ್ಲಿ ಬಂದ ಅನುಭವದಿಂದ, ನಾನು ಭಿನ್ನ ಭಿನ್ನ ಕ್ಷೇತ್ರ

ಗಳಲ್ಲಿ ಭಿನ್ನ ಭಿನ್ನ ಸಂಸ್ಥೆಗಳನ್ನು ಕಟ್ಟಿದೆನು. ನಾನು ವಾಙ್ಮಯ ಕ್ಷೇತ್ರದಲ್ಲಿ ಕಾಲಿಟ್ಟ ಕೂಡಲೆ ನನಗೆ ಬಂದ ಮೊದಲನೆಯ ಅನುಭವವೆಂದರೆ—ಉತ್ತರ ಕರ್ನಾಟಕ, ಮೈಸೂರು, ಮಂಗಳೂರು ಮುಂತಾದ ಭಾಗಗಳಲ್ಲಿರುವ ಕನ್ನಡದಲ್ಲಿ ಏಕರೂಪತೆ ಇಲ್ಲದಿರುವುದು. ಆಗ ನನಗೆ ತೀರ ಹೊಸದೊಂದು ವಿಚಾರ ಜಗ್ಗನೆ ಹೊಳೆಯಿತು. ಅದೇನೆಂದರೆ, ಕರ್ನಾಟಕದ ಎಲ್ಲ ಭಾಗಗಳ ಭಾಷೆಯಲ್ಲಿ ಏಕರೂಪತೆ ಉಂಟಾಗದೆ, ಕನ್ನಡದ ಉದ್ಧಾರವಾಗದೆಂಬ ಮಾತು ತಟ್ಟನೆ, ೧೯೦೭ ರಲ್ಲಿ ಕರ್ನಾಟಕ ಗ್ರಂಥಕರ್ತರ ಸಮ್ಮೇಲನವನ್ನು ಹೂಡಿದೆ ಕರ್ನಾಟಕತ್ವದ ಕಲ್ಪನೆಯಲ್ಲಿ ನನ್ನ ಜೊತೆಗೆ ನಿಂತು ಕೆಲಸಮಾಡಿದವರೆಂದರ ನರಗುಂದಕರ ರಾಮರಾಯರು. ಎಸ್ ಜಿ ನರಸಿಂಹಾಚಾರ್ಯರು ಮೊದಲನೆಯ ಸಮ್ಮೇಲನಕ್ಕೆ ಅಧ್ಯಕ್ಷರು ಮರುವರ್ಷ ೧೯೦೮ ರಲ್ಲಿ ನಾನೂ ರಾಮರಾಯರೂ ಕೂಡಿ ಮತ್ತೆ ಇದೇ ಊರಲ್ಲಿ ಅದನ್ನು ಕೂಡಿಸಿದೆವು. ಅಂಥ ಸಮ್ಮೇಲನಗಳು ವಿವಿಧ ಭಾಗಗಳಲ್ಲಿ ಆಗಬೇಕೆಂದು ನಮ್ಮ ಇಚ್ಛೆ ಆದರೆ, ಆಗ ಅದು ನೆರವೇರಲಿಲ್ಲ; ಮುಂದೆ ನೆರವೇರಿತು

**ಕರ್ನಾಟಕ ಸಾಹಿತ್ಯ ಪರಿಷತ್ತಿನ ಸ್ಥಾಪನೆ** — ನಾನು ನನ್ನ ವಾಙ್ಮಯ ಚಟುವಟಿಕೆಗಳನ್ನು ನನ್ನ ಸ್ವಂತ ಹಣದಿಂದ, ಆದರೆ ಕರ್ನಾಟಕ ವಿದ್ಯಾವರ್ಧಕ ಸಂಘಕ್ಕೆ ಮಹತ್ವವನ್ನು ಕೊಟ್ಟು ಅದರ ಹೆಸರಿನಿಂದಲೇ ನಡಿಸಿದ್ದೆನು. ಹಾಗೆ, ಕರ್ನಾಟಕ ಗ್ರಂಥಕರ್ತರ ಸಮ್ಮೇಲನವನ್ನು ಧಾರವಾಡದಲ್ಲಿ ಎರಡು ಸಲ ಕೂಡಿಸಿ, ಮೂರನೆಯದನ್ನು ಬೆಂಗಳೂರಿನಲ್ಲಿ ಕೂಡಿಸಲಿಕ್ಕೆ ಬಹಳ ಸಾಹಸಪಟ್ಟೆ. ನಾಲ್ಕೈದು ಸಲ ಇದೇ ಉದ್ದೇಶದಿಂದ ಬೆಂಗಳೂರು ಮೈಸೂರುಗಳಿಗೆ

ಹೋಗಿ ಬಂದರೂ ಇಷ್ಟು ಕಾರ್ಯವು ಕೈಗೂಡಲಿಲ್ಲ ಸ್ವಂತ ಕೈಯಿಂದ ಹಣ ಎಷ್ಟೆಂದು ಖರ್ಚು ಮಾಡುವುದು ? ಆಗ ಬೆಂಗಳೂರಿನಲ್ಲಿ ವಾಙ್ಮಯವಿಷಯಕ ಒಂದು ಸಂಸ್ಥೆಯೂ ಇರಲಿಲ್ಲ ಆಗ ಬಾಪೂ ಸುಬ್ಬರಾಯರೆಂಬವರು ಮೈಸೂರು ಪ್ರಾಂತದ ವಿಷಯದಲ್ಲಿ ಹೇಳಿದ ಮಾತು ನಿಜವೆಂದು ಮನ ವರಿಕೆಯಾಯಿತು ಅದೇನೆಂದರೆ ಮೈಸೂರಿನವರಿಗೆ ತಾಯಿಯ ತೊಡೆಯ ಮೇಲೆ ಮಲಗಿ ಗುಟುಕು ಹಾಕಿಸಿಕೊಂಡೇ ಗೊತ್ತೆಂಬುದು ಈಗಲೂ ಅದೇ ಅನುಭವ ಕೊನೆಗೆ, ಅಲ್ಲಿಯ ಡಾಯರೆಕ್ಟರರನ್ನು ಭೆಟ್ಟಿಯಾದೆ ಅವರು ಸಹಾನುಭೂತಿ ತೋರಿಸಿದರು ಆದರೆ ಅಷ್ಟರಲ್ಲಿ ಅವರು ಸತ್ತುಹೋದರು. ೧೯೧೪ ನೆಯ ಮಾರ್ಚ ತಿಂಗಳಲ್ಲಿ ''ಸಂಘ ವನ್ನು ಸಂದರ್ಶಿ ಸುವುದಕ್ಕೆ ರಾವಬಹಾದ್ದೂರ ಶ್ಯಾಮರಾಯರು ಬಂದಿದ್ದರು. ಅವರಿಂದ ಬೆಂಗಳೂರಿನಲ್ಲಿ ಸಮ್ಮೇಲನ ಕೂಡಿಸುವ ಅಭಿವಚನ ತಕ್ಕೊಂಡೆ ನಾನು ಅದೇ ವರ್ಷ ತಿರುಪತಿಗೆ ಹೋದಾಗ ಕರ್ಪೂರ ಶ್ರೀನಿವಾಸರಾಯರನ್ನು ಕಂಡೆ. ಅವರು ಸಂಪೂರ್ಣ ವಾಗಿ ಸಹಾಯ ಮಾಡಿದರು. ಮತ್ತು ಅವರಿಬ್ಬರ ಸಹಾಯ ದಿಂದಲೂ ನಂಜುಂಡಯ್ಯನವರ ಸಹಾನುಭೂತಿಯಿಂದಲೂ ವಿಶ್ವೇಶ್ವರಯ್ಯನವರ ಹೆಸರಿನ ಬಲದಿಂದಲೂ ೧೯೧೫ ರಲ್ಲಿ ಅಖಿಲ ಕರ್ನಾಟಕ ಸಮ್ಮೇಲನವು ಬೆಂಗಳೂರಿನಲ್ಲಿ ಕೂಡಿ, ಈಗಿನ ಕರ್ನಾಟಕ ಸಾಹಿತ್ಯ ಪರಿಷತ್ತು ಸ್ಥಾಪಿತವಾಯಿತು. ಬಿ. ಕೃಷ್ಣಪ್ಪನವರು ಅದಕ್ಕೆ ಮೊದಲನೆಯ ಕಾರ್ಯದರ್ಶಿಗಳು. ಆದರೆ ಆ ಮೊದಲನೆಯ ಸಮ್ಮೇಲನದ ಮುಖ್ಯ ಕಾರ್ಯ ವನ್ನೆಲ್ಲ ನಾನು ಈ ಊರಿನಿಂದಲೇ ಅವರ ಹೆಸರಿನಲ್ಲಿ ನಡಿಸಿದೆ. ನನಗೆ ಹಣದ ಅಡಚಣಿ ಅತಿಶಯವಿದ್ದಾಗ್ಯೂ ಅಂದಿನಿಂದ

ಬಹುಶಃ ಪ್ರತಿವರ್ಷ ಸಮ್ಮೇಲನಗಳಿಗೆ ಹೋದೆ ಸಾಹಿತ್ಯ ಪರಿಷತ್ತಿನ ಸ್ಥಾಪನೆಯ ಸಲುವಾಗಿ ನಾನು ಮಾಡಿದ ಪ್ರಯತ್ನಗಳ ವಿಸ್ತಾರವಾದ ಮಾಹಿತಿಯು ೧೯೩೭ ನೆಯ ಅಕ್ಟೋಬರದಲ್ಲಿ ಕೂಡಿದ ಧಾರವಾಡ ಜಿಲ್ಹೆಯ ಪ್ರಥಮ ಸಾಹಿತ್ಯ ಸಮ್ಮೇಲನದ ಸ್ವಾಗತಾಧ್ಯಕ್ಷನೆಂದು ನಾನು ಮಾಡಿದ ಭಾಷಣದಲ್ಲಿ ಬಂದಿದೆ. 'ಸಂಘ' ದ ಹೆಸರಿನಿಂದ ಮಾಡಿದ್ದೆಂದು ಅಲ್ಲಿ ಬರೆದದ್ದೆಲ್ಲವೂ ನಾನೊಬ್ಬನೇ ಮಾಡಿದ್ದೇ. ಗೌರವಕ್ಕಾಗಿ ಸಂಘದ ಹೆಸರು.

**ಕರ್ನಾಟಕ ಸಾಹಿತ್ಯ ಪರಿಷತ್ತಿಗೆ ನನ್ನ ರಾಜೀನಾಮೆ**- ಪರಿಷತ್ತಿನ ಆಜೀವ ಸಭಾಸದನಾಗಿ ಅದರ ಕಾರ್ಯನಿರ್ವಾಹಕ ಮಂಡಲದಲ್ಲಿ ಸತತವಾಗಿ ಕಾರ್ಯಮಾಡುತ್ತ ಬಂದ ನನಗೆ ಕೆಲವು ವರ್ಷಗಳ ಹಿಂದೆ ಅದರ ಕಾರ್ಯ ನಿರ್ವಾಹಕಮಂಡಲಕ್ಕೆ ರಾಜೀನಾಮೆ ಕೊಡುವ ಪ್ರಸಂಗ ಬಂದಿತು. ಅದರ ಕಾರಣವನ್ನು ನಾನು ಇಷ್ಟು ದಿವಸ ಬಹಿರಂಗ ಪಡಿಸಿದ್ದಿಲ್ಲ ಈಗ ಬಹಿರಂಗ ಪಡಿಸುವೆ ಮತ್ತು ನ್ಯಾಯಾನ್ಯಾಯಗಳ ವಿಚಾರವನ್ನು ವಾಚಕರಿಗೇ ಬಿಟ್ಟುಕೊಡುವೆ. ಸ್ವಲ್ಪದರಲ್ಲಿ ಹೇಳುವುದಾದಲ್ಲಿ, ನಾನು ಪರಿಷತ್ತಿನ ಹಿತಕ್ಕಾಗಿ ಮಾಡಿದ ಯಾವ ಮಹತ್ವದ ಸೂಚನೆಯನ್ನೂ " ಬೆಂಗಳೂರಿನವರು " ಸ್ವೀಕರಿಸದಿದ್ದದ್ದು ಮತ್ತು ಯಾವತ್ತೂ ಅಧಿಕಾರವನ್ನು ತಮ್ಮ ಕೈಯಲ್ಲಿ ಕೇಂದ್ರೀಕರಿಸಿಕೊಂಡದ್ದು ನನ್ನ ರಾಜೀನಾಮೆಗೆ ಮುಖ್ಯ ಕಾರಣ. ಇಂಥ ಸ್ಥಿತಿಯಲ್ಲಿ ಯತ್ಕಿಂಚಿತ್ತಾದರೂ ಆತ್ಮಗೌರವವುಳ್ಳ ಯಾವ ಮನುಷ್ಯನಿಗೂ ಪರಿಷತ್ತಿನಲ್ಲಿ ಇರುವುದು ಶಕ್ಯವಿದ್ದಿಲ್ಲ. " ಬೆಂಗಳೂರಿನವರು " ಎಂದೆನ್ನುವ ಕಾರಣವೆಂದರೆ ಬೆಂಗಳೂರಿನ ಹೊರಗಿನವರು ಆಗ

ಹೆಸರಿಗೆ ಮಾತ್ರ ಕಾರ್ಯ ನಿರ್ವಾಹಕ ಮಂಡಲದ ಸದಸ್ಯರಾಗಿದ್ದರಲ್ಲದೆ, ಅವರಿಗೆ ನಿಜವಾದ ಯಾವ ಕಾರ್ಯವನ್ನೂ ಮಾಡಲು ಆಸ್ಪದವಿದ್ದಿಲ್ಲ. ಆ ಸಂಬಂಧವಾಗಿ ನನ್ನ ಮತ್ತು ಪರಿಷತ್ತಿನ ನಡುವೆ ನಡೆದ ಪತ್ರವ್ಯವಹಾರದಲ್ಲಿಯ ಅವಶ್ಯಕ ಭಾಗವನ್ನು ಇಲ್ಲಿ ಕೊಡುವೆ. ಹೆಚ್ಚಿನ ಮಾಹಿತಿ ಬೇಕಾದರೆ ಪರಿಷತ್ತಿನ ಕಚೇರಿಯಲ್ಲಿ ಸಿಕ್ಕೇ ಸಿಕ್ಕುವುದು.

ನಾನು ೧೯೩೧ ರಲ್ಲಿ ಟಾಯಿಪ ಮಾಡಿ ಪತ್ರ ಬರೆದು ಸಮಿತಿಯ ಅನೇಕ ಸದಸ್ಯರಿಗೆ ಕಳಿಸಿದ ಇಂಗ್ಲಿಷ ಪತ್ರದ ಅವಶ್ಯಕ ಭಾಗ.—

"You know that since the very beginning of the Sahitya Parishat, I am trying to bring about a unity of feelings between Mysore and other parts of Karnatak Many of my proposals in the Managing Committee concentrate mainly on two points (1) The question of extending the franchise to outside members of the Managing Committee. (2) The propaganda work that is to be carried on, in border and backward parts of Karnatak. You know, for the last 15 years the outside members of the Managing Committee are co-operating with members of the Managing Committee residing at Bangalore, though they have no scope to take actual part in the discussions of the Managing Committee. It is too much to expect under the present circumstances of the Karnatak, that outsiders should attend the meetings at Bangalore. I brought many proposals, but failed ·······All this

shows that there is no desire on the part of the members then to get real co-operation from the members outside They want to conduct the association themselves, but in the name of Karnatak If the members there do really desire the real co-operation of the outside members, let them themselves make any proposal to meet the above objects."

ಪರಿಷತ್ತಿನ ಕಾರ್ಯದರ್ಶಿಗಳಾದ ಸಿ. ಕೆ. ವೆಂಕಟರಾಮಯ್ಯನವರಿಗೆ ತಾ. ೨೦-೩-೧೯೩೪ ನೆಯ ದಿವಸ ಬರೆದ ಪತ್ರದ ಆವಶ್ಯಕ ಭಾಗ.

"I fully know the merits and defects of each part. Yet, I have concentrated all these years, mainly upon the merits of each part and have shut my ears to the defects, as far as possible Owing to many reasons, the central body has not yet been strong enough to work on an All Karnatak basis... I do want to suggest that the time is now come when you should all think very seriously about this matter There was yet a feeling on Mangalore side that they are negleted Now, this part also is, for some years, feeling that the central body is not as strong and representative as it should be .Now, I think it better to sound this last note of warning to the Parishat. The central body should give scope to outside members to work in the Parishat...Up till now, I have tried

my best to check the separatist tendencies, where-ever I found them But unless the central body considers such questions from my stand-point, I dont think, I shall be able to check the separatist tendencies any more "

೧೨—೧೦—೧೯೩೪ ನೆಯ ಇಸ್ವಿಯ ದಿವಸ ನಾನು ಪರಿಷತ್ತಿಗೆ ಬರೆದ ಪತ್ರದೊಳಗಿನ ಅವತರಣಿಕೆ:—

". ಒಂದೆರಡು ವರ್ಷಗಳಿಂದ, ಕೆಲವು ಕಾರಣಗಳ ಮೂಲಕ ಪರಿಷತ್ತಿನ ಕಾರ್ಯದಲ್ಲಿ ವಿಶೇಷ ಮನಸ್ಸು ಹಾಕಿರುವುದಿಲ್ಲ (ಕಾಯದೆಭಂಗದಲ್ಲಿ ನಾನು ಆಗ ಬಂಧಿಸಲ್ಪಟ್ಟಿದ್ದೆ ವೆ ಅ.) ಆದರೆ ಈಗ ಉಂಟಾಗಿರುವ ತಪ್ಪು ತಿಳವಳಿಕೆಯನ್ನು ದೂರ ಮಾಡುವ ಮಟ್ಟಿಗಾದರೂ ಮನಸ್ಸು ಹಾಕಲೇಬೇಕಾಗಿದೆ..... ಪರಿಷತ್ತಿನ ಕಾರ್ಯ ನಿರ್ವಾಹಕ ಮಂಡಲವು ಹೆಸರಿಗೆ ಮಾತ್ರವೇ ಪ್ರಾತಿನಿಧಿಕವಾಗಿದೆಯಲ್ಲದೆ, ನಿಜವಾಗಿ ಅದು ಪ್ರಾತಿನಿಧಿಕವಾಗಿಲ್ಲವೆಂದು ನನ್ನ ಅಭಿಪ್ರಾಯ. ಅದನ್ನು ನಿಜವಾಗಿ ಪ್ರಾತಿನಿಧಿಕವಾಗಿ ಮಾಡುವುದಕ್ಕೆ ನಾನು ಮೊದಲಿನಿಂದಲೂ ಅನೇಕ ವಿಧವಾದ ಸೂಚನೆಗಳನ್ನು ತಂದಿರುವೆನೆಂಬುದು ನಿಮಗೆ ಗೊತ್ತಿದ್ದ ಮಾತು. ನಿಮಗೆಲ್ಲರಿಗೂ ಈಗಿನ ಕಾರ್ಯನಿರ್ವಾಹಕ ಮಂಡಲವು ಸಾಕಷ್ಟು ಪ್ರಾತಿನಿಧಿಕವಾಗಿಲ್ಲವೆಂದು ಎನಿಸುತ್ತಿದ್ದರೆ ಮತ್ತು ಆ ದಿಶೆಯಿಂದ ಪ್ರಯತ್ನ ಮಾಡುವುದು ಕರ್ತವ್ಯವೆಂದು ಅನಿಸುತ್ತಿದ್ದರೆ, ನೀವು ಈ ಸೂಚನೆಯನ್ನು ಮಾನ್ಯಮಾಡಿಯಾಗಲಿ, ಅಥವಾ ಅದೇ ಉದ್ದೇಶವನ್ನು ಸಾಧಿಸುವಂಥ ಮಿಕ್ಕ ಯಾವುದಾದರೂ ಯೋಜನೆಯನ್ನು ಕೈಕೊಂಡಾಗಲಿ, ಕಾರ್ಯವನ್ನು ಸಾಗಿಸಬೇಕು. ಇಲ್ಲದಿದ್ದರೆ ಬಿಡಬಹುದು. ನನಗೇನೋ ನಿಜವಾಗಿಯೇ ಆ ದಿಶೆಯಲ್ಲಿ ಪ್ರಯತ್ನ

ಪಡತಕ್ಕದ್ದು, ಹೀಗಿದ್ದು, ಒಂದಿಲ್ಲೊಂದು ನೆವದಿಂದ ಅದನ್ನು ಮುಂದೂಡುವುದು ಅನುಚಿತವೆಂದು ತೋರುತ್ತದೆಂಬುದನ್ನು ಹೇಳದೆ ಇರಲಾರೆನು.

“ಆದರೆ, ಅದು ಹೇಗಿದ್ದರೂ, ಒಂದು ಮಾತು ಮಾತ್ರ ಖಂಡಿತ ಅದೇನಂದರೆ, ನಿಮ್ಮೆಲ್ಲರ ಮನಸ್ಸಿಗೆ ಬಾರದಿದ್ದ ಯಾವ ಸೂಚನೆಯನ್ನೂ ಬಹುಮತದಿಂದ ನಿಮ್ಮ ಮೇಲೆ ಹೇರಲು ಇಚ್ಛಿಸುವುದಿಲ್ಲ ಮತ್ತು ವೃತ್ತಪತ್ರಿಕೆಗಳಲ್ಲಿ ಚಳ ವಳಿಯನ್ನು ಆದಷ್ಟುಮಟ್ಟಿಗೆ ಎಬ್ಬಿಸಬಾರದೆಂದು ನನ್ನ ಮತ ಆ ದಿವಸಗಳು ಇನ್ನೂ ಒಂದಿಲ್ಲ ಹಿಂದಕ್ಕೆ ನಾನು ಹಾಗೆ ಮಾಡಿಲ್ಲ, ಮುಂದೆಯೂ ಮಾಡಲಿಚ್ಛಿಸುವುದಿಲ್ಲ ಆದಕಾರಣ, ನಾನು ಈ ಉಪಸಮಿತಿಗೆ ರಾಜೀನಾಮೆ ಕೊಟ್ಟಿರುವೆನು . . . ಹೇಗಿದ್ದರೂ.. .ಕಾರ್ಯ ನಿರ್ವಾಹಕ ಮಂಡಲವವರ ವಿಶೇಷತಃ ಮೈಸೂರು ಪ್ರಾಂತದ ಸದಸ್ಯರ ಮನಸ್ಸಿಗೆ ಬಾರದ್ದ ಯಾವ ಸೂಚನೆಯನ್ನೂ ನಾಮಾನ್ಯಸಭೆಯಲ್ಲಿ ಮಂಜೂರು ಮಾಡಿ ಕೊಂಡು, ಅವರ ಮೇಲೆ ಹೇರಲಿಚ್ಛಿಸುವದಿಲ್ಲ ಆದಕಾರಣ, ನನ್ನ ಮಟ್ಟಿಗಂತೂ ನಾನು ಹಿಂದ ಸರಿಯುಸಲ್ಲುತ್ತೇನೆ

“ಇಲ್ಲಿಯ ಕೇವು ತರುಣರಿಗೆ ಭಾಷಾಸೇವೆಯ ಕ್ಷೇತ್ರವನ್ನು ಬೆಳಿಸಬೇಕೆಂಬ ಇಚ್ಛೆ ಹುಟ್ಟಿ ಒಂದು ಸಂಘವನ್ನು ಸ್ಥಾಪಿಸು ವುದಕ್ಕೆ ಯೋಚಿಸಿದ್ದರು ಅದು ನನಗೆ ತಿಳಿದಾಗ, ಬೇರೆ ಸಂಘವನ್ನು ಸ್ಥಾಪಿಸುವ ಬದಲು, ಪರಿಷತ್ತಿನ ಅಧೀನವಾಗಿ ಆ ಸಂಘವನ್ನು ಸ್ಥಾಪಿಸಬೇಕೆಂದು ಸೂಚಿಸಿದೆನು. ಅದಕ್ಕೆ ಅವರು ಒಪ್ಪಿದರು. ಅದರ ಫಲವು ಶಾಖಾಸ್ಥಾಪನೆಯ ಈ ನನ್ನ ಸೂಚನೆಯು.”

**೧—೨—೧೯೩೮** ನೆಯ ದಿವಸ ನಾನು ಸಾಹಿತ್ಯಪರಿಷತ್ತಿಗೆ ಬರೆದ ರಾಜೀನಾಮೆಯ ಪತ್ರ.

“ ನನ್ನನ್ನು ಕಾರ್ಯ ನಿರ್ವಾಹಕ ಮಂಡಲಿಯ ಸದಸ್ಯನನ್ನಾಗಿ ಆರಿಸಿದ ಸಂಗತಿ ತಿಳಿಯಿತು. ಆದರೆ ಆ ಪ್ರಕಾರದ ಸದಸ್ಯತ್ವವನ್ನು ಸ್ವೀಕರಿಸುವುದು ನನಗೆ ಸಾಧ್ಯವಿಲ್ಲವೆಂಬುದನ್ನು ತಿಳಿಸಲು ವಿಷಾದಿಸುತ್ತೇನೆ. ನನ್ನಿಂದ ಪರಿಷತ್ತಿಗೆ ಯಾವ ವಿಧವಾದ ಸಹಾಯವಾಗುವುದೂ ಶಕ್ಯವಿಲ್ಲವೆಂದು ತೋರುತ್ತದೆ ನಾನು ಹಿಂದಕ್ಕೆ ಆ ವಿಷಯವಾಗಿ ೧೨-೧೦-೩೪ ನೇ ದಿವಸ ಬರೆದ ಪತ್ರದಲ್ಲಿ ನನ್ನ ಅಭಿಪ್ರಾಯವನ್ನು ತಿಳಿಸಿಯೇ ಇರುವೆನು. ’

**೨೭—೬—೩೮** ಕೊನೆಯ ರಾಜೀನಾಮೆ ಪತ್ರ

“.. ನನ್ನ ಕೆಲವು ಮಿತ್ರರ ಆಗ್ರಹದ ಮೇರೆಗೆ ನಾನು ಕೊಟ್ಟ ರಾಜೀನಾಮೆಯನ್ನು ಮೂರು ತಿಂಗಳ ಮಟ್ಟಿಗೆ ನಿಲ್ಲಿಸಿದ್ದೆನು ಮೂರು ತಿಂಗಳು ಆಗಿ ಬಹಳ ದಿವಸಗಳಾದ್ದರಿಂದ, ದಯಮಾಡಿ ಅದನ್ನು ಸ್ವೀಕರಿಸಿ ನನ್ನನ್ನು ಮುಕ್ತನನ್ನಾಗಿ ಮಾಡಬೇಕೆಂದು ವಿಜ್ಞಾಪನೆ.

“ನಾನು ಮೂರುತಿಂಗಳ ಮಟ್ಟಿಗೆ ಮಾತ್ರವೇ ನನ್ನ ರಾಜೀನಾಮೆಯನ್ನು ನಿಲ್ಲಿಸಿರಲು, ಹೊರಗಿನವರಿಗೆ ನಾನು ನನ್ನ ರಾಜೀನಾಮೆಯನ್ನು ಪೂರ್ಣವಾಗಿಯೇ ಹಿಂದಕ್ಕೆ ತೆಗೆದುಕೊಂಡಿರುವೆನೆಂದು ಭಾಸವಾಗುವಂತೆ ನೀವು ತಿಳಿಸಿದುದೂ ಸರಳತನವಲ್ಲ. ಮತ್ತು ವಿಷಯದ ವಿಚಾರವನ್ನು ಇಡೀ ಒಂದು ವರ್ಷ ಮುಂದೂಡುವುದೆಂದರೆ, ಅದರ ವಿಚಾರವನ್ನು ನೀವು ಮಾಡಲಿಕ್ಕೆ ಸಿದ್ಧರಿಲ್ಲನೆಂದಂತೆ. ಇರಲಿ, ಅದನ್ನು ತೆಗೆದುಕೊಂಡು ನನಗೆ ಮಾಡುವುದೇನು? ಬೆಂಗಳೂರಿನ ಬ್ಯುರಾಕ್ರಸಿಯವರು ಈ

ವಿಷಯದಲ್ಲಿ ಇತ್ತೀಚೆಗೆ ಹಟಕ್ಕೆ ಬಿದ್ದಿರುವರೆಂಬುದು ಸ್ಪಷ್ಟ ವಿದೆ. ಆದಕಾರಣ, ಈ ವಿಷಯವನ್ನು ಇಲ್ಲಿಗೆ ನಿಲ್ಲಿಸುವುದು ಒಳ್ಳೆಯದು. ಇನ್ನು ನಾನು ಅಲ್ಲಿ ಇಲ್ಲದಿರುವುದೇ ನನಗೂ ಅವರಿಗೂ ಆದರಂತೆ ಮಿಕ್ಕವರಿಗೂ ಮುಂದಿನವರಿಗೂ ಕೂಡಿಯೇ ವಿಹಿತ

"ನಾನೇನೂ ಸಾಹಿತಿಯಲ್ಲ. ನಾನು ಇಲ್ಲದಿದ್ದರ ಪರಿಷತ್ತು ನಿಂತು ಹೋಗುವುದಿಲ್ಲ ಆ ವಿಷಯದಲ್ಲಿ ಪರಿಷತ್ತು ತಾನು ಮಾಡತಕ್ಕ ಕಾರ್ಯವನ್ನು ಸಾಕಷ್ಟು ಮಾಡಲಿಲ್ಲ, ಮಾಡುವುದಿಲ್ಲವೆಂಬುದು (ಸಮ್ಮೇಲನ ಕೂಡಿಸುವದೊಂದು ನನ್ನ ಸೂಚನೆ ಹೊರತುಪಡಿಸಿ) ನನ್ನ ಮೊದಲನೆಯ ಆಕ್ಷೇಪ ಮತ್ತು ನನ್ನ ಎರಡನೆಯ ಆಕ್ಷೇಪವೆಂದರೆ ಬೆಂಗಳೂರಿನ ಬ್ಯುರಾಕ್ರಸಿಯವರು ಹೊರಗಿನ ಸದಸ್ಯರಿಗೆ ಏನೂ ನಿಜವಾದ ಹಕ್ಕನ್ನು ಕೊಡದೆ, ಅವರನ್ನು ಹೆಸರಿಗೆ ಮಾತ್ರ ಸದಸ್ಯರನ್ನಾಗಿ ಸೇರಿಸಿ ಕೊಂಡಿದ್ದಾರೆಂಬುದು ಇವೆರಡೂ ಆಕ್ಷೇಪಗಳು ಸರಿಯಾಗಿವೆಯೋ ಇಲ್ಲವೋ ಎಂಬುದನ್ನು ಮುಂದೆ ಕರ್ನಾಟಕವು ನಿರ್ಣಯಿಸಲಿ. ನಾನು ನನ್ನ ಮೊದಲನೆಯ ರಾಜೀನಾಮೆಯ ಪತ್ರದಲ್ಲಿ ಹೇಳಿದಂತೆ, ನನ್ನಷ್ಟಕ್ಕೆ ನಾನು ಒಂದಕ್ಕೆ ಸರಿದು ನಿಲ್ಲುತ್ತೇನೆ.

"ನನ್ನ ವ್ಯಕ್ತಿಯ ಸಂಬಂಧವಾಗಿ ಯಾರೂ ಎಂದೂ ಅನಾದರ ತೋರಿಸಿಲ್ಲ ಆದರೆ ಇದು ಕೇವಲ ವ್ಯಕ್ತಿಯ ಪ್ರಶ್ನೆಯಲ್ಲ, ನಾನು ಕೆದರಿ ತಗೆದ ಪ್ರಶ್ನೆಯೂ ಅಲ್ಲ ತಾನಾಗಿಯೇ ಹೊರಟ ಪ್ರಶ್ನೆ. ಅಖಿಲ ಕರ್ನಾಟಕದ ಸಾರ್ವಜನಿಕ ಸಂಸ್ಥೆಯನ್ನು ನಡೆಯಿಸುವ ರೀತಿಯು ಇದು ಅಲ್ಲವೆಂದು ಮಾತ್ರ ನಿದಾಕ್ಷಿಣ್ಯದಿಂದ ಹೇಳುತ್ತೇನೆ."

ಈ ವಿಷಯವಾಗಿ ಹೆಚ್ಚಿಗೆ ಬರೆಯುವ ಮನಸ್ಸಿಲ್ಲ; ಈಗ ಕಾರಣವೂ ಉಳಿದಿಲ್ಲ. ನನ್ನ ರಾಜೀನಾಮೆಯ ಪರಿಣಾಮವೂ ಆಗದೆ ಹೋಗಲಿಲ್ಲವೆಂದು ಕೇಳುತ್ತೇನೆ ಮುಂದೆ ಕೆಲವು ತಿಂಗಳಲ್ಲಿ ಬಳ್ಳಾರಿಯಲ್ಲಿ ಬೆಂಗಳೂರಿನವರಿಗೆ ಜನಮತಕ್ಕೆ ತುಸು ಬಗ್ಗಿದಂತೆ ತೋರಿಸಬೇಕಾಯಿತಂತೆ! **ಹೀಗೆ ವಿರಸವಾಗಿ ರಾಜೀನಾಮೆ ಕೊಡುವ ಪ್ರಸಂಗ ನನಗೆ ಬಂದದ್ದು ನನ್ನ ಆಯುಷ್ಯದಲ್ಲಿ ಇದೊಂದೇ.**

ಮೇಲಿನದರ ಇತಿಹಾಸ ಹೀಗೆ ಇದೆ — ೧೯೩೪ ನೆಯ ಇಸ್ವಿಯಲ್ಲಿ ಜಹಾಗೀರದಾರರೇ ಮುಂತಾದ ಹಲವರು ಇಲ್ಲಿ ಒಂದು ವಾಙ್ಮಯಮಂಡಳ ತೆಗೆಯಬೇಕೆಂದು ಮಾಡಿದರು. ಅದು ನನಗೆ ತಿಳಿದಾಗ ಅದನ್ನು ಸ್ವತಂತ್ರವಾಗಿ ತೆಗೆಯದೆ, ಕೇಂದ್ರ ಸಂಸ್ಥೆಯಾದ ಪರಿಷತ್ತಿಗೆ ಅಧೀನವಾಗಿ ತೆಗೆಯಿರಿ ಎಂದು ಹೇಳಿದೆ. ಅವರು ಒಪ್ಪಿದರು. ಮಾರ್ಚ ತಿಂಗಳಲ್ಲಿ ಶಾಖಾಸಂಸ್ಥೆಯ ಬಗ್ಗೆ ಸೂಚನೆ ಕಳಿಸಿದೆವು ಮಂಗಳೂರಿನ ತಿಮ್ಮಪ್ಪಯ್ಯನವರೂ ಶಾಖಾಸಂಸ್ಥೆಯನ್ನು ಬೇಡಿದ್ದರು. ೬-೭ ತಿಂಗಳ ಮೇಲೆ ೭ ನೆಯ ಅಕ್ಟೋಬರ ದಿವಸ ನನಗೆ ಒಂದು ಪ್ರಶ್ನಾವಳಿ ಮತ್ತು ಪತ್ರ ಪರಿಷತ್ತಿನಿಂದ ಬಂದಿತು ೧೫ ನೆಯ ತಾರೀಖಿನ ಒಳಗಾಗಿ ಉತ್ತರ ಬರದಿದ್ದರೆ ಅದಕ್ಕೆ ನನ್ನ ಒಪ್ಪಿಗೆ ಇದೆ ಎಂದು ತಿಳಿಯಲಾಗುವುದೆಂದು ಬರೆದಿದ್ದರು. ಆಗ, ನಾಡಹಬ್ಬದ ದಿನಗಳು ಆದರೂ ನಾನು ೧೨-೧೦-೧೯೩೪ ನೆಯ ದಿವಸ ಉತ್ತರ ಕಳಿಸಿದೆ. ಬೆಂಗಳೂರಿನವರು ಹೊರಗಿನವರಿಗೆ ಹೆಸರಿಗೆ ಮಾತ್ರ ಪ್ರತಿನಿಧಿಗಳನ್ನಾಗಿ ಸೇರಿಸಿಕೊಳ್ಳುವರೋ ಅಥವಾ ಅವರಿಗೆ ಕೆಲಸ ಮಾಡಲಿಕ್ಕೆ ಕಿಂಚಿತ್ತಾದರೂ ಆಸ್ಪದ ಕೊಡುವರೋ ಎಂಬುದೇ ಮುಖ್ಯ ಪ್ರಶ್ನೆ.

"ಅದು ಮನಸ್ಸಿನಲ್ಲಿದ್ದರೆ, ಈ ಯೋಜನೆಯನ್ನಾಗಲಿ ಪುತ್ತಾ ವುದೇ ಯೋಜನೆಯನ್ನಾಗಲಿ ಕೈಕೊಂಡು ತರುಣರಿಗೆ ಆಸ್ಪದ ಕೊಡಿರಿ, ಇಲ್ಲದಿದ್ದರೆ ಬಿಡಿರಿ, ಮನಸ್ಸಿಗೆ ಬಂದಂತೆ ಮಾಡಿರಿ; ನನ್ನ ಮಟ್ಟಿಗೆ ನಾನು ಸರಿದು ನಿಂತು ಬಿಡುತ್ತೇನೆ'' ಎಂದು ತಿಳಿಸಿದೆ. ಮತ್ತು ಮತ್ತೆ ಆರು ಬೇರೆ ಬೇರೆ ಸೂಚನೆಗಳನ್ನು ಅವರ ಮುಂದೆ ಇಟ್ಟೆ. ಡಿಸೆಂಬರದಲ್ಲಿ ರಾಯಚೂರ ಸಮ್ಮೇ ಲನದ ಕಾಲಕ್ಕೆ ಪರಿಷತ್ತಿನ ಅಧಿವೇಶನದಲ್ಲಿ ಆ ಪ್ರಶ್ನೆ ಹೊರ ಟಿತು. ನಾನು ಎದ್ದು " ಹೆಸರಿಗೆ ಮಾತ್ರ ಹೊರಗಿನವರು ಪ್ರತಿನಿಧಿಗಳಾಗಿರುವರು, ಅದನ್ನು ಹೇಗಾದರೂ ತಪ್ಪಿಸಿರಿ " ಎಂದು ಅಂದ ಕೂಡಲೆ ಬಿ. ಎಂ ಶ್ರೀಕಂಠಯ್ಯನವರು, ಏಕೋ ಏನೋ, ಅಧ್ಯಕ್ಷರಾದ ಡಿ ವ್ಹಿ ಗುಂಡಪ್ಪನವರು ತಡೆದು ಹಿಡಿದರೂ ಕೇಳದೆ, ಭರದಿಂದ ಹೊರಟು ಹೋದರು ಮುಂದೆ ಕೆಲವು ಹೊತ್ತಿನ ಮೇಲೆ ಸಭೆ ವಿಸರ್ಜನೆಯಾಯಿತು ಯಾವ ವಿಷಯಗಳ ವಿಚಾರವೂ ಆಗಲಿಲ್ಲ ಮುಂದೆ, ಬೆಂಗ ಳೂರಿನಲ್ಲಿಯೇ ಮೇ ೨ ನೆಯ ತಾರೀಖಿಗೆ ವಿಶೇಷ ಅಧಿವೇಶನ ವನ್ನು ಇಟ್ಟರು ನನ್ನ ಸೂಚನೆಗಳ ಹಣೆಬರಹವು ಅಲ್ಲಿ ಏನಾಗುವುದೆಂಬುದು . ಬೆಂಗಳೂರಿನವರ ರಾಯಚೂರಿನಲ್ಲಿಯ ಧೋರಣದಿಂದ ನನಗೆ ತಿಳಿದೇ ಇದ್ದುದರಿಂದ, ' ಆ ಫಾರ್ಸು ಮಾಡುವುದು ನನಗೆ ಬೇಡ, ನಿಮ್ಮ ಇಚ್ಛೆ ಇದ್ದರೆ ಆಸ್ಪದ ಕೊಡಿರಿ, ಇಲ್ಲದಿದ್ದರೆ ಬಿಡಿರಿ, ನಾನು ಪರಿಷತ್ತಿನ ಸಂಬಂಧ ಕಡಿದುಕೊಂಡು ಬಿಟ್ಟಿರುವೆ ' ಎಂದು ತಿಳಿಸಿದೆ. ಇಲ್ಲಿಗೆ ಒಂದ ನೆಯ ಅಂಕು ಸಮಾಪ್ತವಾಯಿತು.

ಮುಂದೆ ಮುಂಬಯಿ, ಜಮಖಂಡಿ ಸಮ್ಮೇಲನಗಳಿಗೆ ನಾನೂ ಹೋಗಲಿಲ್ಲ; ನಾನು ಏಕೆ ಬರಲಿಲ್ಲವೆಂದು ಅವರೂ

ಕೇಳಲಿಲ್ಲ ಜಮಖಂಡಿಯಲ್ಲಿ, ಈ ಒಳ ಸಂಗತಿಗಳು ಗೊತ್ತಿಲ್ಲದ ಮೂಲಕ, ಪುನಃ ನಾನೂ ಕಾರ್ಯನಿರ್ವಾಹಕ ಮಂಡಲದಲ್ಲಿ ಆರಿಸಲ್ಪಟ್ಟೆ ಆಗ ನಾನು ೧—೨—೧೯೩೮ ನೆಯ ದಿವಸ ಪರಿಷತ್ತಿಗೆ ಪತ್ರ ಬರೆದು, ನನ್ನಿಂದ ಪರಿಷತ್ತಿಗೆ ಯಾವ ವಿಧವಾದ ಸಹಾಯವಾಗುವದೂ ಶಕ್ಯ ತೋರುವುದಿಲ್ಲವಾದ್ದರಿಂದ ಸದಸ್ಯತ್ವವನ್ನು ಸ್ವೀಕರಿಸುವುದಿಲ್ಲವೆಂದು ತಿಳಿಸಿದೆ. ಆಗ, ಶ್ರೀ ಬಸವಲಿಂಗ ದೇಶಿಕರು, ಪ್ರೊ ಮಾಳವಾಡ ಮುಂತಾದ ೫-೬ ಜನರು, ನನ್ನ ರಾಜೀನಾಮೆಯನ್ನು ಸ್ವೀಕರಿಸಬಾರದೆಂದೂ ಪರಿಷತ್ತಿನವರು ನನ್ನನ್ನು ಇಟ್ಟುಕೊಳ್ಳಲೇಬೇಕೆಂದೂ ಸಲಹೆ ಕೊಟ್ಟರು ಬೆಂಗಳೂರಿನವರು ತಾವು ಆ ಪ್ರಕಾರ ಮಾಡದೆ, ಹಾಗೆ ಸಲಹೆ ಕೊಟ್ಟವರು ತಾವೇ ಆಲೂರವರನ್ನು ಕರೆದುಕೊಂಡು ಬರಬೇಕೆಂದು ಅವರಿಗೆ ತಿಳಿಸಿದರು ಅವರಿಂದ ನನಗೆ, ರಾಜೀನಾಮೆ ಏಕೆ ಕೊಟ್ಟಿರಿ, ಕೊಡಬೇಡಿರಿ ಎಂಬ ಬಗ್ಗೆ ಪತ್ರ ಬಂದವು. ಅವರಿಗೆ ಹಿಂದಿನ ಸಂಗತಿ ಗೊತ್ತಿರಲಿಲ್ಲ ಅವರೆದುರಿಗೆ ನಾನು ಹಿಂದಿನ ಪುರಾಣವನ್ನು ಬಿಚ್ಚಿ ಇಡಬೇಕಾಯಿತು ಇಟ್ಟೆ. ಮತ್ತು ಇಂಥ ಸ್ಥಿತಿಯಲ್ಲಿ ನಾನು ಇರುವುದು ಒಳಿತೋ ಹೇಗೆ ನೀವೇ ಹೇಳಿರಿ ಎಂದು ಕೇಳಿದೆ. ಪ್ರೊ. ಮಾಳವಾಡರ ಆಗ್ರಹದ ಸಲುವಾಗಿ ಮೂರು ತಿಂಗಳ ಮಟ್ಟಿಗೆ ರಾಜೀನಾಮೆ ನಿಲ್ಲಿಸಿದೆ. ಅವರು ಪರಿಷತ್ತಿಗೆ ಸೂಚನೆ ಕಳಿಸಿ ಪ್ರಯತ್ನಪಟ್ಟರು. ಆದರೂ ಬೆಂಗಳೂರಿನವರು ಕೇಳಲಿಲ್ಲ ನನಗೆ ಇರಲಿಕ್ಕೆ ಹೇಳಲಿಕ್ಕೆ ಪ್ರೊ ಮಾಳವಾಡರಿಗೂ ಆಗ, ಬಾಯಿ ಇಲ್ಲದಾಯಿತು. ಇಷ್ಟೇ ಅಲ್ಲ, ಮೂರು ತಿಂಗಳ ಮಟ್ಟಿಗೆ ಮಾತ್ರ ನಾನು ರಾಜೀನಾಮೆ ನಿಲ್ಲಿಸಿದ್ದೆನೆಂಬ ಮಾತು ತಿಳಿಸದೆ, ನಾನು

ನನ್ನ ರಾಜೀನಾಮೆಯನ್ನು ಒತ್ತಾಯಪಡಿಸುವುದಿಲ್ಲವೆಂದು ತಿಳಿಸಿದುವೆನೆಂದು ಪರಿಷತ್ತಿನವರು ಕಾರ್ಯ ನಿರ್ವಾಹಕ ಮಂಡಳದವರಿಗೆ ತಿಳಿಸಿದ್ದರು ಆಗ, ಅರ್ಥಾತ್ ನಾನು ರಾಜೀನಾಮೆ ಕೊಡಲಿಲ್ಲವೆಂದು ಹೊರಗಿನವರು ತಿಳಕೊಂಡು ಸಮ್ಮತಿ ಕೊಡುಬಿಟ್ಟರು ಈ ಮಾತು ನನಗೆ ಹಿಂದಿನಿಂದ ತಿಳಿಯಿತು ಕೊನೆಗೆ ೨೭—೬—೧೯೩೪ ನೆಯ ದಿವಸ, ನನ್ನ ರಾಜೀನಾಮೆ ಮಂಜೂರು ಮಾಡಲು ತಿಳಿಸಿದೆ ಬೆಂಗಳೂರಿನವರು ಮಂಜೂರು ಮಾಡಿದರು

**ಗೀತಾರಹಸ್ಯದ ಬಗ್ಗೆ ನನ್ನ ಸ್ಮೃತಿ**—ಲೋ ಟಿಳಕರು ಗೀತಾರಹಸ್ಯದ ಭಾಷಾಂತರವನ್ನು ಒಪ್ಪಿಸಿದುದರ ಸ್ಮೃತಿ ವಿಚಿತ್ರವಾಗಿದೆ. ಅವರು ಅದನ್ನು ನನಗೆ ಒಪ್ಪಿಸಿ ನಾನು ಅವನ್ನು ಮುಗಿಸುವ ವರೆಗೆ ಅವರ ನಮ್ಮ ಭೆಟ್ಟಿಯಿಲ್ಲ ೧೯೦೭ ನೆಯ ಇಸ್ವಿಯಲ್ಲಿ ಸುರತ ಕಾಂಗ್ರೆಸ್ಸಿನ ಕಾಲಕ್ಕೆ ಅವರಿಗೂ ನನಗೂ ಪ್ರತ್ಯಕ್ಷಪರಿಚಯವಾಗಿದ್ದಿಲ್ಲ ಮುಂದೆ ೧೯೧೪ನೆಯ ಆಗಸ್ಟದ ವರೆಗೆ ಅವರು ಅದೃಶ್ಯರೇ ಆಗಿದ್ದರು ಅವರು ತಿರುಗಿ ಬಂದಾಗ, ನಾನು ಕಾರ್ಯರಂಗದಲ್ಲೇನೋ ಇದ್ದೆ. ಆದರೆ ಅವರ ಭೆಟ್ಟಿಯ ಪ್ರಸಂಗ ಬಂದಿರಲಿಲ್ಲ ೧೯-೭-೧೯೧೫ ನೆಯ ಇಸ್ವಿಯ ದಿವಸ, ಅವರ ಖಾಸಗೀ ಸೆಕ್ರೆಟರಿಗಳಾದ ಡಿ ವ್ಹಿ. ಗೋಖಲೆಯವರ ಮುಖಾಂತರವಾಗಿ ನನಗೆ ಪತ್ರಬಂದಿತು. ಅದರಲ್ಲಿ, ಗೀತಾರಹಸ್ಯದ ಭಾಷಾಂತರದ ಭಾರವನ್ನು ನಾನು ಸ್ವೀಕರಿಸಲೇಬೇಕೆಂದೂ ಆರು ತಿಂಗಳ ಮಟ್ಟಿಗೆ ವಕೀಲಿ ಉದ್ಯೋಗವನ್ನು ನಿಲ್ಲಿಸಿಯೋ ಅದನ್ನು ಪೂರ್ಣಗೊಳಿಸಬೇಕೆಂದೂ ಬರೆದಿದ್ದರು.

"As to the expenses of printing you need not care; for Tilak supplies everything I press you

to accept the work. To express in his words, he wants a man whose reputation must go with the translation. The translator should not hope to build up fame, but must be aware of the responsibility that if there is a deficiency, his reputation will go. No doubt, it involves a loss of six months' practice but Tilak is ready to compensate fully for it from the pecuniary stand-point."
ಎಂಬುದಾಗಿ ಅದರಲ್ಲಿ ಬರೆದಿತ್ತು.

ನಾನು ಪ್ರಕ್ಕಟವಾಗಿ ಮಾಡುವೆ; ಹಣ ಬೇಡವೆಂದು ತಿಳಿಸಿ, ಭಾಷಾಂತರ ಮುಗಿಸಿಕೊಟ್ಟೆ. ಪ್ರೊಸೂರನವರಿಗೂ ಮಾನ್ಯ ವಾಗಬೇಕೆಂದು ಬಿ. ಎಂ. ಶ್ರೀಕಂಠಯ್ಯನವರೇ ಮುಂತಾದ ೨-೩ ಜನರ ಕಡೆಗೆ (ಆಗ ಶ್ರೀಕಂಠಯ್ಯನವರ ಪರಿಚಯವಿದ್ದಿಲ್ಲ, ಅವರ ವಿದ್ವತ್ತೆಯ ಬಗ್ಗೆ ಕೇಳಿದ್ದೆ) ಭಾಷಾಂತರ ಕಳಿಸಿ, ಅವರ ಅನುಕೂಲ ಅಭಿಪ್ರಾಯಗಳನ್ನು ಟಿಳಕರ ಕಡೆಗೆ ಕಳಿಸಿದೆ. ಕೆರೂರ ವಾಸುದೇವಾಚಾರ್ಯರು ತಾವೂ ಕೆಲವುಭಾಗ ಭಾಷಾಂತರ ಮಾಡುವೆನೆಂದು ಟಿಳಕರಿಗೆ ಕೇಳಿದರು. ಅವರು ನನ್ನ ಕಡೆಗೆ ಬೊಟ್ಟು ತೋರಿಸಿದರು. ನಾನು ಅವರಿಗೆ ಉಳಿದ ಕೊನೆಯ ಗೀತಾಶ್ಲೋಕಗಳ ಭಾಷಾಂತರ ಮಾಡಲು ಹೇಳಿದೆ. ಅವರು ಅದನ್ನು ಮಾಡಿಕೊಟ್ಟರು. ಪಾಯಿಕಾ ಟಾಯಿಪಿನಲ್ಲಿ ಮುದ್ರಿತವಾದರೆ ಗ್ರಂಥದ ಪುಟಗಳು ಮಿತಿಮೀರಿ ಬೆಳೆಯುವಂತೆ ತೋರಿತು. (ಆಗ, ಕನ್ನಡ ಭಾಷೆಯ ಒಂದು ಕೊರತೆ ನನ್ನ ಲಕ್ಷ್ಯಕ್ಕೆ ಬಂದಿತು) ಎಷ್ಟೇ ಹಾನಿಯಾದರೂ ೩ ರೂಪಾಯಿಗಿಂತ ಬೆಲೆ ಹೆಚ್ಚು ಇಡಲು ಟಿಳಕರು ಸಿದ್ಧರಿದ್ದಿಲ್ಲ. ಶ್ರೀಕೃಷ್ಣ ಪ್ರೆಸ್ಸಿನವರು ಹೊಸದಾಗಿ ಚಿಕ್ಕ ಟಾಯಿಪುಗಳನ್ನು ಹೊಯ್ದು

ಮುದ್ರಿಸಬೇಕಾಯಿತು ಮುದ್ರಣಕ್ಕೆ ವಿಳಂಬವಾಯಿತು. ಪ್ರೂಫುಗಳನ್ನು ಸಹ ಮುದ್ರಕರೇ ನೋಡಿ ಮುದ್ರಿಸಿಬಿಡಲೆಂದು ಟಿಳಕರು ಹೇಳಿದರು ಅವಸರದಿಂದ ಮುದ್ರಣವಾದ್ದರಿಂದ ತಪ್ಪುಗಳು ಉಳಿದಿವೆ.

ಟಿಳಕರ ಹೇಳಿಕೆಯ ಮೇರೆಗೆ ತೆಲುಗಿನಲ್ಲಿ ಭಾಷಾಂತರದ ವ್ಯವಸ್ಥೆ ಮಾಡಿಕೊಟ್ಟೆ ನನ್ನ ಕನ್ನಡದ ಭಾಷಾಂತರದ ಪ್ರೂಫುಗಳನ್ನು ತೆಲುಗಿನವರಿಗೆ ಎಷ್ಟೋ ದಿವಸ ಕಳಿಸಿದೆ. ತೆಲುಗಿನ ಪ್ರಸ್ತಾವನೆಯಲ್ಲಿ ನನ್ನ ಉಲ್ಲೇಖವಿದೆ ೪-೫ ವರುಷದ ನಂತರ ಟಿಳಕರು ತೀರಿಕೊಂಡರು. ತೀರಿಕೊಂಡು ಒಂದು ವರ್ಷವಾದ ಬಳಿಕ, ಒಂದು ದಿವಸ, ಟಿಳಕರ ಮಗನ ಕಡೆಯಿಂದ ೨೦೦೦ ರೂಪಾಯಿಗಳ ಚೆಕ್ಕು ಕಳಿಸುತ್ತೇನೆಂದು ಪತ್ರ ಬಂದಿತು. ನಾನು ವಕೀಲಿ ಬಿಟ್ಟದ್ದೆ ಕೆರೂರ ವಾಸುದೇವಾಚಾರ್ಯರು ತೀರಿಕೊಂಡಿದ್ದರು ನಾನು ಅವರ ಮನೆಯವರಿಗೆ ೫೦೦ ರೂಪಾಯಿ ಕಳಿಸಬೇಕೆಂದೂ ನನಗೆ ೧೫೦೦ ರೂ. ಮಾತ್ರವೇ ಕಳಿಸಬೇಕೆಂದೂ ತಿಳಿಸಿದೆ. ಆ ಮೇರೆಗೆ ನನಗೆ ೧೫೦೦ರೂ. ಗಳ ಚೆಕ್ಕು ಬಂದಿತು. ಹೀಗೆ ಅವರ ಮರಣದ ಒಂದು ವರ್ಷದ ನಂತರ ಏಕೆ ಹಣ ಬಂದಿತೋ ಎಂಬುದು ಇನ್ನೂ ನನಗೆ ಗೂಢವೇ ಇದೆ. ಆ ಮಗನೂ ಆತ್ಮಹತ್ಯ ಮಾಡಿ ತೀರಿಕೊಂಡಿರುವುದರಿಂದ, ಅದು ತಿಳಿಯುವಂತೆಯೂ ಇಲ್ಲ.

**ನನ್ನ ಸಂಪಾದಕೀಯ ಜೀವನ:**—ನನ್ನ ಸಂಪಾದಕೀಯ ಜೀವನವನ್ನು ಇಲ್ಲಿಯೇ ಸ್ವಲ್ಪದರಲ್ಲಿ ಹೇಳಿ ಮುಗಿಸಿ ಬಿಡುತ್ತೇನೆ. ಸಂಪಾದಕನಾಗಿ ನಾನು ಮಾಡಿದ ವಾಙ್ಮಯ ಸೇವೆಯಲ್ಲಿ ಒಂದು ವಿಶೇಷವಿದೆ. ಅದೇನೆಂದರೆ, ನಾನು ನನ್ನ

ಸ್ವಭಾವನಂತೆ ಆವಷ್ಟುಮಟ್ಟಿಗೆ ಪ್ರಾಮ್ಮೋಕದಲ್ಲಿ ನಿಂತು ಕೆಲಸ ಮಾಡದೆ ಹಿಮ್ಮೋಕದಲ್ಲಿ ನಿಂತೇ ಕೆಲಸಮಾಡಿರುವೆನು. ಆದರೆ ಪ್ರಸಂಗ ಒದಗಿದಾಗ ಅದರ ಯಾವತ್ತು ಭಾರವನ್ನು ಹೊರ ಲಿಕ್ಕೆ ಹಿಂದುಮುಂದೆ ನೋಡಿಲ್ಲ Dont evade, dont seek —'ತಪ್ಪಿಸಬೇಡ, ಅಪ್ಪಿಕೊಳ್ಳಲೂ ಹೋಗಬೇಡ' ಎಂಬುದು ನನ್ನ ಜೀವನದ ಒಂದು ತತ್ವ ಸಂಪಾದಕನಾಗುವುದಕ್ಕೂ ಅಭ್ಯಾಸ ಮಾಡಬೇಕಾಗುತ್ತದೆ ಆದಕಾರಣ, ನಾನು ಹೊಸ ದಾಗಿ ಪತ್ರಿಕೆ ತೆಗೆಯುವುದಕ್ಕೆ ಹೋಗದೆ, ಇದ್ದ ಪತ್ರಿಕೆಗಳಲ್ಲಿ ಒಂದೇಸಮನೆ ಲೇಖ ಬರೆಯುತ್ತ ಹೋದೆ ಕರ್ನಾಟಕದಲ್ಲಿ ಆಗ ದೊರಕುವ ಎಲ್ಲ ಪತ್ರಿಕೆಗಳಲ್ಲಿ ನನ್ನ ಲೇಖಗಳು ಬಂದಿವೆ. ಕರ್ನಾಟಕ ಪತ್ರ, ಕರ್ನಾಟಕ ವೃತ್ತ, ಕನ್ನಡ ಕೇಸರಿ, ಕರ್ನಾ ಟಕ ವೈಭವ, ಕನ್ನಡಿಗ ಪತ್ರಿಕಗಳನ್ನು ನಡಿಸಿದ ಸಂಗತಿ ಹೇಳಿಯೇ ಇರುವೆ. ರಾಜಕಾರಣಕ್ಕೆ ತಕ್ಕುದಾದ ಹೊಸಭಾಷೆ ಯನ್ನು ರಚಿಸಲು ಆಗ ನನಗೆ ಅನುವು ದೊರೆಯಿತು. ೧೯೨೭ ರಲ್ಲಿ ವಾಗ್ಭೂಷಣವನ್ನು ನಡಿಸಿದೆ ಪುನಃ ೧೯೧೬ರಲ್ಲಿಯೂ ಅದನ್ನು ನಡಿಸಿದ ಪ್ರಸಂಗ ಬಂದಾಗ 'ಕರ್ಮವೀರ'ದ ಸಂಪಾದಕತ್ವವನ್ನು ಸ್ವೀಕರಿಸಿ ನಡಿಸಿದೆ. ಕರ್ಮವೀರದಲ್ಲಿ ನನ್ನ ಲೇಖಗಳೂ ಲೇಖಮಾಲಿಗಳೂ ವಿಪುಲವಾಗಿ ಬಂದಿವೆ. ದೈನಿಕ "ಕನ್ನಡಿಗ" ಪತ್ರಕ್ಕೆ ಸಂಪಾದಕನಾಗಿಯೂ ಅದು ನಿಲ್ಲುವವರೆಗೆ ಕೆಲವು ತಿಂಗಳು ನಡಿಸಿದೆ 'ಜಯಕರ್ನಾಟಕ' ಪತ್ರಿಕೆಯನ್ನು ಸ್ಥಾಪಿಸಿ, ನಾನು ಮಾಡಿದ ಕಾರ್ಯ ಪ್ರಸಿದ್ಧವೇ ಇವೆ. ಆ ಮುಂದಿನ ನನ್ನ ವಾಙ್ಮಯವಿಷಯಕ ಕಾರ್ಯವು ಜಯಕರ್ನಾಟಕದಲ್ಲಿ ಪ್ರಕಟವಾಗಿಯೇ ಇರುವದರಿಂದ ಆ ಬಗ್ಗೆ ಹೆಚ್ಚಿಗೆ ಬರೆದು ಸ್ಥಳವನ್ನು ಆಕ್ರಮಿಸಲು ಇಷ್ಟಪಡುವದಿಲ್ಲ.

ನವಜೀವನ ಗ್ರಂಥಭಾಂಡಾರ, ಗೀತಾಕುಸುಮಮಂಜರಿ ಗ್ರಂಥ ಮಾಲೆ ಇವುಗಳ ಸಂಪಾದಕತ್ವದ ಕಾರ್ಯವು ಕನ್ನಡಿಗರ ಕಣ್ಣಮುಂದೆ ಇದ್ದೇಇದೆ ಮತ್ತು ಮಿಕ್ಕದು ಸಂದರ್ಭಾನು ಸಾರವಾಗಿ ಬಂದೇ ಇದೆ

**"ಸಂಯುಕ್ತ ಕರ್ನಾಟಕ" ಸ್ಥಾಪನೆಯ ಬಗ್ಗೆ ನನ್ನ ಪ್ರಯತ್ನ.**—ನನ್ನೀ ಸ್ಮೃತಿಯು ಈಗಿನ "ಸಂಯುಕ್ತ ಕರ್ನಾಟಕ"ವೆಂಬ ದೈನಿಕ ಪತ್ರಿಕೆಗೆ ಸಂಬಂಧಿಸಿದುದಲ್ಲ ಸುಮಾರು ೨೦ ವರುಷಗಳ ಹಿಂದೆ ನಾನು ಹೊರಡಿಸಲೆತ್ನಿಸಿದ 'ಸಂಯುಕ್ತ ಕರ್ನಾಟಕ' ವೆಂಬುದೇ ಹೆಸರಿನ ದೈನಿಕಪತ್ರಕ್ಕೆ ಸಂಬಂಧಿ ಸಿದುದು. ೧೯೨೦ನೆಯ ಇಸ್ವಿಯಲ್ಲಿ ನಾನು ವಕೀಲಿ ಬಿಟ್ಟಬಳಿಕ, ಬೆಳಗಾವಿಯ ವೆಂಕಟರಾವ ಬೆಳವಿಯವರೂ ವಕೀಲಿ ಬಿಟ್ಟು ನನ್ನ ಕಡೆಗೆ ಬಂದರು. ಅವರ ಮನಸ್ಸಿನಲ್ಲಿ ನಾವಿಬ್ಬರೂ ಕೂಡಿ ಒಂದು ದೈನಿಕ ಪತ್ರವನ್ನು ದೊಡ್ಡ ಪ್ರಮಾಣದಲ್ಲಿ ತೆಗೆಯಬೇಕೆಂದಿತ್ತು ಅವರನ್ನು ನಾನು ನಮ್ಮ ಮನೆಯಲ್ಲಿ ಇಟ್ಟುಕೊಂಡೆ. ನಾವಿಬ್ಬರೂ ಅನೇಕ ಹಿರಿಯರನ್ನು ಭೆಟ್ಟಿಯಾದೆವು. ಒಂದು ಲಕ್ಷ ರೂಪಾಯಿಯ ಜಾಯಿಂಟಸ್ಟಾಕ್ ಕಂಪನಿ ತೆಗೆಯೋಣವೆಂದು ಅವರು ಸಲಹೆಕೊಟ್ಟರು. ಆಗ ತರುಣರಲ್ಲಿ ವಕೀಲಿಬಿಟ್ಟವರು ನಾವಿಬ್ಬರೇ ಇದ್ದ ಕಾರಣ, ಅರ್ಥಾತ್ ನಾವೇ ಸಂಪಾದಕರಾಗಬೇಕೆಂದು ಗೊತ್ತಾಯಿತು. ನಾವು ವಿಜಾಪುರ, ಬಾಗಲಕೋಟೆ, ಬೆಳಗಾಂವಿ ಮುಂತಾದ ಊರುಗಳಿಗೆ ಎಡ ತಾಕಿ ಡಾಯರೆಕ್ಟರರಾಗುವುದಕ್ಕೆ ಅನೇಕರ ಮನವೊಲಿಸಿದೆವು ೫೦೦ ರೂಪಾಯಿ ಕೊಟ್ಟು ಡಾಯರೆಕ್ಟರರಾಗುವುದಕ್ಕೆ ೧೦-೧೫ ಜನರು ಒಪ್ಪಿಕೊಂಡರು. ಕರಗುದರಿ ನಾರಾಯಣರಾಯರ ಮನೆಯಲ್ಲಿ ಮೊದಲನೆಯ ಸಭೆ ಕೂಡಿತ್ತು. ಆ ಸಭೆಗೆ

ಬೆಳವಿ ವೆಂಕಟರಾಯರ ತಂದೆಯವರಾದ ಬೆಳವಿ ದತ್ತರಾಯರೂ ಬಂದಿದ್ದರು ನಾವು ಸಿದ್ಧಪಡಿಸಿದ ನಿಯಮಗಳು ಮಂಜೂರಾದವು ದೈನಿಕ ಪತ್ರದ ಹೆಸರು "ಸಂಯುಕ್ತ ಕರ್ನಾಟಕ'ವೆಂದಿರಬೇಕೆಂದೂ ಜಾಯಿಂಟ ಸ್ಟಾಕ್ ಕಂಪನಿಯ ಹೆಸರೂ ಅದೇ ಇರಬೇಕೆಂದೂ ನಿಶ್ಚಿತವಾಯಿತು. ಬೆಳವಿ ದತ್ತರಾಯರೇ ಆ ಸಭೆಗೆ ಅಧ್ಯಕ್ಷರು ಅವರು ದೈನಿಕಪತ್ರಿಕೆಯ ವಿಷಯದಲ್ಲಿ ಅನೇಕ ಉಪಯುಕ್ತ ಸಲಹೆಗಳನ್ನು ಕೊಟ್ಟರು. ಎಲ್ಲವೂ ಮುಗಿದಬಳಿಕ ಡಾಯರೆಕ್ಟರರ ಯಾದಿಯಲ್ಲಿ ಯಾರ ಯಾರ ಹೆಸರುಗಳಿರಬೇಕೆಂಬ ಮಾತು ಹೊರಟಿತು ಎಲ್ಲ ಮನಸ್ಸಿನಲ್ಲಿ ಬೆಳವಿ ದತ್ತರಾಯರೇ ಮುಖ್ಯ ಡಾಯರೆಕ್ಟರರಾಗಬೇಕೆಂದು ಇತ್ತು ಏಕೆಂದರೆ,ಮಗನು ಬಿಟ್ಟಬಳಿಕ ಅವರೂ ವಕೀಲಿ ಬಿಟ್ಟಿದ್ದರು. ಕರಗುದರಿ ನಾರಾಯಣರಾಯರು ಕವಜಲಗಿ ಶ್ರೀನಿವಾಸರಾಯರೇ ಮುಂತಾದವರಾರೂ ವಕೀಲಿಬಿಟ್ಟಿದ್ದಿಲ್ಲ ಮತ್ತು ವಕೀಲಿಗೆ ಬಹಿಷ್ಕಾರ ಬಿದ್ದ ಆಗಿನ ದಿವಸಗಳಲ್ಲಿ,ವಕೀಲಿ ಬಿಡದಿದ್ದವರಿಗೆ ಮುಖಂಡತ್ವವನ್ನು ವಹಿಸುವ ಧೈರ್ಯವಿದ್ದಿಲ್ಲ ಆದರ ಬೆಳವಿ ದತ್ತರಾಯರು ಡಾಯರೆಕ್ಟರರಾಗಲಿಕ್ಕೆ ಒಪ್ಪಲಿಲ್ಲ ಅವರು ತಮ್ಮ ಸ್ಪಷ್ಟ ಸ್ವಭಾವದಂತೆ, ತಮ್ಮ ಮಗನಿಗೆ ತಾವು ಆ ಕಂಪನಿಯಲ್ಲಿ ಡಾಯರೆಕ್ಟರರಾಗುವುದಿಲ್ಲವೆಂದೇನೋ ಹೇಳುತ್ತ ಬಂದದ್ದು ನಿಜ. ಕವಜಲಗಿ ಶ್ರೀನಿವಾಸರಾಯರಿಗೆ ಮತ್ತು ದತ್ತರಾಯರ ಪರಮಮಿತ್ರರಾದ ಕರಗುದರಿ ನಾರಾಯಣರಾಯರಿಗೆ ತಮ್ಮ ವರ್ಚಸ್ಸಿನಿಂದ ಅವರ ಮನವೊಲಿಸಬಹುದೆಂಬ ಧೈರ್ಯವಿತ್ತು. ಆದರೆ, ಅವರು ಎಷ್ಟು ಹೇಳಿದರೂ ದತ್ತರಾಯರು ಒಪ್ಪಲಿಲ್ಲ ನನ್ನಮಗನನ್ನೇ ಕೊಟ್ಟಿದ್ದೇನೆ, ಅಷ್ಟು ಸಾಕು ಎಂದು ಅಂದರು.

ಡಾಯರೆಕ್ಟರರಾಗದಿದ್ದರೆ ಇಲ್ಲ, ಕೊನೆಗೆ ೫೦ ರೂಪಾಯಿಯ ದೊಂದು ಶೇರು ಕೊಂಡು ನೀವು ನಿಮ್ಮ ಹೆಸರನ್ನಾದರೂ ಕಂಪನಿಗೆ ಕೊಡಿರಿ ಎಂದು ಕವಜಲಗಿಯವರು ಬಹಳಪರಿಯಿಂದ ಹೇಳಿಕೊಂಡರು. ಮಗನಿಗೂ ತಂದೆಗೂ ತುಸು ವಾಗ್ವಾದವೂ ಆಯಿತು; ಆದರೂ ಅವರು ಒಪ್ಪಲಿಲ್ಲ ಅಲ್ಲಿಗೇ ಮುಗಿಯಿತು. ಮುಂದೆ ಗೋಳೀಬಾರಿನ ಪ್ರಕರಣವು ಎದ್ದಿತು ಆ ಕಾವೂ ಹೋಯಿತು ಆದರೆ ೧೦-೧೨ ವರ್ಷಗಳ ಮೇಲೆ ದಿವಾಕರರ ಪ್ರಯತ್ನದಿಂದ ಅದರ ಪುನರ್ಜನ್ಮವಾಗಿದೆ **ಪುನರ್ಜನ್ಮದಲ್ಲಿ ವಿಶ್ವಾಸವಿದ್ದವರು ಮರಣಕ್ಕೆ ಅಂಜುವ ಕಾರಣವೇ ಇಲ್ಲ.** ಇತ್ತ ಕರ್ನಾಟಕವು ದೈನಿಕ ಪತ್ರದ ಬಗ್ಗೆ ಜಾಯಿಂಟ ಸ್ಟಾಕ್ ಕಂಪನಿಯನ್ನು ತೆಗೆಯುವ ಪ್ರಯತ್ನದಲ್ಲಿದ್ದಾಗ ಅತ್ತ ಲೋಕಮಾನ್ಯವೆಂಬ ಮರಾಠೀ ದೈನಿಕಪತ್ರಕ್ಕೆ ದೇಶಪಾಂಡೆ ಗಂಗಾಧರರಾಯರು ವಿಜಾಪುರ ಮುಂತಾದ ಕಡೆಗೆ ಸಂಚಾರಮಾಡಿ ಅದಕ್ಕೆ ಶೇರುಗಳನ್ನು ಕೂಡಿಸಿಕೊಡುವುದರಲ್ಲಿ ತೊಡಗಿದ್ದರು.

**ನನ್ನ ಭಾರತ ವಾಚನಾಲಯದ ಸ್ಮೃತಿ** —ನಾನು ನನ್ನ ಜೀವನದಲ್ಲಿ ಮಾಡಿದ ಮತ್ತೊಂದು ಮಹತ್ವದ ಕಾರ್ಯವನ್ನು ಕುರಿತು ತುಸು ಹೇಳಿ ಮುಗಿಸಿಬಿಡುವೆ. ಅದೆಂದರೆ ಗ್ರಂಥ ಸಂಗ್ರಹದ ಮತ್ತು ನನ್ನ ಗ್ರಂಥಾಲಯವನ್ನು ದಾನಮಾಡಿದ ಕಾರ್ಯ. ಪುಸ್ತಕ ಕೊಳ್ಳುವುದೊಂದು ನನಗೆ ಹುಚ್ಚೇ ಇತ್ತು—ಇದೆ. ಆದರೆ, ಈಗ ಕೈಯಲ್ಲಿ ಹಣವೇ ಇಲ್ಲದ್ದರಿಂದ ಆ ಹುಚ್ಚು ತಾನಾಗಿಯೇ ಕಡಿಮೆ ಆಗಿದೆ ಈ ವಿಷಯದಲ್ಲಿ ಸಹ ನಾನು ಮುಂಚಿನಿಂದಲೂ ಒಂದು ಸ್ಪಷ್ಟವಾದ ಮತ್ತು ವಿಶಾಲವಾದ ಧ್ಯೇಯವನ್ನಿಟ್ಟುಕೊಂಡು ಮುಂದೆ ಸಾಗಿದ್ದೇನೆ. ನನ್ನ ಮುಖ್ಯ ಉದ್ದೇಶವು ಧಾರವಾಡದಲ್ಲಿ ಓದುವವರಿಗೆ

ಯಾವತ್ತು ಮಹತ್ವದ ಗ್ರಂಥಗಳು ದೊರೆಯಬೇಕೆಂಬುದು. ಅದಕ್ಕಾಗಿ ನಾನು, ಸ್ವಂತ ಸಾವಿರಾರು ಗ್ರಂಥಗಳನ್ನು ಕೊಂಡೆನು. ಕೆಲವು ಮಿತ್ರರಿಂದ ತಕ್ಕೊಂಡೆನು. ರಾಷ್ಟ್ರೀಯತ್ವಕ್ಕೆ ಬೇಕಾಗುವ ಮಹತ್ವದ ಯಾವತ್ತೂ ಗ್ರಂಥಗಳನ್ನು ಕೊಳ್ಳುವ ಕ್ರಮ ಇಟ್ಟೆನು ನನಗಿಂತ ಘಾಟಕ ಗುರುನಾಥರಾಯರಿಗೆ ಆ ಹುಚ್ಚು ಬಹಳ ಆವರೆ ನನ್ನೊಡನೆ ಅವರಿಗೆ ಸಂಪರ್ಕವಾಗುವವರೆಗೆ ಅವರು ಸಿಕ್ಕ ಸಿಕ್ಕ ಪುಸ್ತಕಗಳನ್ನು ತರಿಸುತ್ತಿದ್ದರು ನಾನು ಅವರಿಗೆ ವ್ಯವಸ್ಥಿತವಾಗಿ ಕೆಲವು ಗ್ರಂಥಗಳನ್ನು ಕೊಳ್ಳಲಿಕ್ಕೆ ಹಚ್ಚಿದೆ ಅವರು ನನಗಿಂತಲೂ ಶ್ರೀಮಂತರು ನನ್ನ ಗ್ರಂಥಾಲಯಕ್ಕೆ 'भारत पुस्तकालय' ಎಂದು ಹೆಸರಿಟ್ಟೆ ಅದಕ್ಕೆ ಶ್ರೀಕೃಷ್ಣನ ಮೂರ್ತಿಯ ಚಿತ್ರ. ಭಾರತ ಪುಸ್ತಕಾಲಯವೆಂಬ ಅಕ್ಷರಗಳನ್ನು ರಬರ್ ಸ್ಟ್ಯಾಂಪಿನಲ್ಲಿ ಬಾಲಬೋಧದಲ್ಲಿ ಬರೆಯಿಸಿದೆ ಅದಕ್ಕೆ ಕಾರಣ, ಆಗ ಏಕಲಿಪಿ ಪ್ರಚಾರದ ಕಲ್ಪನೆ ಜೋರಿನಲ್ಲಿತ್ತು. ನಾನು ವಕೀಲನಿದ್ದಾಗ ಒಂದು ಪ್ರಕಟನೆಯನ್ನು ಹೊರಡಿಸಿ, "**ಧಾರವಾಡದಲ್ಲಿಯ ಐದು ಜನರು ಹಿಂದುಸ್ಥಾನಕ್ಕೆ ಸಂಬಂಧಿಸಿದ ಯಾವುದೇ ಸಾಮಾನ್ಯ ವಿಷಯದ ಮೇಲೆ ಹೊರಟ ಗ್ರಂಥವನ್ನು ನನ್ನ ಹೆಸರಿನಿಂದ ವ್ಹಿ. ಪಿ. ಮಾಡಿ ತರಿಸಬಹುದು;** ಅವರು ನನ್ನ ಗ್ರಂಥಾಲಯಕ್ಕೆ ನಾಲ್ಕು ಆಣೆ ಕೊಟ್ಟು ಒಂದೇ ತಿಂಗಳು ಚಂದಾದಾರರು ಆದರೂ ಸಾಕು" ಎಂದು ಜಾಹೀರು ಮಾಡಿದೆ. ಇದರಿಂದ ಚಂದಾಹಣವೇನೂ ವಿಶೇಷ ಬರದಿದ್ದರೂ ಜನರಲ್ಲಿ ಓದುವ ಅಭಿರುಚಿ ಬೆಳೆಯಿತು. ಹೇಗಾದರೂ ನಾನು ಯಾವತ್ತು ಗ್ರಂಥಗಳನ್ನು ಓದುವ ಸಂಕಲ್ಪ ಮಾಡಿಯೇ ಇದ್ದೆ. ಕೆಲವು ವರ್ಷವರ್ಷಕ್ಕೆ ೩೦೦-

೪೦೦ ರೂಪಾಯಿಗಳ ಗ್ರಂಥಗಳನ್ನು ತರಿಸಿದೆ. ಹೀಗಾಗಿ ನನ್ನ ಹತ್ತಿರ ಯಾವತ್ತು ವಿಷಯಗಳ ಮೇಲಿನ ೨೦೦೦-೩೦೦೦ ಗ್ರಂಥಗಳು ಕೂಡಿಬಿದ್ದವು ಮತ್ತೊಂದು ವಿಶೇಷವೆಂದರೆ, ನಾನು ವಕೀಲನಿದ್ದಾಗ, ಅವಸರವಿರಲಿ, ಇರದಿರಲಿ, ದಿನಾಲು ಟಾಂಗೆಯಲ್ಲಿ ಕಚೇರಿಗೆ ಹೋಗುವ ಚಟ. ಅದನ್ನು ಬಿಗಿಹಿಡಿದೆ. ಅದರಿಂದ ನಿತ್ಯದಲ್ಲಿ ಉಳಿಸಿದ ಹಣವನ್ನು ನೇಮದಿಂದ ಪುಸ್ತಕಕ್ಕೆ ಹಾಕಿದೆ. ಇಲ್ಲಿಯ ಶಂಕರಾಚಾರ್ಯ ಸಂಸ್ಕೃತ ಪಾಠಶಾಲೆಗೆ ೧೦ ವರ್ಷ ಚೇರ ಮನ್ನನಾಗಿದ್ದಾಗ ಅಲ್ಲಿ ಯಾವತ್ತು ಸಂಸ್ಕೃತ ಗ್ರಂಥಗಳಿರ ಬೇಕೆಂದು ಸಂಕಲ್ಪಮಾಡಿ, ಅವನ್ನು ಆ ಸಂಸ್ಥೆಯಿಂದ ತರಿಸಿದೆ. ಕರ್ನಾಟಕ ವಿದ್ಯಾವರ್ಧಕ ಸಂಘದ ಮುಖಾಂತರವಾಗಿ ಯಾವತ್ತು ಕನ್ನಡ ಗ್ರಂಥಗಳನ್ನು ಸಂಗ್ರಹಿಸಲಿಕ್ಕೆ ಪ್ರಯತ್ನಿ ಸಿದೆ. ಲಿಂಗಾಯತ ಹಾಗು ರಡ್ಡಿ ಲಾಯಬ್ರರಿಯವರಿಗೆ ಯಾದಿ ಮಾಡಿಕೊಟ್ಟು, ಮಿಕ್ಕೆಲ್ಲಿಯೂ ಸಿಕ್ಕದ ಮಹತ್ವದ ಗ್ರಂಥಗಳನ್ನು ಅವರು ತರಿಸಬೇಕೆಂದು ಹೇಳಿದೆ. ಅಂತೂ, ಒಟ್ಟು ಧಾರವಾಡದಲ್ಲಿ ಯಾವ ಗ್ರಂಥದ ಕೊರತೆಯೂ ಬೀಳ ಬಾರದೆಂಬುದೇ ನನ್ನ ಉದ್ದೇಶ.

ಮುಂದೆ, ನಾನು ನನ್ನ ಗ್ರಂಥಾಲಯದ ಬಹುಶಃ ಯಾವತ್ತು ಗ್ರಂಥಗಳನ್ನು ದಾನವಾಗಿ ಕೊಟ್ಟುಬಿಟ್ಟಿರುವೆ. ಡಿಗ್ಬಿ, ಪೆಡ ರ್ಬರ್ನ್, ನವರೋಜಿ, ಸೇಪ್ಹಿನ್ಸನ್, ವುಯಿಲ್ಸನ್ ಮುಂತಾ ದವರು ರಚಿಸಿದ ದೊಡ್ಡದೊಡ್ಡ ಗ್ರಂಥಗಳನ್ನು ಕೊಂಡಿದ್ದೆ. ಹೋಮರೂಲ ಲೀಗಿಗೆ ನನ್ನ ರಾಜಕಾರಣದ ಅತ್ಯಂತ ಬೆಲೆ ಯುಳ್ಳ ೨೦೦-೨೫೦ ಗ್ರಂಥಗಳನ್ನು ಕೊಟ್ಟೆ. ಅವು ಮುಂದೆ ಕಾಂಗ್ರೆಸ್ಸಿನ ಕಡೆಗೆ ಹೋಗಿರಬೇಕೆಂದು ತೋರುತ್ತದೆ. ಕರ್ನಾ

ಟಕ ಇತಿಹಾಸ ಮಂಡಲಿಕ್ಕೆ ನನ್ನ ಐತಿಹಾಸಿಕ ಮಹತ್ವದ ಸುಮಾರು ೨೦೦ ಗ್ರಂಥಗಳನ್ನು ಕೊಟ್ಟೆ. ನಾನು ಅಧ್ಯಕ್ಷನಾಗಿದ್ದಾಗ ಶಾಂತೇಶವಾಚನಾಲಯದ ಉಪಯೋಗಕ್ಕೆಂದು ೧೪೦೦ ಗ್ರಂಥಗಳನ್ನು ಕಪಾಟುಗಳನ್ನೂ ಅಲ್ಲಿ ಇಟ್ಟೆ. ನನ್ನ ಗೀತೆಯು ಮತ್ತು ಕೆಲವು ಧಾರ್ಮಿಕ ಗ್ರಂಥಗಳನ್ನು ಮಾತ್ರ ಈಗ ಅಭ್ಯಾಸಕ್ಕೆ ಇಟ್ಟುಕೊಂಡಿರುವೆ. ಜಯಕರ್ನಾಟಕಕ್ಕೆ ಬಂದ ವಿನಿಮಯ ಗ್ರಂಥಗಳನ್ನೂ ಶಾಂತೇಶವಾಚನಾಲಯಕ್ಕೆ ಕೊಟ್ಟೆ. ನಮ್ಮ ತಂದೆಯವರ ಗ್ರಂಥಗಳನ್ನೂ ಅಲ್ಲಿಯೇ ಇಟ್ಟೆ.

**ಗ್ರಂಥಗಳ ಸಂಬಂಧದಿಂದ ನನ್ನ ಅವ್ಯವಸ್ಥೆ**—ಆದರೆ ನನ್ನ ಅವ್ಯವಸ್ಥೆಯನ್ನು ನಾನು ಹೇಳದೆ ಇರಲಾರೆ. ನನ್ನ ಮನೆಯಲ್ಲಿಯ ಗ್ರಂಥಗಳನ್ನು ಓದಲಿಕ್ಕೆ ಒಯ್ಯುವರು ತಾವಾಗಿಯೇ ತಂದುಕೊಟ್ಟ ಉದಾಹರಣೆಯನ್ನು ನಾನು ಒಂದೂ ಕಂಡಿಲ್ಲ. ಹೀಗಾಗಿ, ನನ್ನ ಅನೇಕ ಪುಸ್ತಕಗಳು ಚೆಲ್ಲಾಪಿಲ್ಲಿಯಾಗಿ ಒಯ್ದವರ ಮನೆಯಲ್ಲಿ ಬಿದ್ದುಹೋಗಿವೆ. ಸ್ವದೇಶೀ ಚಳವಳಿಯ ಕಾಲಕ್ಕೆ ಜಪ್ತಮಾಡಲ್ಪಡುವವೆಂಬ ಅಂಜಿಕೆಯಿಂದ ನೂರಾರು ಗ್ರಂಥಗಳು ಚದರಿಹೋದವು. ಮಹಾರಾಷ್ಟ್ರಭಾಷೋತ್ತೇಜಕಮಂಡಲವು ನಿಂತುಹೋದಾಗ, ಆ ಮಂಡಲವು ನನ್ನ ಕಡೆಗೆ ಬಂದಿತ್ತು. ನನ್ನ ಗ್ರಂಥಾಲಯಕ್ಕೆ ಅವನ್ನು ಕೂಡಿಸಿಕೊಂಡು ಅದನ್ನು ನಾನು ಕೆಲವು ವರ್ಷ ನಡಿಸಿದೆ. ಮುಂದೆ ಆ ಮಂಡಲದ ಪುನರುಜ್ಜೀವನವಾದಾಗ ಅವನ್ನು ತಿರುಗಿ ಕೊಟ್ಟುಬಿಟ್ಟೆ. ನಮ್ಮ ಜನರಲ್ಲಷ್ಟೇ ಈ ಅವ್ಯವಸ್ಥೆಯಿದೆಯೆಂತಲ್ಲ; ಸಾರ್ವಜನಿಕ ಸಂಸ್ಥೆಗಳ ಹಣೆಬರಹವೂ ಇದೇ. ನಾನು ಸಂಸ್ಥೆಗಳಿಗೆ ದಾನಮಾಡಿದ ಗ್ರಂಥಗಳಲ್ಲಿ ಎಷ್ಟು

ಕಳೆದುಹೋಗಿವೆಯೋ, ದೇವರೇ ಬಲ್ಲ ತಮ್ಮ ಗ್ರಂಥಗಳನ್ನು ಸಂಸ್ಥೆಗಾಗಿ ಬೇಡಲು ಧೈರ್ಯಮಾಡುವ ಪ್ರವೃತ್ತಿಯ ಉದಾರ ಬುದ್ಧಿಯ ಜನರಿಗೂ ನಮ್ಮಲ್ಲಿ ಕಡಿಮೆ ಇಲ್ಲ ಒಟ್ಟಿನಲ್ಲಿ, ನಾನು ನನ್ನ ಗ್ರಂಥಗಳ ದಾನವನ್ನು ಹೆಚ್ಚು ದಕ್ಷತೆ ಯಿಂದ ಮಾಡಬೇಕಾಗಿತ್ತು; ಮಾಡಲಿಲ್ಲ ಆದರೆ ಎಷ್ಟೋ ಅವ್ಯವಸ್ಥಿತವಾಗಿ ಹೋಗಿದ್ದರೂ ಯಾರಾದರೂ ಅವನ್ನು ಓದಲೇಬಹುದಲ್ಲವೆ? ಅಷ್ಟೇ ನನಗೆ ಸಂತೋಷ

ವಕೀಲನಿದ್ದಾಗ, ಕನ್ನಡ ಪತ್ರಿಕೆ ಮತ್ತು ಪುಸ್ತಕಗಳೆಲ್ಲ ವನ್ನೂ ಕೊಂಡುಕೊಳ್ಳಲೇಬೇಕೆಂದು ಸಂಕಲ್ಪಮಾಡಿದ್ದೆ. ಆಗ ಅವು ಬಹಳ ಹೊರಡುತ್ತಲೂ ಇರಲಿಲ್ಲ ಒಟ್ಟಿನ ಮೇಲೆ ಕೇವಲ ಕನ್ನಡಕ್ಕಾಗಿ ವರ್ಷಕ್ಕೆ ೧೫೦-೧೭೫ ರೂಪಾಯಿಗಳನ್ನು ವೆಚ್ಚಮಾಡಿದರೆ ಸಾಕಾಗುತ್ತಿತ್ತು ಕರ್ನಾಟಕವು ಮುಂದು ವರಿದಂಥ ಈಗಿನ ಕಾಲದಲ್ಲಿ ಕೂಡ, ಯಾವತ್ತು ಪತ್ರಿಕೆ- ಪುಸ್ತಕಗಳನ್ನು ಕೊಂಡುಕೊಳ್ಳುವೆವೆಂದು ಪ್ರತಿಜ್ಞೆಮಾಡಿದ ನೂರಾರು ವಾಚನಾಲಯಗಳು ಕೂಡ ಹೊರಡಬಾರದೋ? ತದ್ವಿರುದ್ಧವಾಗಿ ಕೇಂದ್ರಸಂಸ್ಥೆಗಳು ಕೂಡ ಕನ್ನಡ ಪತ್ರಿ ಗಳನ್ನು ಪುಸ್ತಕಗಳನ್ನು ಭಿಕ್ಷೆಬೇಡುವುದನ್ನು ನೋಡಿದರೆ ಅವುಗಳ ಬಗ್ಗೆ ಅನುಕಂಪ ಹುಟ್ಟದೆ ಇರಲಾರದು

**ವಾಚನಾಲಯಗಳ ಸಂಬಂಧವಾಗಿ ನನ್ನ ಚಳವಳಿ.**— ಸ್ವಂತ ನಾನು ನನ್ನ ಗ್ರಂಥಸಂಗ್ರಹವನ್ನು ಹೇಗೆ ಬೆಳೆಸಿವೆ ನೆಂಬುದನ್ನೂ ಧಾರವಾಡದಲ್ಲಿ ಒಟ್ಟಿಗೆ ಯಾವತ್ತೂ ಗ್ರಂಥ ಗಳನ್ನು ಸಂಗ್ರಹಿಸುವುದಕ್ಕೆ ಯಾವ ಯೋಜನೆ ಕೈಕೊಂಡಿದ್ದೆ ನೆಂಬುದನ್ನೂ ಹೇಳಿದೆ. ಅಲ್ಲದೆ, ಕರ್ನಾಟಕದಲ್ಲೆಲ್ಲ ವಾಚ ನಾಲಯಗಳ ಜಾಳಿಗೆಯನ್ನು ಹಬ್ಬಿಸಬೇಕೆಂದು ನನ್ನ ಇಚ್ಛೆ

ಇತ್ತು. ಕರ್ನಾಟಕಸಭೆಯು ಪತಿಯಿಂದ ಆ ಕಾರ್ಯಪ್ರಾರಂಭ ಮಾಡಿದೆ ಕೊಪ್ಪಳದ ಜಯರಾಮಾಚಾರ್ಯರನ್ನು ಕರ್ನಾಟಕದ ಕೆಲಸಕ್ಕೆ ಮೊಟ್ಟಮೊದಲಿಗೆ ಹೂಡಿ ವಾಚನಾಲಯಗಳನ್ನು ಸ್ಥಾಪಿಸುವುದಕ್ಕೆ ಅವರನ್ನು ಊರು ಊರಿಗೆ ಕಳುಹಿಸಿಕೊಟ್ಟಿ ಅವರು ಅನೇಕ ಕಡೆಗೆ ವಾಚನಾಲಯಗಳನ್ನು ಸ್ಥಾಪಿಸಿದರು ಮುಂದೆ ಕೆಲವು ಕಾರಣಗಳ ಮೂಲಕ ಅವರು ಆ ಚಳವಳಿಯನ್ನು ಬಿಡಬೇಕಾಯಿತು ಧಾರವಾಡದಲ್ಲಿ ವಾಚನಾಲಯಗಳ ಪರಿಷತ್ತು ಕರೆಯಲ್ಪಟ್ಟು ಅದರ ಮುಖಾಂತರ ಆ ಕಾರ್ಯ ಮುಂದುವರಿಸುವುದಕ್ಕೆ ಪ್ರಯತ್ನಪಟ್ಟಿ. ಅದು ಇನ್ನೂ ಸ್ಯಾಧ್ಯವಾಗಿಲ್ಲ. ವಾಚನಾಲಯಗಳು ರಾಜಕಾರಣ ಮತ್ತು ವಾಙ್ಮಯಗಳನ್ನು ಜೋಡಿಸುವ ಕೊಂಡಿಗಳು. ಅವು ಎಲ್ಲಿಡೆಗೂ ಸ್ಥಾಪಿತವಾದರೆ ಅಖಂಡ ಕರ್ನಾಟಕವು ನಿರ್ಮಾಣವಾಗುವುದಕ್ಕೆ ಸಹಾಯವಾಗುತ್ತದೆಂದು ನನ್ನ ಮತ. ಸಾಹಿತ್ಯಪರಿಷತ್ತು ಆ ಕಾರ್ಯವನ್ನು ಕೈಕೊಳ್ಳಬೇಕೆಂದು ಬಹಳ ಹವಣಿಸಿದೆ. ಗಡಿನಾಡುಗಳಲ್ಲಿ ವಾಙ್ಮಯ ಪ್ರಚಾರಕ್ಕೆ ಅವು ವಿಶೇಷವಾಗಿ ಬೇಕಾಗಿದ್ದವು. ಆದರೆ ಪರಿಷತ್ತಿಗೆ ಅವುಗಳ ಮಹತ್ವ ಇನ್ನೂ ಅರಿಕೆಯಾಗದ್ದರಿಂದ ಆ ಕೆಲಸ ಹಾಗೆಯೇ ಉಳಿದಿದೆ. ಮುಖಂಡರೆಲ್ಲರೂ ಕೂಡಿ ಕನ್ನಡ ಗ್ರಂಥಪತ್ರಿಕೆಗಳನ್ನು ಕೊಳ್ಳುವ ೧, ೨, ೩, ಹೀಗೆ ಮೂರು ವರ್ಗಗಳ ೫-೬ ನೂರು ಲಾಯಬ್ರರಿಗಳ ಜಾಳಿಗೆಯನ್ನು ಹೆಣೆದರೆ ಗ್ರಂಥಕರ್ತರ ಮತ್ತು ಪತ್ರಿಕಾಕರ್ತರ ಹಸಿವು ಹಿಂಗಲಿಕ್ಕಿಲ್ಲವೇ? ಇದೂ ಒಂದು ತರಹದ ವಾಙ್ಮಯ ಸೇವೆಯೇ ಆದ್ದರಿಂದ ಇವರ ಸ್ಮೃತಿಗಳನ್ನು ಇಲ್ಲಿಯೇ ಕೊಟ್ಟು ಮುಗಿಸಿರುವೆ.

೫ನೆಯ ಪ್ರಕರಣ

# ನನ್ನ ಐತಿಹಾಸಿಕ ಜೀವನ (೧೯೦೫-೧೯೩೭)

ನನ್ನ ವಾಙ್ಮಯ ಜೀವನವು ಒಂದಿಲ್ಲೊಂದು ರೂಪದಲ್ಲಿ ಇನ್ನೂ ನಡೆದೇ ಇರುವುದರಿಂದ ಅದಕ್ಕೆ ಕಾಲವನ್ನು ಕೊಡಲಿಲ್ಲ. ಐತಿಹಾಸಿಕ ಜೀವನವು ಬಹುಶಃ ನಿಲ್ಲಿಸಿದಂತಾಗಿದೆ. ಇದಕ್ಕೆ ಕಾಲವನ್ನು ಕೊಟ್ಟಿರುವೆ

**ನನ್ನ ಐತಿಹಾಸಿಕ ಜೀವನದ ಉಗಮ**—೧೯೦೫ ರಲ್ಲಿ ಆನೆಗೊಂದಿಯ ಆಕಸ್ಮಿಕ ದರ್ಶನದಿಂದ, ನನ್ನ ಜೀವನದಲ್ಲಿ ಐತಿಹಾಸಿಕ ನೆಲೆ ಒಡೆಯಿತೆಂಬುದನ್ನು ಹಿಂದೆ (ಪೂರ್ವರಂಗ ಪು ೧೧೫) ಹೇಳಿಯೇ ಇರುವೆ ೧೯೦೭ ರಲ್ಲಿ ನಾನು 'ವಾಗ್ಭೂಷಣ'ಕ್ಕೆ ಸಂಪಾದಕನಾದಾಗ, ಆ ನೆಲೆಯು ಒತ್ತರದಿಂದ ಪುಟಚಿಮ್ಮಲಾರಂಭಿಸಿತು. 'ಸಂಘ'ವು ೧೫ ವರ್ಷ ಅಸ್ತಿತ್ವದಲ್ಲಿದ್ದರೂ ಕನ್ನಡನಾಡಿನ ಅಭಿಮಾನ ಕೂಡ ಏಕೆ ಹುಟ್ಟಲಿಲ್ಲವೆಂಬುವನ್ನು ನಾನು ಯೋಚಿಸಿದಾಗ, ನಮ್ಮವರಲ್ಲಿ ತಮ್ಮ ಪೂರ್ವಜರ ಬಗ್ಗೆ ಇದ್ದ ತಿರಸ್ಕಾರಬುದ್ಧಿಯೇ ಕಾರಣವೆಂಬ ಮಾತು ನನಗೆ ಹೊಳೆಯಿತು ಅಲ್ಲಿಯವರೆಗೆ ಅದು ಯಾರ ಲಕ್ಷ್ಯದಲ್ಲಿಯೂ ಬಂದಿರಲಿಲ್ಲ ನನ್ನಲ್ಲಿ ಕೂಡ, ಆ ನಿರಭಿಮಾನದ ಛಾಯೆ ಇದ್ದೇ ಇತ್ತು ಶಾಲೆಯಲ್ಲಿ ನಾವು ಕಲಿತ ಇತಿಹಾಸದಲ್ಲಿ ಕರ್ನಾಟಕದ ಹೆಸರು ಶೂನ್ಯ. ಪರದಾಸ್ಯದಲ್ಲಿ ಸಿಕ್ಕಾಗಿನಿಂದ ಪ್ರಾರಂಭವಾದ ಇತಿಹಾಸ ಅದು. ನಡುವೆ, ವಿಜಯನಗರದ ಹೆಸರೇನೋ ಸ್ವಲ್ಪ ಬರುತ್ತಿತ್ತು. ಆದರೆ, ವಿಜಯನಗರದ ಅರಸರು ಅಚ್ಚಗನ್ನಡಿಗರೆಂಬ ಕಲ್ಪನೆ

ನವುಗಿರಲಿಲ್ಲ. ಮರಾಟರ ಕಾಲದಲ್ಲಿ ಕನ್ನಡಿಗರು ಅವರ ಆಡಳಿತಕ್ಕೆ ಒಳಪಟ್ಟ ಕಾರಣ, ನಮ್ಮ ದಾಸ್ಯ ಮನೋವೃತ್ತಿ ಬೆಳೆಯಿತು ನಾವು ಕಡಿಮೆಯವರು, ಮರಾಟರು ಮೇಲಿನವರು ಎಂಬ ಆತ್ಮಘಾತಕವಾದ ಭಾವನೆ ನಮ್ಮವರ ತಲೆಯಲ್ಲಿ ಬಲವಾಗಿ ಬೇರೂರಿತು. ಇಂಥ ಸ್ಥಿತಿಯಲ್ಲಿ, ಕನ್ನಡದ ಅಭಿಮಾನ ಬೆಳೆಯದಿದ್ದರೆ ಆಶ್ಚರ್ಯವೇನು? ಆದುದರಿಂದ, ನಾನು ಕೂಡಲೆ, ನಮಗೆ ಇತಿಹಾಸವೇನಾದರೂ ಉಂಟೋ ಎಂಬುದರ ಸಂಶೋಧನಕ್ಕೆ ಹತ್ತಿದೆ **ಮುಂಚೆ ಆತ್ಮ ವಿಕಾಸ, ಆ ಬಳಿಕ ಪ್ರಚಾರ** ಇದು ನನ್ನ ಮುಖ್ಯ ಪದ್ಧತಿ ನಮ್ಮ ವೈಭವವನ್ನು ಹುಡುಕುವುದು ತಿಪ್ಪೆಯೊಳಗಿಂದ ಮುತ್ತನ್ನು ಆರಿಸುವಷ್ಟು ಕಠಿನ ಕೆಲಸವಾಗಿತ್ತು ಇತಿಹಾಸಿಕ ಸ್ಥಳಗಳಿಗೆ ಪ್ರವಾಸ ಮತ್ತು ಶಿಲಾಲಿಪಿಗಳ ಅಭ್ಯಾಸ ಇವುಗಳಿಂದ ಆ ಕಾರ್ಯ ಸಾಧಿಸಿದೆ ಹಿಂದೆ ಹಿಂದೆ ಹೋದಂತೆ ನಮ್ಮ ವೈಭವವು ಹೆಚ್ಚು ಹೆಚ್ಚು ಉಜ್ವಲವಾಗಿತ್ತೆಂಬುದು ಗೊತ್ತಾಯಿತು ಹೀಗೆ ನಾನು ಗತವೈಭವದ ಯುಗವನ್ನು ಒಂದು ಸಾವಿರ ವರ್ಷ ಹಿಂದಕ್ಕೆ ಒಯ್ದೆ. ಅಂದರೆ, ನಮ್ಮ ಕನ್ನಡ ನಾಡು ಒಂದು ಸಾವಿರ ವರ್ಷದವರೆಗೆ ಅತ್ಯಂತ ಘನತೆಯಲ್ಲಿತ್ತೆಂಬುದನ್ನು ಕಂಡುಹಿಡಿದೆ ಎಲ್ಲ ಪ್ರಾಂತಗಳನ್ನೂ ಮೀರಿಸುವಷ್ಟು ನಮ್ಮ ವೈಭವವಿತ್ತೆಂಬುದನ್ನು ಕನ್ನಡಿಗರ ಮುಂದಿಟ್ಟೆ. ಇಷ್ಟು ಕೆಲಸವಾಗಲಿಕ್ಕೆ ೧೨ ವರುಷಗಳು ಹಿಡಿದವು

**ನನ್ನ ಐತಿಹಾಸಿಕ ಪ್ರವಾಸಗಳು.**—ಇವುಗಳಿಗೆ ನನ್ನ ಜೀವನದಲ್ಲಿ ಅತ್ಯಂತ ಮಹತ್ವದ ಸ್ಥಾನವಿದೆ ನಾನು ಮಾಡಿದಷ್ಟು ಪ್ರವಾಸವನ್ನು ಯಾವ ಖಾಸಗೀ ವ್ಯಕ್ತಿಯೂ ಮಾಡಿಲ್ಲ

ವೆಂದು ಹೆಮ್ಮೆಯಿಂದ ಹೇಳುವೆ ನನ್ನ ಸ್ಫೂರ್ತಿ ಬೆಳೆಯುತ್ತ ಹೋದುದು ಈ ಪ್ರವಾಸಗಳ ಮೂಲಕವೇ ಆ ಸ್ಥಳಗಳು ಕ್ಷೇತ್ರಗಳೆಂಬ ಭಕ್ತಿಭಾವನೆಯಿಂದ ಅವನ್ನು ಕೈಕೊಂಡೆ. ೧೯೦೭ ರಲ್ಲಿ ಶ್ರೀವಿದ್ಯಾರಣ್ಯರ ಚರಿತೆಯನ್ನು ಬರೆದು, ವಿದ್ಯಾರಣ್ಯರು ರಾಜಕಾರಣ ಧುರಂಧರರೆಂಬುದನ್ನು ಕನ್ನಡಿಗರ ಮುಂದಿಟ್ಟದ್ದೇ ನಾನು ಮಾಡಿದ ಮೊದಲಿನ ಮಹತ್ವದ ಕೆಲಸ. ಅದರ ಸಾಮುಗ್ರಿ ಸಿದ್ಧವಿತ್ತು. ನನಗೆ ಆ ಬಗ್ಗೆ ಶ್ರಮ ಬೀಳಲಿಲ್ಲ ಮುಂಚೆ, ನಮಗೆ ರಾಮದಾಸ ಶಿವಾಜಿ ಇವರದಷ್ಟೇ ಗೊತ್ತು. ಅವರನ್ನು ಎಲ್ಲ ವಿಧದಲ್ಲಿಯೂ ಮೀರಿಸುವ ಮಹಾಪುರುಷರು ನಮ್ಮಲ್ಲಿರುವರೆಂಬ ಕಲ್ಪನೆ ಕೂಡ ಕನ್ನಡಿಗರಿಗಿರಲಿಲ್ಲ. ಈ ಮರಾಠೀ ಮೋಹವನ್ನು ಕಳಚುವ ಕೆಲಸವನ್ನು ನನ್ನ ಹತ್ತಿರವೇ ಇದ್ದ ರಾಜಪುರೋಹಿತರು ಮುಂದುವರಿಸಿದರು. ಇತ್ತ, ನಾನು ನಮ್ಮ ವೈಭವದ ಮೂಲ ಉಗಮವನ್ನು ಹುಡುಕುವುದಕ್ಕೆ ಹತ್ತಿದೆ ೧೯೦೮-೯-೧೦ ರಲ್ಲಿ ರಾಷ್ಟ್ರೀಯ ಶಿಕ್ಷಣದಲ್ಲಿ ತೊಡಗಿದ್ದೆ. ಆಗ, ವಿಶೇಷ ಕೆಲಸವಾಗಲಿಲ್ಲ. ೧೯೧೦ ರಿಂದ ೧೯೧೭ ನೆಯ ಇಸ್ವಿಯವರೆಗೆ ನಾನು ಅಣ್ಣಿಗೇರಿ, ಲಕ್ಕುಂಡಿ, ಗುಡಿಗೇರಿ, ಲಕ್ಷ್ಮೇಶ್ವರ, ಹಳೇಬೀಡು, ಬೇಲೂರು, ಕಾರ್ಲೆ, ಕಾನ್ಹೇರಿ, ಬಂಕಾಪುರ, ಬಾದಾಮಿ, ಪಟ್ಟದಕಲ್ಲು, ಐಹೊಳೆ, ವೇರೂಳ ಮುಂತಾದ ಊರುಗಳಿಗೆ ಹೋಗಿ ಬಂದುದರ ಉಲ್ಲೇಖವು ನನ್ನ "ಗತವೈಭವ" ಗ್ರಂಥದ ಪ್ರಸ್ತಾವನೆಯಲ್ಲಿ ಬಂದೇ ಇದೆ. ಅನಂತರ, ಶ್ರವಣಬೆಳಗೊಳ, ಹಾಸನ, ಕಾರ್ಕಳ, ಕೈದಳ, ಚಿತ್ರದುರ್ಗ, ಮೂಡಬಿದರಿ, ಗೋವೆ, ಬನವಾಸಿ, ತುಮಕೂರು, ಮಳಖೇಡ, ಶೇಡಂ, ಎರಗೊಳ, ನಾಗಾವಿ, ಕೊಲ್ಹಾಪುರ, ಉಟಕಮುಂಡ

ಹೀಗೆ ೫೦-೬೦ ಊರುಗಳಿಗೆ ಹೋಗಿ ಬಂದಿರುವೆ ಇವೆಲ್ಲ ಪ್ರವಾಸಗಳಿಗಾಗಿ ನಾನು ಒಂದೊಂದು ಊರಿಗೆ ೩-೪ ಸಲ ಹೋಗಿ ಬಂದೆ ಬೇಲೂರು ಹಳೇಬೀಡುಗಳಿಗೆ ಬಾಣಾವರ ದಿಂದ ಬಂಡಿಯ ಮೇಲೆ ಹೋದೆ ಆಗ ಮೋಟಾರು ಇದ್ದಿಲ್ಲ ಕನಿಷ್ಠ ೧೫೦೦-೨೦೦೦ ರೂ ಖರ್ಚು ಮಾಡಿರಬಹುದು ಆದರೆ, ನಿಜವಾಗಿ ಹೇಳಬೇಕಾದರೆ, ಆ ಖರ್ಚಿನ ಹತ್ತು ಪಟ್ಟು, ಆ ಕ್ಷೇತ್ರಗಳಲ್ಲಿ ನನ್ನ ಮನೋವಿಕಾಸವಾಗಿದೆ ಪ್ರತಿಯೊಂದು ಪ್ರವಾಸದಲ್ಲಿ ಸಂಸ್ಮರಣೀಯ ಸಂಗತಿಗಳು ಸಂಭವಿಸಿವೆ ಆದರೆ, ಈ ಸ್ಮೃತಿಗ್ರಂಥ ಬೆಳೆಯುತ್ತ ನಡೆದಿರುವುದರಿಂದ, ನಾನು ಜೀವುಗಾಲುಗಳನ್ನಿಕ್ಕುತ್ತ ಸಾಗಿ ನನ್ನ ಸ್ಮೃತಿಗಳನ್ನು ಮುಗಿಸ ಬೇಕಾಗಿದೆ. ಆದಕಾರಣ ಬೋಧಪ್ರದವಾದ ಹಲವುಗಳನ್ನು ಮಾತ್ರವೇ ಕೊಡುವೆ

**ತಿರುಪತಿಯ ಪ್ರವಾಸ ಮತ್ತು ಕೃಷ್ಣದೇವರಾಯನ ಮೂರ್ತಿಯ ಶೋಧ**—೧೯೧೦ ನೆಯ ಇಸ್ವಿಯ ಕೊನೆಗೆ ನಾನು ತಿರುಪತಿ ಯಾತ್ರೆಗೆ ಹೋಗಿದ್ದೆ. ಅಲ್ಲಿ, ನಮ್ಮ ಇತಿ ಹಾಸವು ಸಿಗುವದೆಂದು ನನ್ನ ಕನಸುಮನಸಿನಲ್ಲಿರಲಿಲ್ಲ ಆ ಗುಡಿಯಲ್ಲಿ ಅಡ್ಡಾಡುವಾಗ ಒಂದು ಗಂಡುಮೂರ್ತಿಯೂ ಎಡ ಬಲಕ್ಕೆ ಎರಡು ಹೆಣ್ಣುಮೂರ್ತಿಗಳೂ ಕಣ್ಣಿಗೆ ಬಿದ್ದವು. ಸಹಜ ವಾಗಿ ನೋಡುತ್ತೇನೆ, ಆ ಮೂರ್ತಿಗಳ ಭುಜಗಳ ಮೇಲೆ ಕನ್ನಡ ಅಕ್ಷರ (ತೆಲುಗು ಅಲ್ಲ). ಕೃಷ್ಣದೇವರಾಯ ಮತ್ತು ಚಿನ್ನಂಬಾ ತಿರುಮಲಾಂಬಾ ಇವರ ಮೂರ್ತಿಗಳು ಅವು ! ಆ ಹೆಸರುಗಳು ಕನ್ನಡದಲ್ಲಿ! ಆಗ ನನಗಾದ ಆನಂದ ವರ್ಣಿಸುವುದ ಸಾಧ್ಯ ! ಐತಿಹಾಸಿಕ ಕ್ಷೇತ್ರಗಳ ಹುಚ್ಚು ಆಗ ನನಗೆ ಹಿಡಿ ಯಿತು.

**ಶ್ರೀವಿದ್ಯಾರಣ್ಯರ ಬಣ್ಣದ ಚಿತ್ರದ ಶೋಧ** — ನಾನು ಹಂಪಿಗೆ ೮-೯ ಸಲ ಹೋದೆ. ಮುಂಚೆ ನಾನು ಹೋದಾಗ ಅಲ್ಲಿಲ್ಲಿ ಮುಳ್ಳುಕಂಟೆಗಳು, ಈಗ ಕಂಡುಬರುವ ಅನೇಕ ಬೀದಿಗಳೂ ಗುಡಿಗಳೂ ಹೂತುಹೋಗಿದ್ದವು. ವಿದ್ಯಾರಣ್ಯರ ಮೂರ್ತಿ ಸಿಗಬಹುದೋ ಏನೋ ಎಂಬ ಬಗ್ಗೆ ಬಹಳ ಹುಡುಕಿದೆ. ಮೊದಲಿನ ೨-೩ ಪ್ರವಾಸಗಳಲ್ಲಿ ಅದು ಸಿಗಲಿಲ್ಲ. ವಿರೂಪಾಕ್ಷದೇವರ ಗುಡಿಯ ಹತ್ತಿರದ ವಿದ್ಯಾರಣ್ಯರ ಗುಡಿಯಲ್ಲಿರುವುದು ಪುರಾತನದ್ದಲ್ಲವೆಂದು ಕೇಳಿದೆ. ನಾಲ್ಕನೆಯ ಸಲ ೧೯೧೧ ರಲ್ಲಿ ಪ್ರವಾಸಮಾಡಿದಾಗ, ಅದೇ ವಿರೂಪಾಕ್ಷ ದೇವಾಲಯದಲ್ಲಿಯ ಸಭಾಮಂಟಪದಲ್ಲಿ ಮೇಲ್ಗಡೆಗೆ ಒಂದು ಭವ್ಯವಾದ ಚಿತ್ರಪಟ ಕಂಡೆ. ಪಲ್ಲಕ್ಕಿಯಲ್ಲಿ ಒಬ್ಬ ಸ್ವಾಮಿಗಳು, ಹಿಂದೆ ಅನೇಕ ಅರಸರು, ಕುದುರೆ ಕಾಲಾಳುಗಳು ಮುಂತಾದವರ ಪಟಾಲಂಬ ಅದು ಬಣ್ಣದ ಚಿತ್ರ. ವ್ಹಿಕ್ಟೋರಿಯಾ ಹಾಯಸ್ಕೂಲಿನ ಹುಡುಗರನ್ನೆಲ್ಲ ಕರಕೊಂಡು ಹೋಗಿ, ಆ ಚಿತ್ರದ ಫೋಟೋ ತಕ್ಕೊಂಡೆ. ಅದು ಚೆನ್ನಾಗಿ ಹೊರಟಿಲ್ಲ. ಬಣ್ಣದ ಮೇಲೆ ಧೂಳ ಕೂತು ಹೊಲಸಾಗಿದೆ. ವಿದ್ಯಾರ್ಥಿಗಳು ನನ್ನನ್ನು ಕೇಳದೆ ಧೂಳವನ್ನು ನೀರಿನಿಂದ ತೊಳೆಯಹತ್ತಿದರು. ಕೂಡಲೆ ನಾನು ನಿಲ್ಲಿಸಿದೆ. ಆ ಇಡೀ ಚಿತ್ರಪಟವೇ ಮಹತ್ವದ್ದಾಗಿದೆ. ಆ ಪಲ್ಲಕ್ಕಿಯೊಳಗೆ ಕುಳಿತುಕೊಂಡ ಸ್ವಾಮಿಗಳು ವಿದ್ಯಾರಣ್ಯರಿರಬೇಕೆಂದೂ ಹಿಂದಿನ ಅರಸರು ಹುಕ್ಕ-ಬುಕ್ಕರಿರಬೇಕೆಂದೂ ನನ್ನ ತರ್ಕ. ಆದರೆ, ಮೊನ್ನೆ ಮೊನ್ನೆ ಹೊಸಪೇಟೆಗೆ ಹೋದಾಗ, ಒಬ್ಬ ಸ್ಮಾರ್ತ ಪ್ರೊಫೆಸರರು (ಹೆಸರು ನೆನಪಿಲ್ಲ) ಸಭಾಮಂಟಪ ಕಟ್ಟಿಸಿದ ಕಾಲಕ್ಕೆ ಕೃಷ್ಣದೇವರಾಯನು ಅರಸನಾಗಿದ್ದ ಕಾರಣ, ಆ

ಚಿತ್ರವು ಶ್ರೀವ್ಯಾಸರಾಯರದಿರಬೇಕೆಂದು ಸೂಚಿಸಿದರು. ಸಂಶೋಧಕರು ಹೆಚ್ಚಿಗೆ ಸಂಶೋಧನ ಮಾಡಬೇಕು

**ಅಣ್ಣಿಗೇರಿ ಲಕ್ಕುಂಡಿಗಳ ಸ್ಮೃತಿ** — ೨೬-೮-೧೯೧೨ ನೆಯ ದಿವಸ, ಮುಂಬಯಿಯಿಂದ ಕಾವಸಜಿ ಉದಲಜಿ ಕೊತವಾಲ ಎಂಬೊಬ್ಬ ಪೋಸ್ಟಮಾಸ್ತರರ ಪತ್ರ ಬಂದಿತು. ತಮ್ಮಲ್ಲಿ ಕನ್ನಡ ಅಕ್ಷರಗಳುಳ್ಳ ಅನೇಕ ಹಳೆಯ ನಾಣ್ಯಗಳ ಸಂಗ್ರಹವಿದೆಯೆಂದೂ ಅವನ್ನು ಬೇಕಾದರೆ ಕೊಡುವೆವೆಂದೂ ತಿಳಿಸಿದ್ದರು. ಆದರೆ ನನಗೆ ಅವನ್ನು ತರಿಸಿಕೊಂಡು, ಸಂಶೋಧಿಸುವ ಸಾಮರ್ಥ್ಯವಿರಲಿಲ್ಲ. ಆದಕಾರಣ, ಮುಂದೆ ತರಿಸಿಕೊಳ್ಳುವೆ ಎಂದು ಉತ್ತರ ಬರೆದೆ ಧಾರವಾಡದ ಪತ್ತರ ಮುಗವದಲ್ಲಿ ಕೆಲವು ನಾಣ್ಯ ಸಿಕ್ಕಿದ್ದವು ಆ ಬಗ್ಗೆ ಕೆಲವರ ಮೇಲೆ ಟ್ರೆಝರಟ್ರೋವ್ಹ ಆಕ್ಟಿನ ಪ್ರಕಾರ ಖಟ್ಲೆ ನಡೆಯಿತು. ಕರಗುದರಿ ನಾರಾಯಣರಾಯರು ಸರಕಾರೀ ವಕೀಲರು. ಅವರು ಆ ನಾಣ್ಯ ತೋರಿಸಿದರು ರ್ಯಾಪ್‌ಸನ್‌ರ ನಾಣ್ಯದ ಗ್ರಂಥ ಕೊಂಡು ಓದಿ, ಅವು ಗಂಗರ ನಾಣ್ಯಗಳೆಂದು ಹೇಳಿದೆ. ಮುಂದೆ ಅವುಗಳ ಅವಸ್ಥೆ ಏನಾಯಿತೋ ಗೊತ್ತಿಲ್ಲ. ಈ ಸುಮಾರಕ್ಕೆ ನನಗೆ ಧಾರವಾಡ ಜಿಲ್ಹೆಯಲ್ಲೆಲ್ಲ ತಿರುಗಾಡಿ ಶಿಲಾಲಿಪಿ ಮುಂತಾದವುಗಳ ಸರ್ವೇ ಮಾಡಬೇಕೆಂದೆನಿಸಿತು ೨೯-೧೨-೧೯೧೨ ನೆಯ ದಿವಸ ಆ ಪ್ರಕಾರ ಸರ್ವೇ ಮಾಡಬೇಕೆಂದು ಗೊತ್ತುಮಾಡಿ ಅಣ್ಣಿಗೇರಿ, ಲಕ್ಕುಂಡಿ, ಮುಳಗುಂದ ಮುಂತಾದ ಊರುಗಳಿಗೆ ಹೋಗಿ ಬಂದೆ ಅಣ್ಣಿಗೇರಿಯಲ್ಲಿ ಕಲ್ಲಿನ ಒಂದು ಸುಂದರವಾದ ಆನೆ ಸಿಕ್ಕಿತು. ಆದರೆ, ಆ ಆನೆಯನ್ನು ಕಟ್ಟುವರಾರು? ಕೈಬಿಟ್ಟೆ. ಧಾರವಾಡದ ಕಲೆಕ್ಟರರು ಅವನ್ನು ಹೊತ್ತುಕೊಂಡು ಪರದೇಶಕ್ಕೆ ಎಲ್ಲಿಗೋ ಕಳಿ

ಸಿದರೆಂದು ಮುಂಪೆ ಕೇಳಿದೆ  ಲಕ್ಕುಂಡಿಯಲ್ಲಿ ಒಂದು ನಾಗರ ಹೆಡೆಯ ರತ್ನದುಂಗರ ಸಿಕ್ಕದ್ದನ್ನು ಒಬ್ಬರು ಹೇಳಿದರು  ಆದರೆ ಹೀಗೆ ಸಿಕ್ಕದ್ದನ್ನು ಇಟ್ಟುಕೊಳ್ಳಬಾರದೆಂದು ಅದನ್ನು ಶ್ರೀ ಶಂಕರಾಚಾರ್ಯರ ಮಠಕ್ಕೆ ಕೊಟ್ಟುಬಿಟ್ಟೆವಾಗಿಯೂ ಹೇಳಿದರು !

**ಕನ್ನಡಿಗರ ಭ್ರಮನಿರಸನದ ಸ್ಮೃತಿ**— ೧೯೧೩ ರಲ್ಲಿ ನಾನೂ ನರಗುಂದ ರಾಮರಾಯರೂ "ಕನ್ನಡಿಗರ ಭ್ರಮನಿರಸನ" ವೆಂಬ ಚಿಕ್ಕ ಹೊತ್ತಿಗೆ ಬರೆದವು  ಕಾರ್ಲೆ, ಕಾನ್ಹೇರಿ ಅಜಂತಾ, ವೇರೂಳ ಮುಂತಾದ ಹಿಂದುಸ್ಥಾನದಲ್ಲಿಯೇ ಅತ್ಯಂತ ಪ್ರಸಿದ್ಧವಾದ ದೇವಾಲಯವೇ ಮುಂತಾದವುಗಳನ್ನು ಕಟ್ಟಿಸಿದವರು ನಮ್ಮ ಕನ್ನಡಿಗರೇ ಎಂಬುದನ್ನು ಹೇಳುವುದೇ ಹೊತ್ತಿಗೆಯ ಉದ್ದೇಶ.

**ಟ್ರೇನಿಂಗ ಕಾಲೇಜದ ವಿದ್ಯಾರ್ಥಿಗಳಿಗೆ ಶಿಲಾಲಿಪಿ ಶಿಕ್ಷಣ:**— ೧೯೧೩ ರಲ್ಲಿ ವಿನಾಯಕರಾವ ಜೋಶಿ ಇವರು ಆ ಕಾಲೇಜದ ಪ್ರಿನ್ಸಿಪಾಲರು. ಅವರನ್ನು ಕೇಳಿಕೊಂಡು, ಟ್ರೇನಿಂಗ ಕಾಲೇಜದ ವಿದ್ಯಾರ್ಥಿಗಳನ್ನೆಲ್ಲ ನರೇಂದ್ರಕ್ಕೆ ಕರಕೊಂಡು ಹೋಗಿ, ಶಿಲಾಲಿಪಿ ತಕ್ಕೊಳ್ಳುವ ಕಲೆ ಕಲಿಸಿದೆ. ಏಕೆಂದರೆ, ಇಷ್ಟರಲ್ಲಿ, ಇತಿಹಾಸದ ಬಗ್ಗೆ ಕೆಲಮಟ್ಟಿಗೆ ನನ್ನದೂ ಭ್ರಮನಿರಸನವಾಗಿತ್ತು. ನಮ್ಮ ಇತಿಹಾಸವು ಶಿಲಾಲಿಪಿ ತಾಮ್ರಪಟಗಳಲ್ಲಿರುವ ಮೂಲಕ ನನ್ನಂಥ ಪಾಮರನ ಶಕ್ತಿಗೆ ಅದು ಮೀರಿದ್ದೆಂಬ ಅನುಭವವು ನನಗೆ ಬರಹತ್ತಿತ್ತು. ಒಬ್ಬನೇ ಹಣ ವೆಚ್ಚಮಾಡುವದೆಷ್ಟು ? ಆಗ, ನನಗೆ ಒಂದು ಯುಕ್ತಿ ತೋಚಿತು. ಲಿಪಿಗಳೆಲ್ಲವೂ ಕನ್ನಡದಲ್ಲಿ. ಅಂದಬಳಿಕ, ಕನ್ನಡ ಶಿಕ್ಷಕರಿಗೆ ಲಿಪಿಮುದ್ರಣ ಕಲೆ ಕಲಿಸಿಬಿಟ್ಟರೆ, ಹೇಗೂ ಅವರು

ಹಳ್ಳಿಗಳಲ್ಲಿ ವಾಸಮಾಡುವವರು, ಅವರು ಅಲ್ಲಿದ್ದ ನಾಲ್ಕೆಂಟು ಶಿಲಾಲಿಪಿಗಳ ಮುದ್ರಣವನ್ನು ಅನಾಯಾಸವಾಗಿ ತಕ್ಕೊಳ್ಳ ಬಹುದಲ್ಲವೇ ಎಂದೆನಿಸಿತು ಕಲಿಸಿದೆ. ಆದರೆ, ಮುಂದೆ ಟ್ರೇನಿಂಗ ಕಾಲೇಜನ್ನೇ ಸರಕಾರದವರು ನಿಲ್ಲಿಸಿಬಿಟ್ಟರು! ಆ ಕೆಲಸ ಅಲ್ಲಿಗೇ ಉಳಿಯಿತು

**ಸಾತಾರೆಯು ಸ್ಮೃತಿಯೂ ನಮ್ಮ ಇತಿಹಾಸವೂ :—** ೧೯೧೪ ರಲ್ಲಿ ಸಾತಾರೆಯ ರಾಜಕೀಯ ಪರಿಷತ್ತಿಗೆ ಹೋಗಿದ್ದೆ. ೨೯-೪-೧೯೧೪ ನೆಯ ದಿವಸ, ಫಣಸಳಕರ ವಕೀಲರೊಡನೆ ಅಲ್ಲಿಯ ಅಜಂತಾರಾ ಕಿಲ್ಲೆ ನೋಡಲಿಕ್ಕೆ ಏರಿದೆವು ಮಾತು ಮಾತಿನಲ್ಲಿ, ಆ ಕೋಟೆ ಮೂಲತಃ ಚಾಲುಕ್ಯರಿಂದ ಕಟ್ಟಿಸ ಲ್ಪಟ್ಟಿದ್ದೆಂದು ಅವರು ಅಂದರು ಕೂಡಲೆ, ನನ್ನ ಕಿವಿ ನಿಗುರಿ ದವು. ಆ ಶಿಲಾಲಿಪಿ ಸಿಗುವುದೋ ಏನೋ ಎಂದು ಮುಳ್ಳು ಕಂಟಿಯಲ್ಲಿ ಹುಡುಕಿದೆ ಸಿಗಲಿಲ್ಲ ಮರುದಿವಸ, ನಮಗೆಲ್ಲರಿಗೂ ಮಾವಿನತೋಪಿನಲ್ಲಿ ವಿಶೇಷ ಔತಣ ಮಾಡಿಸಿದ್ದರು. ಬೆಳವಿ, ಕವಜಲಗಿ, ಪುಣೆಯ ಕೇಳಕರ, ನಾವು ಅಲ್ಲಿಗೆ ಹೋದೆವು ದಾರಿಯಲ್ಲಿ ಯವತೇಶ್ವರವೆಂಬ ಗುಡಿ ಹತ್ತಿತು ಅದನ್ನು ನೋಡಿದೊಡನೆ, ಅದು ಚಾಲುಕ್ಯರ ಕಟ್ಟಿನ ಗುಡಿಯೆಂದು ನನಗೆ ಗೊತ್ತಾಯಿತು. ಶಿಲಾಲಿಪಿ ಹುಡುಕಿದೆ. ಸಿಗಲಿಲ್ಲ. ಊಟವಾದ ಬಳಿಕ, ತೋಪಿನಲ್ಲಿ ಅಡ್ಡಾಗಿದ್ದೆವು. ಮುದವೇಡೆ ವೆಂಕಟರಾಯರಿಗೆ ಅಲ್ಲಿಯೇ ಹತ್ತರ ವೀರಗಲ್ಲೊಂದು ದೃಷ್ಟಿಗೆ ಬಿತ್ತು. ಅವರು ಆನಂದದಿಂದ ನನ್ನನ್ನು ಕೂಗಿ, ಅದನ್ನು ತೋರಿಸಿದರು. ಕೇಳಕರರಿಗೆ ಈ ವೀರಗಲ್ಲುಗಳ ಕಲ್ಪನೆ ಇರ ಲಿಲ್ಲ. ಅವರು ಅದನ್ನು ನೋಡಿ, 'ಇದಕೇಕೆ ಇಷ್ಟು ಆನಂದ.?

ಇಂಥವು ನಮ್ಮದೇಶದಲ್ಲಿ ನೂರಾರು ಬಿದ್ದಿವೆ' ಎಂದು ಅಂದರು ಆವರಿಗೆ ನಾನು ಅವುಗಳ ಮಹತ್ವ ತಿಳಿಸಿಕೊಟ್ಟೆ

**ಡೆಕ್ಕನ ಕಾಲೇಜಿನಲ್ಲಿ ನನ್ನ ಉಪನ್ಯಾಸ** — ೧೯೧೪ ರಲ್ಲಿ ಡೆಕ್ಕನ ಕಾಲೇಜದಿಂದ ನನಗೆ ಉಪನ್ಯಾಸ ಕೊಡಲಿಕ್ಕೆ ಕರೆಬಂದಿತು ನನ್ನ ಇತಿಹಾಸದ ಅಭ್ಯಾಸವು ಆರಗಚ್ಚಾಗಿತ್ತು. ಆದರೂ ಅದನ್ನೇ ಹೇಳಬೇಕೆಂದು ನಿರ್ಧರಿಸಿದೆ ೩-೮ ೧೯೧೪ ನೆಯ ಇಪ್ಪಿಯ ದಿವಸ ಆ ಕಾಲೇಜಿನಲ್ಲಿ "Pa t Glory of Karnatak " ( ಕರ್ನಾಟಕ ಗತವೈಭವ ) ಎಂಬ ವಿಷಯದ ಮೇಲೆ ಪ್ರೊ ರಾಕೂರ ಎಂಬವರ ಅಧ್ಯಕ್ಷತೆಯಲ್ಲಿ ಇಂಗ್ಲಿಷಿನಲ್ಲಿ ನನ್ನ ಉಪನ್ಯಾಸವಾಯಿತು ನನ್ನ ಅಪೇಕ್ಷೆ ಮೀರಿ, ಕನ್ನಡ ವಿದ್ಯಾರ್ಥಿಗಳಲ್ಲಿ ಸ್ಫೂರ್ತಿಹುಟ್ಟಿತು. ಆ ವಿದ್ಯಾರ್ಥಿಗಳು ಗ್ರಂಥಗಳನ್ನು ಕೊಳ್ಳುವುದಕ್ಕೆಂದು ನನಗೆ ೧೦೦ ರೂ ಸಮರ್ಪಿಸಿದರು. ಈ ಸಂಧಿಯನ್ನು ಸಾಧಿಸಿ, ನಾನು ಮುಂದೆ ದಸರೆಯ ದಿವಸ ಇತಿಹಾಸಮಂಡಳ ಸ್ಥಾಪಿಸಿದೆ

**ಕರ್ನಾಟಕ ಇತಿಹಾಸಮಂಡಳದ ಸ್ಥಾಪನೆ** — ಕರ್ನಾಟಕ ಇತಿಹಾಸ ಮಂಡಳದ ಸ್ಥಾಪನೆಗೆ ನನ್ನನ್ನು ಪ್ರೇರಿಸಿದವರು, ರುಕ್ಮಾಂಗದ ದೇಶಪಾಂಡೆ, ಆಸುಂಡಿ, ಡಂಬಳ, ಆಲಬಾಲ, ಕಂಕಣವಾಡಿ, ಸಿದ್ಧಾಂತಿ, ಸಾಲಿ, ಮೋಹರೆ ಮುಂತಾದವರು. ಮೋಹರೆ ಹಣಮಂತರಾಯರು ಹಿಪ್ಪರಿಗಿಯಲ್ಲಿ ಒಂದು ಶಾಖೆಯನ್ನು ಕೂಡ ಸ್ಥಾಪಿಸಿದ್ದರು ಡೆಕ್ಕನ ಕಾಲೇಜದಿಂದ ಬಂದ ಬಳಿಕ, ಆ ವಿದ್ಯಾರ್ಥಿಗಳು ಕೊಟ್ಟ ೧೦೦ ರೂ. ಗಳನ್ನು ನಾನೊಬ್ಬನೇ ತಕ್ಕೊಳ್ಳುವುದಕ್ಕಿಂತ, ಚಿಕ್ಕದೇ ಏಕಾಗಲೊಲ್ಲದು, ಒಂದು ಸಂಸ್ಥೆ ಸ್ಥಾಪಿಸಬೇಕೆಂದು ಇಚ್ಛಿಸಿದೆ. ಆದಕ್ಕೆ ಪೂರ್ವದಲ್ಲಿ, ನಾನು ಪುಣೆಯ ಭಾರತ ಇತಿ

ಹಾಸ ಸಂಶೋಧನ ಮಂಡಳಕ್ಕೆ ಸದಸ್ಯನಾಗಿದ್ದೆ. ಸರದಾರ ಮುಜುಮುದಾರ ಎಂಬ ಶ್ರೀಮಂತರು ಅದರ ಮುಖ್ಯ ಚಾಲಕರು ಅವರು ಅತ್ಯಂತ ಇತಿಹಾಸ ಪ್ರೇಮಿಗಳು. ಅವರೊಡನೆ ಸ್ನೇಹ ಮಾಡಿಕೊಂಡೆ. ಹೆಸರು 'ಭಾರತ ಇತಿಹಾಸ' ವೆಂದಿರುವುದರಿಂದ, ಅಲ್ಲಿ ಸದಸ್ಯನಾಗಿದ್ದು, ನನ್ನ ಕರ್ನಾಟಕ ಇತಿಹಾಸವನ್ನು ಅಭ್ಯಾಸ ಮಾಡಲಿಕ್ಕೆ ಆಸ್ಪದ ಸಿಗಬಹುದೋ ಎಂದು ಕೇಳಿದೆ. ಅವರು ಸದ್ಯಕ್ಕೆ ಮಹಾರಾಷ್ಟ್ರದ ಇತಿಹಾಸವನ್ನಷ್ಟೇ ಅಭ್ಯಾಸಮಾಡುವ ಕ್ರಮ ಇಟ್ಟುಕೊಂಡಿರುವೆವೆಂದು ಹೇಳಿದರು ಡೆಕ್ಕನ ಕಾಲೇಜಕ್ಕೆ ಉಪನ್ಯಾಸ ಕೊಡುವ ಪದ್ಧತಿ ಮಾಡುವ ಕಾಲಕ್ಕೆ ಮಹಾರಾಷ್ಟ್ರ ದೇಶದ ಮೇಲೆ ಕನ್ನಡಿಗರೇ ೭೦೦-೮೦೦ ವರ್ಷ ಆಳಿದರೆಂಬ ಮಾತನ್ನು ನಾನು ಕಂಡುಹಿಡಿದಿದ್ದೆ ಆದಕಾರಣ, ಮುಜುಮುದಾರರಿಗೆ, ಮಹಾರಾಷ್ಟ್ರದ ಸಂಪೂರ್ಣ ಇತಿಹಾಸವನ್ನು ಅರಿಯಬೇಕಾದರೆ, ಬರೆಯಬೇಕಾದರೆ ಕರ್ನಾಟಕದ ಇತಿಹಾಸವು ಬೇಕೇಬೇಕೆಂಬ ಸಂಗತಿ ಮನದಟ್ಟು ಮಾಡಿಕೊಟ್ಟೆ ಆದರೆ, ತಮ್ಮ ಸಂಸ್ಥೆ ಕೇವಲ ಮರಾಠೀ ಜನರು ಆಳಹತ್ತಿದ್ದ ಕಾಲದ ಇತಿಹಾಸವನ್ನೇ ಸಂಶೋಧಿಸುವುದು ಎಂದು ಹೇಳಿದರು ಆಗಿನಿಂದ, ನಿರುಪಾಯವಾಗಿ, ನಮ್ಮದೊಂದು ಸಂಸ್ಥೆ ಪ್ರತ್ಯೇಕ ಬೇಕೇಬೇಕು ಎಂದೆನಿಸುತ್ತಿತ್ತು ಮೇಲೆ ಹೇಳಿದಂತೆ, ವಿದ್ಯಾರ್ಥಿಗಳು ಫಂಡು ಕೊಟ್ಟ ಕೂಡಲೆ, ನಾನು ೧೯೧೪ ನೆಯ ಇಸ್ವಿಯಲ್ಲಿ ದಸರೆಯ ದಿವಸ ಮಂಡಳ ಸ್ಥಾಪಿಸಿದೆ. ನಾನು ಆಜೀವ ಸಭಾಸದನಾದೆ. ನಾನೊಬ್ಬನೇ ಅಭ್ಯಾಸಮಾಡುವುದಕ್ಕಿಂತ, ವಿದ್ಯಾರ್ಥಿಗಳಿಗೂ ಅಭ್ಯಾಸ ಮಾಡಲು ಹಚ್ಚಬೇಕೆಂದೂ ನನ್ನ ಉದ್ದೇಶವಿತ್ತು. ಹಾಗೆ ಹಚ್ಚಿದೆ. ಪ್ರಥಮಕಾರ್ಯದರ್ಶಿ

ಗಳಾದ ರುಕ್ಮಾಂಗದ ದೇಶಪಾಂಡೆ ಮತ್ತು ಮುಂದೆ ಕಾರ್ಯ ದರ್ಶಿಗಳಾದ ದತ್ತಾತ್ರಯ ಕರಮರಕರ ಇವರು ಮುಂಬಯಿ ವಿಶ್ವವಿದ್ಯಾಲಯದಿಂದ ಸಂಶೋಧನ ಪಾರಿತೋಷಕ ದೊರಕಿ ಸಿದರು. ದತ್ತಾತ್ರಯ ಕರಮರಕರ ಇವನು ಈಗಲೂ ಆ ಮಂಡಳದ ಚಾಲಕನಾಗಿರುವನು **ಭಿನ್ನಭಿನ್ನ ಸಂಸ್ಥೆಗಳ ಘಟನೆಗಳು ಆಯಾ ಉದ್ದೇಶಗಳಿಗೆ ತಕ್ಕಂತೆ ಭಿನ್ನಭಿನ್ನ ವಾಗಿರಬೇಕೆಂದು** ನನ್ನ ಮತ. ಇತಿಹಾಸ ಮಂಡಳವು ಮೂಲತಃ ಅಭ್ಯಾಸ ಮಂಡಳ. ಆಗಿನ ಕಾಲಕ್ಕೆ ಇಂಥ ನೀರಸ ವಾದ ವಿಷಯಕ್ಕೆ ಯಾರೂ ಫಂಡು ಕೊಡುತ್ತಿರಲಿಲ್ಲ ಆದ ಕಾರಣ, ಆ ಸಂಸ್ಥೆಯನ್ನು ಪಂಚರ ಆಡಳಿತದಲ್ಲಿ ನಡಿಸಿದೆ. ನಾನು ಅಧ್ಯಕ್ಷನು ಅಂದರೆ ಸರಪಂಚನು. ೧೬ ವರ್ಷ ಅದು ನನ್ನ ಅಧ್ಯಕ್ಷತೆಯಲ್ಲಿ ನಡೆಯಿತು ಸದಸ್ಯರೇನೋ ನೂರಾರು ಮಂದಿ ಇದ್ದರು ರಾಜಪುರೋಹಿತರನ್ನು ಕರಿಸಿಕೊಂಡು ಅವ ರನ್ನು ಪಂಚರಲ್ಲಿ ಹಾಕಿಕೊಂಡೆ. ೪-೬ ವರ್ಷ ಮಾತ್ರ ಅವರು ಮೈಸೂರಿನಲ್ಲಿ ಬೇರೆ ಕೆಲಸದಲ್ಲಿ ತೊಡಗಿದ್ದರು. ಆದರೆ ಇತ್ತೀ ಚಿಗೆ ಅವರು ಕೇವಲ ಸಂಶೋಧನದಲ್ಲಿಯೇ ಹೇಗೆ ತಮ್ಮ ಆಯುಷ್ಯ ಹಾಕುತ್ತಿರುವರೆಂಬುದು ಎಲ್ಲರಿಗೂ ಗೊತ್ತಿದೆ. ೧೯೩೦ ರ ಸುಮಾರಕ್ಕೆ ಆ ಸಂಸ್ಥೆ ಬೆಳಿಸಬೇಕೆಂದು ಹಲವರು ಬಯಸಿದರು. ಅಧ್ಯಕ್ಷ ಪದವಿಯನ್ನು ಒಬ್ಬ ಶ್ರೀಮಂತರಿಗೆ ಕೊಡಬೇಕೆಂದು ಯೋಚಿಸಿದರು. ನಾನು ಅಧ್ಯಕ್ಷಪದವಿ ಬಿಡು ವೆನೋ ಇಲ್ಲವೋ ಎಂದು ಒಬ್ಬ ದೇಶಭಕ್ತರಿಗೆ ಸಂದೇಹ! ಅದು ನನ್ನ ಕಿವಿಗೆ ಬಿತ್ತು. ಕೆಲವು ದೇಶಭಕ್ತರಿಗೆ ಅಧಿಕಾರದ ಹಂಬಲ! ನನಗೇನೂ ಅದರ ಹಂಬಲವಿಲ್ಲ. ಶ್ರೀರಾಮನು ಇಡೀ ರಾಜ್ಯವನ್ನೇ ವಸ್ತ್ರದ ತುದಿಗೆ ಹತ್ತಿದ ಹುಲ್ಲುಕಡ್ಡಿಯಂತೆ

( ರಾಜ್ಯಂ ಯೇನ ಪಟಾಂತಲಗ್ನತೃಣಕಂ, ತ್ಯಕ್ತಂ ಗುರೋಃ ರಾಜ್ಞಯಾ ) ಬಿಸುಟಿದನಂತೆ ನಾನು ಈ ಕ್ಷುಲ್ಲಕ ಪದವಿಯನ್ನು ಒಗೆಯಬಾರದೇ ಎಂದು ಅಂದೆ ಮತ್ತು, ಮತ್ತಾವ ಉದ್ದೇಶದಿಂದಲ್ಲದಿದ್ದರೂ, ಕೇವಲ ಆತ್ಮಸಂಯಮನ ಕಲಿಯುವುದಕ್ಕಾಗಿಯಾದರೂ ಅಧ್ಯಕ್ಷಪದವಿ ಬಿಡುವೆನೆಂದು ಹೇಳಿದೆ ಆದರೆ, ಆ ಸಂಸ್ಥೆಯಲ್ಲಿದ್ದುಕೊಂಡೇ ಅನೇಕವರ್ಷ ಕೆಲಸ ಮಾಡಿದೆ ಪ್ರಾಚೀನ ಕರ್ನಾಟಕವೆಂಬ ಆ ಸಂಸ್ಥೆಯ ಪತ್ರಿಕೆ ಅವರ ಕೈಕೆಳಗೆ ನಡಿಸಿದೆ ಅಧ್ಯಕ್ಷಪದವಿಯು ಇನ್ನೂ ತೆರವೇ ಇದೆ ಸಂಸ್ಥೆಯು ಯಾರನ್ನೂ ಇನ್ನೂ ನೇಮಿಸಿರುವುದಿಲ್ಲ.

**ಮುಂಬಯಿ ಹತ್ತರಿರುವ ಕಾರ್ಲೆ ಕಾನ್ಹೇರಿ ಗುಹೆಗಳ ಸ್ಮೃತಿ.**— ಪುಣೆಯ ಹತ್ತಿರುವ ಕಾರ್ಲೆಯ ಅತ್ಯಂತ ಸುಂದರವೂ ಭವ್ಯವೂ ಆದ ಚೈತ್ಯಾಲಯವನ್ನು ಬನವಾಸಿಯ ಒಬ್ಬ ಶೆಟ್ಟಿಯು ಕಟ್ಟಿಸಿದನೆಂದು ಹುಡುಕಿತೆಗೆದೆ ಕೂಡಲೆ, ಕಾರ್ಲೆಗೆ ಹೋಗಿ ಅದನ್ನು ನೋಡಿ ಬಂದೆ ಪುಣೆಯ ಹತ್ತರ 'ಕೆಂದೂರ' ಎಂಬ ಗ್ರಾಮವಿದೆಯೆಂದು ಕೇಳಿದೆ ಅದು ಕನ್ನಡ ಹೆಸರು ಕೂಡಲೆ ಶ್ರೀಮಂತ ಮುಜುಮುದಾರರ ಮುಖಾಂತರವಾಗಿ ಮಹಾರಾಷ್ಟ್ರದ ಎಲ್ಲಾ ಜಿಲ್ಹೆಗಳ ನಕಾಶಗಳನ್ನು ಕೊಂಡುಕೊಂಡು, ಅವುಗಳ ಮೇಲಿಂದ, ಮಹಾರಾಷ್ಟ್ರದಲ್ಲಿಯ ನೂರಾರು ಹಳ್ಳಿಗಳ ಹೆಸರುಗಳು ಕನ್ನಡ 'ಹೆಸರುಗಳೆಂಬುದನ್ನು ಕಂಡುಹಿಡಿದೆ. ೮-೫-೧೯ಗಳ ನೆಯ ಇಸ್ವಿಯ ದಿವಸ ನಾನೂ ಮುದವೇಡೆಕರ ವೆಂಕಟರಾಯರೂ ಮುಂಬಯಿ ಸಮೀಪಕ್ಕೆ ಬೋರವಲ ಸ್ಟೇಶನ್ನದಿಂದ ೪-೫ ಮೈಲು ದೂರ ಕಾಡಿನಲ್ಲಿರುವ ಕಾನ್ಹೇರಿ ಗುಹೆಗಳನ್ನು ನೋಡಲಿಕ್ಕೆ ಹೋದೆವು.

ಅವು ಶಿಲಾಹಾರ ಅರಸರಿಂದ ಕೊರೆಯಲ್ಪಟ್ಟವುಗಳು ಗುಡ್ಡ ಗುಡ್ಡ ತಿರುಗಾಡಿ ಅವನ್ನು ನೋಡಿಬಂದೆವು

**ಬಾದಾಮಿ ಪಟ್ಟದಕಲ್ಲು ಐಹೊಳೆಗಳಿಗೆ ಪ್ರವಾಸ .**— ೧೯೧೫-೧೬ ನೆಯ ಇಸ್ವಿಯ ಸುಮಾರಕ್ಕೆ ನಾನೂ ಕಡಪಾ ರಾಘವೇಂದ್ರರಾಯರೇ ಮುಂತಾದವರೂ ಕೂಡಿ ಬಾದಾಮಿ ಮುಂತಾದ ಊರುಗಳಿಗೆ ಪ್ರವಾಸ ಮಾಡಿದವು ಕಡಪಾ ರಾಘವೇಂದ್ರರಾಯರು ನನ್ನ ಸಹಪಾಠಿಗಳಲ್ಲಿ ಮತ್ತು ನನ್ನ ಮನೆಯ ಮುಂದೆಯೇ ಇದ್ದರೂ, ಅವರಲ್ಲಿ ಆಗ ಇನ್ನೂ ಕರ್ನಾಟಕದ ಅಭಿಮಾನವು ಉದಯವಾಗಿದ್ದಿಲ್ಲ ಆದರೆ ಮಿತ್ರರೆಂದು ಅನೇಕ ಕಡೆಗೆ ನನ್ನೊಡನೆ ಬರುತ್ತಿದ್ದರು ಕೆ. ಎನ್. ದೀಕ್ಷಿತ ( ಹಿಂದುಸ್ಥಾನದ ಆರ್ಕಿಯಾಲಾಜಿಕಲ್ ಖಾತೆಗೆ ಈಗ ಅವರು ಮುಖ್ಯಾಧಿಕಾರಿಗಳಾಗಿದ್ದಾರೆ ) ಇವರನ್ನು ಗುಡಿಗೇರಿ ಲಕ್ಷ್ಮೇಶ್ವರ ಮುಂತಾದವುಗಳನ್ನು ತೋರಿಸಲಿಕ್ಕೆ ನಾನು ಕರಕೊಂಡು ಹೋದಾಗ ಕೂಡ, ಕಡಪಾ ರಾಘವೇಂದ್ರರಾಯರು ಇದ್ದೇ ಇದ್ದರು ಕೆ. ಎನ್. ದೀಕ್ಷಿತರು ಸಂಶೋಧನದಲ್ಲಿ ತನ್ಮಯರು. ಆ ರಾಘವೇಂದ್ರರಾಯರಿಗೆ ಮಾತ್ರ ಅದೊಂದು ವಿನೋದದ ವಿಷಯವಾಗಿತ್ತು. ಇರಲಿ. ಬಾದಾಮಿಯಿಂದ ಪಟ್ಟದಕಲ್ಲು ಐಹೊಳೆಗಳಿಗೆ ನಾವು ಬಂಡಿಯಲ್ಲಿ ಪ್ರವಾಸ ಮಾಡಿದೆವು. ಆ ಹಾದಿಯಲ್ಲಿ ತುಂಬಾ ಗುಂಡಗಲ್ಲುಗಳು. ನಮ್ಮ ಚಕ್ಕಡಿ, ಸೆರೆಕುಡಿದವರಂತೆ, ಒಗ್ಗಾಲಿಯಾಗುತ್ತ ಹೋಗಬೇಕಾಗಿತ್ತು. ಕಲ್ಲುದುಂಡೆಗಳಿಗೆ ತಾಕಿ " ಖಡಲ್ ಫಡಲ್ " ಎಂಬ ಸಪ್ಪಳದಲ್ಲಿಯೇ ಸಾಗಿತ್ತು. ಅದಕ್ಕೆ ರಾಘವೇಂದ್ರರಾಯರು ಬೇಸತ್ತರು. ಐಹೊಳೆ ಮುಂತಾದವುಗಳಲ್ಲಿಯ ಸುಂದರವಾದ ಮೂರ್ತಿಗಳನ್ನು ನೋಡಿ ಅವರಿಗೆ

ಆನಂದವೇನೋ ಆಯಿತು ಆದರೆ, ಹೀಗೆ ಅಡವೀಚಿಂಚಿಯ ರಂತೆ ಅಲೆದಾಡುತ್ತ ಹೋಗುವುದರಲ್ಲಿ ಯಾವ ಪುರುಷಾರ್ಥ ವಿದೆಯೆಂದು ಅವರು ಅನ್ನುತ್ತಿದ್ದರು. ಪ್ರವಾಸ ಮುಗಿಸಿ ಬಂದ ಬಳಿಕ, ನನ್ನ ಇತಿಹಾಸದ ಗುಂಗು ಅವರಿಗೆ ಒಂದು ಹಾಸ್ಯದ ವಿಷಯವಾಗಿತ್ತು. ವಕೀಲರ ಕೋಣೆಗೆ ನಾನು ಹೋದಕೂಡಲೆ ವೆಂಕಟರಾಯರ ಇತಿಹಾಸವೆಂದರೆ "ಖಡಲ್ ಫಡಲ್" ಎಂದು ತಿಂಗಳಾನುಗಟ್ಲೆ ಚೇಷ್ಟೆ ಮಾಡುತ್ತಿದ್ದರು. ಮತ್ತು ನನಗೆ 'ಪುಲಿಕೇಶಿ' ಎಂದು ಕರೆಯುತ್ತಿದ್ದರು.

**ಕಡಪಾ ರಾಘವೇಂದ್ರರಾಯರ ಜೀವನದಲ್ಲಿ ಕ್ರಾಂತಿ.**— ಹೀಗಿರುವಾಗ, ಮುಂದೆ ತುಸು ದಿವಸಗಳಲ್ಲಿ, 'ಗತವೈಭವ'ವು ಮುದ್ರಿತವಾಯಿತು. ಅದನ್ನು ಅವರು ಓದಿದರು. ಇದೇ ಸುಮಾರಕ್ಕೆ ಆಂಧ್ರ ಚಳವಳಿಯ ಪುಸ್ತಕವೂ ಅವರ ಕೈಗೆ ಬಿದ್ದಿತು. ಇವೆರಡೂ ಕೂಡಿ, ಅವರ ಜೀವನದಲ್ಲಿ ದೊಡ್ಡ ಕ್ರಾಂತಿಯನ್ನೇ ಮಾಡಿದವು. ಅವರಲ್ಲಿ ದೈವೀಪ್ರೇರಣೆ ಯುಂಟಾಯಿತು. ಆದರೆ ಅದು ಇನ್ನೂ ಹೊಟ್ಟೆಯಲ್ಲಿಯೇ ಇತ್ತು. ಹೊರಬಿದ್ದಿದ್ದಿಲ್ಲ. ನಮಗಾರಿಗೂ ಅದು ಗೊತ್ತಿರ ಲಿಲ್ಲ. ಒಂದು ದಿವಸ, ಕರ್ನಾಟಕ ವಿದ್ಯಾವರ್ಧಕ ಸಂಘದ ವಾರ್ಷಿಕೋತ್ಸವ. ಜೋಶಿ ವಿನಾಯಕರಾಯರು ಅಧ್ಯಕ್ಷರು. ಉತ್ಸವ ಮುಗಿಯಿತು. ರಾಘವೇಂದ್ರರಾಯರು ಉತ್ಸವಕ್ಕೆ ಬಂದಿದ್ದರೇನೋ ಸರಿ. ಉತ್ಸವದಲ್ಲಿ ಯಾವ ಭಾಗವನ್ನೂ ತಕ್ಕೊಂಡಿದ್ದಿಲ್ಲ. ಅಧ್ಯಕ್ಷರ ಭಾಷಣವೂ ಮುಗಿಯಿತು. ಒಮ್ಮಿಂ ದೊಮ್ಮೆ, ರಾಘವೇಂದ್ರರಾಯರಿಗೆ ಎಲ್ಲಿಂದ ಸ್ಫೂರ್ತಿಯುಂ ಟಾಯಿತೋ ಏನೋ, ಅವರು, ಅಧ್ಯಕ್ಷರ ಉಪಕಾರ ಸ್ಮರಿಸುವ ನೆವದಿಂದ ಎದ್ದರು. ಆಗ ಅವರ ಮೋರೆಯ ಮೇಲೆ ವಿಲಕ್ಷಣ

ತೇಜ ಉಕ್ಕುತ್ತಿತ್ತು. ಕೆಲವು ದಿವಸಗಳಿಂದ ಅವರ ಒಳ ಮನಸ್ಸಿನಲ್ಲಿ (sub-conscious mind) ಕುದಿಯುತ್ತಿದ್ದ ಕರ್ನಾಟಕದ ಅಭಿಮಾನವು ಉಕ್ಕಿ ಬಂದು, ಭೋರ್ಗರೆದು ಹರಿದು ಅವರ ಮುಖದಿಂದ ಹೊರಬಿತ್ತು. ಅವರ ಆ ಆವೇಶದ ಅತಿರೇಕವು ಎಲ್ಲಿಯವರೆಗೆ ತಲುಪಿತೆಂದರೆ, ಅವರು ಅದರ ಭರದಲ್ಲಿ, ತಮ್ಮ ಉತ್ಕಟ ಸ್ವಭಾವಕ್ಕನುಗುಣವಾಗಿ ನನ್ನನ್ನು ತರಗಾಬರಗಾ ಹೊಗಳಿ ವಿವೇಕವನ್ನು ಬಿಟ್ಟು, ಹಿಂದುಮುಂದೆ ನೋಡದೆ, ಆ ಸಭೆಯಲ್ಲಿ ಉದ್ದಕ್ಕೆ ನನಗೆ ಸಾಷ್ಟಾಂಗ ನಮಸ್ಕಾರ ಹಾಕಿಬಿಟ್ಟು, ಇಂದಿನಿಂದ ನಿಮ್ಮ ಶಿಷ್ಯನಾದೆ ಎಂದು ಅಂದರು ! ಎಲ್ಲರೂ ಅತ್ಯಂತ ಚಕಿತರಾದರು ! ಎಲ್ಲರ ಕಣ್ಣಲ್ಲಿ ಬಳಬಳನೆ ನೀರು ತುಂಬಿದವು. ಅವರಿಗೆ ನಾನು ಹೇಗೆ ಸ್ಫೂರ್ತಿ ಕೊಟ್ಟೆನೆಂಬುದು ನನಗೇನೇ ತಿಳಿಯಲಿಲ್ಲ. ನಿಜವಾಗಿ, ಅವರಲ್ಲಿಯೇ ಆ ಕಿಡಿ, ಅವರಿಗೂ ಕೂಡ ತಿಳಿಯದಂತೆ ಹೊತ್ತುತ್ತಲೇ ಇರಬೇಕು. ಕೊನೆಗೆ, ಅದಕ್ಕೆ ಮುಖ ದೊರೆಯಲಿಕ್ಕೆ ನನ್ನ ಪುಸ್ತಕ ನಿಮಿತ್ತಕಾರಣವಾಗಿರಬೇಕು. ಇಲ್ಲದಿದ್ದರೆ, ನಾನೂ ಅವರೂ ಅನೇಕ ಸಲ ಪ್ರವಾಸಮಾಡಿ, ಅವರು ನನ್ನ ಸಹವಾಸದಲ್ಲಿದ್ದರೂ ಆಗ ಏಕೆ ಆ ಪರಿಣಾಮವಾಗಬಾರದು? ಕರ್ನಾಟಕವನ್ನು ಜಾಗ್ರತಗೊಳಿಸುವ ಕಾರ್ಯದಲ್ಲಿ ಅವರು ಮಾಡಿದ ೧/೧೦ ರಷ್ಟು ಕೆಲಸವೂ ನನ್ನಿಂದ ಆಗಲಿಲ್ಲವೆಂಬುದು ಸರ್ವರಿಗೂ ತಿಳಿದ ಮಾತೇ ಆಗಿರುವದು.

**ಶಾಂತಕವಿಗಳೂ ಗತವೈಭವವೂ.**— ನನಗೆ ಗೊತ್ತಿಲ್ಲದಂತೆ, ಅಷ್ಟೇಕೆ ಅವರಿಗೆ ಸಹ ಗೊತ್ತಿಲ್ಲದಂತೆ ಪ್ರೇರಣೆಯಾದ ಮತ್ತೊಂದು ಉದಾಹರಣೆಯೆಂದರೆ ಶಾಂತಕವಿಗಳದು. ಸಕ್ಕರಿ ಬಾಳಾಚಾರ್ಯ ಅಥವಾ ಶಾಂತಕವಿಗಳ ಪರಿಚಯ ನನಗೆ

ಇರಲೇ ಇಲ್ಲ. ನರಗುಂದ ರಾಮರಾಯರಲ್ಲಿ ಅವರು ಊಟ ಮಾಡುತ್ತಿದ್ದರು ನಾನೂ ಅವರ ಮನೆಗೆ ಮೇಲಿಂದ ಮೇಲೆ ಹೋಗುತ್ತಿದ್ದೆ. ಗತವೈಭವದ ಪ್ರೂಫುಗಳು ಬಂದ ಕೂಡಲೆ ರಾಮರಾಯರಿಗೆ ಓದಿ ತೋರಿಸುತ್ತಿದ್ದೆ ಹೀಗೆ ಮೊದಲಿನ ಮೂರು ನಾಲ್ಕು ಫಾರ್ಮುಗಳ ಪ್ರೂಫ ಓದಿ ತೋರಿಸಿದೆ. ಶಾಂತಕವಿಗಳೂ ಅವನ್ನು ಓದಿದರು. ಆ ಮುದುಕನಿಗೆ ಒಮ್ಮಿಂ ದೊಮ್ಮೆ ಏನು ಸ್ಫೂರ್ತಿ ಬಂದಿತೋ ಏನೋ ೩ ನೆಯ ಪ್ರಕರ ಣದ ಮೇಲೆ ಒಂದು ಕೀರ್ತನವನ್ನೇ ತಯಾರು ಮಾಡಿದರು. ನನ್ನ ಭೆಟ್ಟಿಯಾದಾಗ, ನಾನು ಹಿಂದಕ್ಕೆ ವಿದ್ಯಾರಣ್ಯ ಚರಿತ್ರೆ ಯನ್ನು ಬರೆದದ್ದನ್ನು ಅವರಿಗೆ ಕೊಟ್ಟೆ ಕೂಡಲೆ, ಗತವೈಭ ವದ ೩ ನೆಯ ಪ್ರಕರಣವನ್ನು ಪೂರ್ವರಂಗವಾಗಿ ಇಟ್ಟು, ಉತ್ತರರಂಗದಲ್ಲಿ ವಿದ್ಯಾರಣ್ಯ ಕೀರ್ತನವನ್ನು ಹೆಣೆದರು. ಆಗ, ನಾನು ಹೋಮರೂಲ ಲೀಗಿನ ಸೆಕ್ರೆಟರಿ ಅವರಿಗೂ ದೇಶಭಕ್ತಿಯ ಸ್ಫೂರ್ತಿ ಇವೆಲ್ಲವುಗಳ ಮೂಲಕ, ಅಲ್ಲಿಯ ವರೆಗೆ ಗುಪ್ತಗಾಮಿನಿಯಾಗಿ ಹರಿಯುತ್ತಲಿದ್ದ ಅವರ ಅಭಿಮಾನ ಸರಸ್ವತಿಯು ಹೊರಗೆ ಹರಿಯಹತ್ತಿದಳು ಅವರ ಸ್ಫೂರ್ತಿಯು ಉತ್ತರ ಕರ್ನಾಟಕವನ್ನೆಲ್ಲ ಹೇಗೆ ಅಭಿಮಾನಮಯವಾಗಿ ಮಾಡಿತೆಂಬುದು ಯಾರಿಗೆ ಗೊತ್ತಿಲ್ಲ? ವಿದ್ಯಾರಣ್ಯ ಚರಿತ್ರೆ ಯಲ್ಲಿ "ಸಾ ರಮ್ಯಾ ನಗರೀ" ಎಂಬುದರ ಒಂದು ಶ್ಲೋಕಬದ್ಧ ಭಾಷಾಂತರ (ನನ್ನದಲ್ಲ) ಹಾಕಿದ್ದೆ. ಅದು ನನ್ನ ಮನಸ್ಸಿಗೆ ಬಂದಿರಲಿಲ್ಲ ಶಾಂತಕವಿಗಳಿಗೆ ಅದರದೊಂದು ಕನ್ನಡ ಶ್ಲೋಕ ಮಾಡಿಕೊಡಲು ಕೇಳಿದೆ ಮಾಡಿಕೊಟ್ಟರು. 'ಸಾ' ಎಂಬುದರ ಶಕ್ತಿ ಅದರಲ್ಲಿ ಇರಲಿಲ್ಲ. ತಿರುಗಿ ಕೊಟ್ಟು, ಆ ಶಕ್ತಿ ಯನ್ನು ಕಳೆಯದೆ ಮಾಡಿಕೊಡಿರಿ ಎಂದು ಕೇಳಿದೆ. "ಆ

ಸೌಂದರ್ಯದ" ಮುಂತಾಗಿ ಮಾಡಿಕೊಟ್ಟರು. ಅದನ್ನು ಗತವೈಭವದಲ್ಲಿ ಸೇರಿಸಿದೆ. ವಿದ್ಯಾರಣ್ಯ ಕೀರ್ತನವನ್ನೂ ನಾನೇ ಮುದ್ರಿಸಿದೆ

**ಮೊದಲನೆಯ ಓರಿಯೆಂಟಲ್ ಕಾಂಗ್ರೆಸ್ಸೂ ಕರ್ನಾಟಕವೂ.**—೧೯೧೯ನೆಯ ಇಸ್ವಿಯಲ್ಲಿ ಪುಣೆಯಲ್ಲಿ ಓರಿಯೆಂಟಲ್ ಕಾನ್ಫರನ್ಸ ಕೂಡಿತು. ಅದಕ್ಕೆ ನಾವು ಕೆಲವರು ನಮ್ಮ ಇತಿಹಾಸ ಮಂಡಳದ ಪರವಾಗಿ ಪ್ರತಿನಿಧಿಗಳಾಗಿ ಹೋಗಿದ್ದೆವು. ಅಲ್ಲಿ ನಾನು ಒಂದು ಪ್ರಬಂಧ ಓದಿದೆ. ಚಾಲುಕ್ಯರೇ ಮುಂತಾದವರು ಕನ್ನಡಿಗರಲ್ಲ, ಮರಾಟಿಗರು ಎಂಬ ವಿಲಕ್ಷಣ ವಾದವನ್ನು ಚಿಂತಾಮಣರಾವ ವೈದ್ಯ ಇವರು ಎತ್ತಿದ್ದರು. ಅದಕ್ಕೆ ಉತ್ತರವೆಂದು ನಾನು ಆ ಪ್ರಬಂಧವನ್ನು ಬರೆದಿದ್ದೆ. ಐತಿಹಾಸಿಕ ಕಮಿಟಿಯಲ್ಲಿ ಅದರ ಚರ್ಚೆ ಹೊರಟಿತು. ಅಲ್ಲಿಯ ವಿದ್ವಾಂಸರೆಲ್ಲರೂ ನನ್ನ ಪ್ರಬಂಧವನ್ನು ಒಪ್ಪಿದರು. ಇಷ್ಟು ಸಪ್ರಮಾಣ ಆಧಾರಗಳಿರಲು, ಇದರ ವಿಷಯವಾಗಿ ಸಂದೇಹವನ್ನಾದರೂ ಯಾರು ತೆಗೆದುಕೊಂಡರು, ಈ ಪ್ರಬಂಧ ಬರೆಯುವ ಪ್ರಮೇಕ್ಕೆ ಕಾರಣವೇನು ಎಂದು ಅಧ್ಯಕ್ಷರು ನನ್ನನ್ನು ಕೇಳಿದರು ನಾನು ಅಲ್ಲಿ ಕುಳಿತಿರುವ ಚಿಂತಾಮಣರಾಯರನ್ನು ತೋರಿಸಿ, ಇವರೇ ಈ ಪ್ರಶ್ನೆ ಎತ್ತಿರುವರು, ಅದಕ್ಕೆ ತಮ್ಮೆಲ್ಲರೆದುರಿಗೆ ಈ ಪ್ರಶ್ನೆ ಇಟ್ಟಿರುವೆ; ಅವರಿಗೆ ತಮ್ಮ ಸಮರ್ಥನ ಮಾಡಿಕೊಳ್ಳುವುದಿದ್ದರೆ ಮಾಡಿಕೊಳ್ಳಲಿ ಎಂದು ಅಂದೆ. ಚಿಂತಾಮಣರಾಯರು ಆಗ ಬ್ರ ಮಾತಾಡಲಿಲ್ಲ. ಆದರೆ ಚಮತ್ಕಾರವೇನೆಂದರೆ, ಮುಂದೆ ಅವರು ಪ್ರಸಿದ್ಧಪಡಿಸಿದ ಮರಾಠೀ ಗ್ರಂಥದಲ್ಲಿ ಪುನಃ ತಮ್ಮ ಹಟವನ್ನು ಬಿಡದೆ ಅದೇ ವಿಧಾನ ಮಾಡಿರುವರಂತೆ; ಮತ್ತು ಟಿಪ್ಪಣಿಯಲ್ಲಿ ನನ್ನ ಹೆಸರು ಸಹ

ಕಾಣಿಸದೆ, ಕನ್ನಡಿಗರೊಬ್ಬರು ವ್ಯರ್ಥವಾಗಿ ಚಾಲುಕ್ಯರೇ ಮುಂತಾದವರು ಕನ್ನಡಿಗರೆಂದು ಸಾಧಿಸುತ್ತಾರೆಂದು ಬರೆದಿರುವರಂತೆ! ಇದಕ್ಕೆ ಏನೆನ್ನಬೇಕು ?'

**ಕರ್ನಾಟಕ ಕಾಲೇಜಿನ ವಿಶಿಷ್ಟ ಚಿಹ್ನದ ಸ್ಮೃತಿ:—** ರಾಲಿನ್‌ಸನ್ನರು ಕರ್ನಾಟಕ ಕಾಲೇಜಿನ ಪ್ರಿನ್ಸಿಪಾಲರಿದ್ದಾಗ, ೧೯೨೨-೨೩ ರಲ್ಲಿ ಕರ್ನಾಟಕ ಕಾಲೇಜಿಗೆ ಒಂದು ಚಿಹ್ನವಿರಬೇಕೆಂದು ಯೋಚಿಸಿದರು. ಅವರು ಇತಿಹಾಸ ಪ್ರಿಯರು ನನಗೂ ಅವರಿಗೂ ಆ ಸಂಬಂಧವಾಗಿ ಸ್ನೇಹವಿತ್ತು. ಅವರು ನನಗೆ ಪತ್ರಬರೆದು ಕರ್ನಾಟಕ ಕಾಲೇಜಕ್ಕೆ ಯಾವ ವಿಶಿಷ್ಟ ಚಿಹ್ನವಿರಬೇಕೆಂಬುದನ್ನು ಸೂಚಿಸಲಿಕ್ಕೆ ಕೇಳಿದರು. ಅನೇಕ ಕಾರಣಗಳ ಮೂಲಕ ಚಾಲುಕ್ಯ ವಿಜಯನಗರ ಮುಂತಾದವರ ವರಾಹ ಚಿಹ್ನವನ್ನು ಇಡುವುದು ಸರಿಯಲ್ಲವೆಂದು ನನಗೆ ತೋರಿ, ನಾನು ನನ್ನ ಹತ್ತಿರ ಇರುವ ಕದಂಬರದೊಂದು ತಾಮ್ರಶಾಸನವನ್ನು ಅವರ ಕಡೆಗೆ ಕಳುಹಿಸಿ, ಅದರ ಮೇಲಿನ ಸಿಂಹದ ಚಿತ್ರವನ್ನು ಆದಷ್ಟುಮಟ್ಟಿಗೆ ಅನುಸರಿಸಬಹುದೆಂದು ಹೇಳಿದೆ. ಆ ಬಗ್ಗೆ ಅವರಿಗೂ ನನಗೂ ಮಾತುಕಥೆಗಳಾದವು ಅವರು ನನ್ನ ಮಾತಿಗೆ ಒಪ್ಪಿ ಈಗಿರುವ ಕರ್ನಾಟಕ ಕಾಲೇಜಿನ ವಿಶಿಷ್ಟ ಚಿಹ್ನವನ್ನು ಸ್ವೀಕರಿಸಿರುವರು. ಅವರು, ನಾನು ಕಳಿಸಿಕೊಟ್ಟ ತಾಮ್ರಪಟವನ್ನು ತಮಗೆ ಮಾರಲಿಕ್ಕೆ ಕೊಡಬೇಕೆಂದು ಕೇಳಿದರು. ಅದಕ್ಕೆ ನಾನು ಒಪ್ಪಲಿಲ್ಲ. ನಮ್ಮ ಇತಿಹಾಸದ ವಸ್ತುಗಳು ನಮ್ಮ ಹತ್ತಿರವೇ ಇರಬೇಕೆಂದು ನನ್ನ ಮತ.

**ಊಟಕಮಂಡಿನ ಪ್ರವಾಸ ಮತ್ತು ಅದರ ಉದ್ದೇಶ:-** ೧೯೩೪ ರಲ್ಲಿ ಕೋಲಾರದಲ್ಲಿ ಕೂಡಿದ ಸಾಹಿತ್ಯ ಸಮ್ಮೇಲನಕ್ಕೆ

ಕೃಷ್ಣಶಾಸ್ತ್ರಿಗಳು ಅಧ್ಯಕ್ಷರು. ಅವರು ಇಡೀ ಹಿಂದುಸ್ಥಾನದ ಶಿಲಾಲಿಪಿ ಖಾತೆಗೆ ಅಧ್ಯಕ್ಷರು. ಅವರಿಗೆ ನಾನು ಕರ್ನಾಟಕದ ಇತಿಹಾಸದ ಬಗ್ಗೆ ನೀವು ಏನೂ ಪ್ರಯತ್ನ ಮಾಡಲಿಲ್ಲ, ಮಾಡ ಬೇಕು ಎಂದು ಬೆನ್ನುಹತ್ತಿದೆ. ಅವರ ಕಚೇರಿ ಉಟಕಮುಂಡಲ ದಲ್ಲಿ. ನಾನೂ ಮಂಗಳವೇಡೆ ಶ್ರೀನಿವಾಸರಾಯರೂ ೧೯೩೩ರಲ್ಲಿ ಅಲ್ಲಿಗೆ ಹೋದೆವು. ೭-೮ ದಿವಸ ಇದ್ದು, ಅವರಿಗೆ ಕರ್ನಾಟಕ ಇತಿಹಾಸದಲ್ಲಿ ಮನಸ್ಸು ಹಾಕಲಿಕ್ಕೆ ಮನವೊಲಿಸಿದೆವು. ಎಪಿ ಗ್ರಾಫಿಯಾ ಡಿಪಾರ್ಟಮೆಂಟಿನ ಪತಿಯಿಂದ ಇಡೀ ಕರ್ನಾಟಕ ದಲ್ಲಿ ಪ್ರತಿಯೊಂದು ಹಳ್ಳಿಯಲ್ಲಿ ಎಷ್ಟು ಶಿಲಾಲಿಪಿಗಳಿರುತ್ತವೆಂ ಬುದನ್ನು ಸರ್ವೆ ಮಾಡಿಸಿ ಅವುಗಳ ಮುದ್ರೆಯನ್ನು ತಕ್ಕೊಳ್ಳ ಬೇಕೆಂದೂ ಒಬ್ಬನಾದರೂ ಕನ್ನಡಿಗನನ್ನು ಆ ಖಾತೆಯಲ್ಲಿ ಸೇರಿಸಿಕೊಳ್ಳಬೇಕೆಂದೂ ಅವರಿಗೆ ನನ್ನ ಸೂಚನೆ. ಅವರು ತೀವ್ರವೇ ಪೆನ್‌ಶನ್ ಮೇಲೆ ಹೋಗತಕ್ಕವರಿದ್ದರು. ಅದ ರೊಳಗಾಗಿ ಇವೆರಡು ಕಾರ್ಯಮಾಡಬೇಕೆಂದು ಅವರಿಗೆ ಪುನಃ ಪತ್ರಗಳ ಮುಖಾಂತರ ಒತ್ತಾಯಪಡಿಸಿದೆ. ಆ ಪ್ರಕಾರ ಅವರು ಮುಂದೆ ನನಗೆ ತಂತಿಯನ್ನು ಕಳಿಸಿ, ಯಾವನೊಬ್ಬ ಕನ್ನಡಿಗನನ್ನು ಆ ಖಾತೆಕ್ಕೆ ಕಳಿಸಲಿಕ್ಕೆ ಕೇಳಿದರು. ನಾನು ನಮ್ಮ ಊರಿನ ಹತ್ತರದವರೇ ಆದ ಪಂಚಮುಖಿ ರಾಘವೇಂದ್ರಾ ಚಾರ್ಯರನ್ನು (ಅವರು ಈಗ ಧಾರವಾಡದಲ್ಲಿ ಕನ್ನಡ ಸಂಶೋಧನ ಸಮಿತಿಯ ಡಾಯರೆಕ್ಟರರಿರುವರು.) ಕಳಿಸುವೆ ನೆಂದು ತಿಳಿಸಿದೆ. ಆ ಮೇರೆಗೆ ಅವರನ್ನು ನೇಮಿಸಿಕೊಂಡರು. ಮತ್ತು ಸರ್ವೆಯನ್ನು ಪ್ರಾರಂಭಮಾಡುವುದಕ್ಕಾಗಿ ಒಂದು ಸ್ಕೀಮು ತಯಾರಿಸಿದರು. ನಾನು ಅವರಿಗೆ ಮುಂಚೆ, ನಾನು ಇದ್ದ ಸ್ಥಳಕ್ಕೇನೆ ಅಂದರೆ ಧಾರವಾಡಕ್ಕೆ ಕರಿಸಿಕೊಂಡೆ. ಆ ಖಾತೆಯ

ಲಕ್ಷ್ಮೀನಾರಾಯಣರಾಯರನ್ನು ತಿಂಗಳೊಪ್ಪತ್ತು ಮನೆಯಲ್ಲಿ ಇಟ್ಟುಕೊಂಡೆ ಧಾರವಾಡ ತಾಲೂಕಿನಿಂದಲೇ ಸರ್ವೆ ಪ್ರಾರಂಭ ಮಾಡಿಸಿದೆ. ಈಗ ಆ ಕಾರ್ಯ ತಪ್ಪದೆ ಮುಂದುವರಿದಿದೆ ನಾನೇ ಕರ್ನಾಟಕದ ಇತಿಹಾಸ ಬರೆಯಲಿಕ್ಕೆ ಪ್ರಯತ್ನಪಟ್ಟೆ ತಿರಹಟ್ಟಿಯ ಅಪ್ಪತ್ತರಾವ ಮಹಿಷಿ ಮತ್ತು ರಾಮರಾವ ಮಂಗಸೂಳಿ ಇವರು ಒಬ್ಬೊಬ್ಬರು ಒಂದು ನೂರು ರೂಪಾಯಿ ನನ್ನ ಮೇಲಿನ ಪ್ರೇಮಾದರಗಳ ಮೂಲಕ ನನಗೆ ಕೊಟ್ಟಿದ್ದರು ಬೆಂಗಳೂರು ಮುಂತಾದ ಸ್ಥಳಗಳಿಗೆ ಹೋಗಿ ಮಾಹಿತಿ ಸಂಗ್ರಹಿಸಿದೆ ಶಿಲಾಲಿಪಿ ಕೂಡಿಹಾಕಿದೆ ಅಷ್ಟರಲ್ಲಿ ಪಂಚಮುಖಿಯವರು ಆ ಕಾರ್ಯ ಮಾಡುತ್ತಾರೆಂದು ತಿಳಿದ ಕಾರಣ, ಅವರಿಗೆ ಆ ಕಾರ್ಯ ಮಾಡಲು ಹೆಚ್ಚು ಅನುಕೂಲತೆಗಳಿದ್ದ ಕಾರಣ, ನಾನು ನನ್ನ ಕೆಲಸ ನಿಲ್ಲಿಸಿದೆ ಆ ಶಿಲಾಲಿಪಿ ಮತ್ತು ಟಿಪ್ಪಣಿಗಳನ್ನು ಹೋದವರ್ಷ, ಇತಿಹಾಸ ಮಂಡಲವು ಹಿಂದುಸ್ಥಾನದ ಆರ್ಕಿಯಾಲಾಜಿಕಲ್ ಖಾತೆಯ ಈಗಿನ ಡಾಯರೆಕ್ಟರರಾದ ಕೆ ಎನ್ ದಿಕ್ಷಿತ್ ಇವರಿಂದ ನನ್ನ ಭಾವಚಿತ್ರದ ಅನಾವರಣ ಸಮಾರಂಭ ಮಾಡಿಸಿದ ಕಾಲಕ್ಕೆ, ಮಂಡಳದ ವಶಕ್ಕೆ ಕೊಟ್ಟೆ.

**ವಿಜಯನಗರದ ಮಹಾ ಉತ್ಸವ.**-೧೯೩೬ ರಲ್ಲಿ ವಿಜಯನಗರದ ಸ್ಮಾರಕೋತ್ಸವ ಜರುಗಿತಷ್ಟೆ ಅದನ್ನು ಹೂಡಿದವರು ಬೆಂಗೇರಿ ಪ್ರಲ್ಹಾದರಾಯರು ಮೊದಲಿನಿಂದ ಕೊನೆಯವರೆಗೆ ೨-೩ ವರ್ಷ ಸತತ ಪ್ರಯತ್ನಮಾಡಿ ಅವರಿಗೆ ಬೆಂಬಲ ಕೊಟ್ಟವನೆಂದರೆ ನಾನು ಆ ಉತ್ಸವ ಮುಗಿದ ಬಳಿಕ ಸಹ ಅತ್ಯಂತ ಪರಿಶ್ರಮಪಟ್ಟು, ಅದರ ದೊಡ್ಡ ವರದಿಯನ್ನು ಬರೆದು ತೆಗೆದೆ. ಅದರ ಪ್ರಸ್ತಾವನೆಯಲ್ಲಿ ನಾನು ಆ ಉತ್ಸವದ

ಸಂಕ್ಷಿಪ್ತ ಮಾಹಿತಿಯನ್ನು ಕೊಟ್ಟಿರುವುದಲ್ಲದೆ, ವರದಿಯಲ್ಲಿ ಸಾದ್ಯಂತವಾದ ವೃತ್ತಾಂತವನ್ನು ಬರೆದೇ ಇರುವೆ

ವಿಜಯನಗರ ಉತ್ಸವ ಮುಗಿದು, ವರದಿಯನ್ನು ಮುದ್ರಿಸುವ ತನಕ ಕರ್ನಾಟಕ ಇತಿಹಾಸದ ಸಂಬಂಧವಾಗಿ ಮಾಡಿದ ಕೆಲಸವೇ ಕೆಲಸ ಆ ಮುಂದೆ, ನಾನು ಇತಿಹಾಸ ಮಂಡಲದಿಂದ ನಿವೃತ್ತನಾಗಿ, ನನ್ನ ಏಕಾಂತವಾಸದಲ್ಲಿ ನಿಮಗ್ನನಾಗಿರುವೆ.



೬ನೆಯ ಪ್ರಕರಣ

# ನನ್ನ ಕರ್ನಾಟಕತ್ವದ ಜೀವನ

## (೧೯೦೬-೧೯೩೦)

**ಕರ್ನಾಟಕತ್ವದ ಬಗ್ಗೆ ನನ್ನ ಕಲ್ಪನೆ.** ಕರ್ನಾಟಕತ್ವ ವೆಂಬುದು ನನ್ನ ವಿಶಿಷ್ಟ ವಿಚಾರ ಆ ಶಬ್ದವು ಕೂಡ ನನ್ನ ಟಂಕಸಾಲಿಯಲ್ಲಿ ಹುಟ್ಟಿದ್ದು ಆದೊಂದು ಶಬ್ದದಲ್ಲಿ ರಾಜ ಕಾರಣ, ಧರ್ಮ, ವಾಙ್ಮಯ, ಇತಿಹಾಸ, ಕಲೆ ಮುಂತಾದ ಯಾವತ್ತು ವಿಷಯಗಳು ಸೇರ್ಪಡೆಯಾಗುತ್ತವೆ. ಅದರಲ್ಲಿ ಸೇರದ ವಿಷಯವಿಲ್ಲ. ನನ್ನ ಜೀವನದ ಯಾವತ್ತು ಚಟು ವಟಿಕೆಗಳ ಅದೃಶ್ಯವಾದ ಉಗಮವು ಕರ್ನಾಟಕತ್ವದ ಕಲ್ಪನೆ ಯಲ್ಲಿ; ಗುರಿಯೂ ಕರ್ನಾಟಕತ್ವವೇ ಹಿಂದಕ್ಕೆ ಗಂಗಾಧರ ರಾವ ದೇಶಪಾಂಡೆಯವರು ನನಗೆ ಉದ್ದವಾದ ಪತ್ರ ಬರೆದು "You are as experienced and seasoned a soldier as any one else. I seek your advice and guidance." ಎಂದು ಕೇಳಿದ್ದರು. ಆವರಿಗೆ ನಾನು ೧೪-೬-೧೯೩೯ ನೆಯ ಇಸ್ವಿಯ ದಿವಸ ಬರೆದ ಉತ್ತರದಲ್ಲಿ ಕರ್ನಾಟಕತ್ವ ವೇನೆಂಬುದಕ್ಕೆ ಉತ್ತರ ಕೊಟ್ಟಿರುವೆ. ಅದರ ಕೆಲ ಭಾಗ ಹೀಗೆ ಇದೆ:— "From my experence of the public life in Karnatak, and also from my experience in other fields, I have come to the conclusion that no movement, political or otherwise, is pos-

sible unless there is this Karnatakatwa is us. By Karnatakatwa I mean the sum total of all our feelings and duties towards Karnataka ( like Hinutwa ). So it is that from the political field I turned to this less ambitious, but more solid work My Karnatakatwa is somewhat different from Provincialism But, you know that political leaders are generally thought to be the leaders of the country now-a-days, and it is but natural So I know that since I withdrew from politics, I cannot lead the country in action, even in Karnatak matters All that I can do, is to give out my views openly, whenever there is occasion for it I only want that you should realise that without the growth of this Karnatak movement, no real work in Karnatak is possible

ಈ ಕರ್ನಾಟಕತ್ವದ ಕಲ್ಪನೆಯನ್ನು ಕರ್ನಾಟಕದ ಮುಖಂಡರು ಸಾಕಷ್ಟು ಆಕಲನಮಾಡಿ, ಅದರೊಡನೆ ತಾದಾತ್ಮ್ಯ ಹೊಂದದಿರುವುದೇ ನಮ್ಮ ದುಃಖಗಳಿಗೆ ಮೂಲ ಮಿಕ್ಕ ಪ್ರಾಂತಗಳಲ್ಲಿ ಈ ಮೊದಲೇ ಜಾಗ್ರತಿಯಾಗಿರುವುದರಿಂದ, ಅಲ್ಲಿಯ ಜನರಿಗೆ ಈ ಪ್ರಶ್ನೆ ನಮ್ಮಷ್ಟು ತೀಕ್ಷ್ಣವಾಗಿರುವುದಿಲ್ಲ. ತನ್ನ ದೇಶದೊಡನೆ ತಾದಾತ್ಮ್ಯ ಹೊಂದದ ಮುಖಂಡರಿರುವ ಪ್ರಾಂತವೆಂದರೆ ಕರ್ನಾಟಕವೊಂದೇ. ಒಂದೊಂದು ಕ್ಷೇತ್ರದಲ್ಲಿ ಕೆಲಸಮಾಡುವವರು ಹಲವರಿರುತ್ತಾರೆ. ಇಡಿಯಾಗಿ ವಿಚಾರಮಾಡಿ, ಸರ್ವವಿಷಯಗಳಿಗೂ ಸಹಾನುಭೂತಿಯನ್ನು ತೋರಿಸುವವರು ತೀರ ಕಡಿಮೆ. ನನಗೆ ಬೇಕು ಇಡಿದೃಷ್ಟಿ; ಬಿಡಿದೃಷ್ಟಿ ಬೇಡ.

**ಕರ್ನಾಟಕತ್ವಕ್ಕೂ ರಾಜಕಾರಣಕ್ಕೂ ವಿರೋಧವೆ?:** ಇದೊಂದು ರಾಜಕಾರಣದಲ್ಲಿ ಕೆಲಸಮಾಡುವವರ ತಲೆಯೊಳಗಿನ ಹುಚ್ಚು. ಕರ್ನಾಟಕತ್ವದಲ್ಲಿ ಕರ್ನಾಟಕದ ರಾಜಕಾರಣವೂ ಸೇರುತ್ತದೆಂಬುದನ್ನು ಅವರು ಮರೆಯುತ್ತಾರೆ. ರಾಜಕಾರಣವನ್ನು ಕರ್ನಾಟಕದ ಸ್ಥಿತಿಗತಿಗಳಿಗೆ ಅನ್ವಯಿಸಿಕೊಳ್ಳುವುದೇ ಕರ್ನಾಟಕದ ವಿಶಿಷ್ಟ ರಾಜಕಾರಣ. ಹಾಗೆ ಮಾಡುವಾಗ ಕರ್ನಾಟಕದ ರಾಜಕೀಯ ಏಕೀಕರಣದ ಪ್ರಶ್ನೆ ತಾನಾಗಿಯೇ ಉದ್ಭೂತವಾಗುತ್ತದೆ. ಅದನ್ನು ಗಾಂಧಿಯವರು ಬಿಡಿಸಬೇಕೋ ಕರ್ನಾಟಕದ ಮುಖಂಡರು ಬಿಡಿಸಬೇಕೋ? ಕನ್ನಡ ಜಿಲ್ಲೆಯಾದ ಬಳ್ಳಾರಿಯನ್ನು ಸಂರಕ್ಷಿಸುವುದು ರಾಜಕಾರಣವಲ್ಲವೋ? ಲಿಂಗಾಯತ-ಬ್ರಾಹ್ಮಣ ವಾದವನ್ನು ಬಿಡಿಸುವುದಕ್ಕೆ ರಾಜೇಂದ್ರಪ್ರಸಾದರು ಬರಬೇಕೋ? ಸಾರಾಂಶ, ಕರ್ನಾಟಕತ್ವವು ರಾಜಕಾರಣದೊಳಗಿನ ಯಾವ ಪ್ರಶ್ನೆಯನ್ನೂ ಕಡಿಮೆ ಮಾಡದೆ ಕೆಲವು ಹೆಚ್ಚಿನ ಭಾರವನ್ನು ಹೊರಿಸುತ್ತದೆ. ಹಾಗೆ ಮಾಡದಿದ್ದವರು ಕರ್ನಾಟಕದ ದ್ರೋಹಿಗಳೆಂದು ಮಾತ್ರ ಅದು ನಿಕ್ಷುಣ್ಣವಾಗಿ ಹೇಳುತ್ತದೆ ಆದಕಾರಣ ಅದು ಸ್ವಾತಂತ್ರ್ಯಕ್ಕೆ ವಿರುದ್ಧವಿಲ್ಲವೆಂಬುದು ಸೂರ್ಯಪ್ರಕಾಶದಷ್ಟು ಸ್ಪಷ್ಟವಿದೆ

**ಕರ್ನಾಟಕತ್ವವೆಂದರೆ ಕನ್ನಡ ವಾಙ್ಮಯ ಮಾತ್ರವಲ್ಲ:** ಅದೇಮೇರೆಗೆ ಕನ್ನಡ ನುಡಿಯೆಂದರೆ ಕರ್ನಾಟಕ ಸರ್ವಸ್ವವೆಂದು ತಿಳಿಯುವದೊಂದು ವರ್ಗವೂ ನಮ್ಮಲ್ಲಿದೆ. ಅದೂ ಸಂಕುಚಿತ ಭಾವನೆಯೇ. "ಅತ್ಯತಿಷ್ಠತ್ ದಶಾಂಗುಲಂ" ವೆಂಬಂತೆ, ಕರ್ನಾಟಕತ್ವವು ಇವೆಲ್ಲ ವಿಷಯಗಳನ್ನು ಒಳಗೊಂಡು, ಮೀರಿ ನಿಂತಿರುತ್ತದೆ. ಇದರ ನಿಜವಾದ ಕಲ್ಪನೆ

ಇಲ್ಲದಿರುವುದರಿಂದಲೇ ಗಡಿನಾಡಿನ ಪ್ರಶ್ನೆ ಕೊಳೆಯುತ್ತ ಬಿದ್ದಿದೆ. ಈ ವಿಷಯದಲ್ಲಿ, ನನ್ನ ವಿಚಾರಗಳೇನಿರುವವೆಂಬ ದನ್ನು ಹೇಳುವದಕ್ಕೋಸ್ಕರ ನಾನು ಜೇಂಪ್ರೆಯವರಿಗೆ ತಾ ೨೯-೩-೩೮ನೆಯ ದಿವಸ ಕೊಟ್ಟ ಟಿಪ್ಪಣಿಯಲ್ಲಿಯ ಅವತರ ಣಿಕೆ ಇಲ್ಲಿ ಕೊಡುವೆ

"ಕರ್ನಾಟಕದ ಸಾಂಸ್ಕೃತಿಕ ಮತ್ತು ರಾಜಕೀಯ ಏಕೀ ಕರಣಗಳನ್ನು ಸಾಧಿಸುವುದಕ್ಕೆ ಉಪಯೋಗವಾಗುವ ಸಂಸ್ಥೆ ಗಳು ಎರಡು (೧) ಪರಿಷತ್ತು ಮತ್ತು (೨) ಕಾಂಗ್ರೆಸ್ಸು ಇವೆರಡೂ ಸಂಸ್ಥೆಗಳನ್ನು ಹಾಗೆ ಉಪಯೋಗಿಸಿಕೊಳ್ಳ ಬೇಕೆಂದು ನನ್ನ ಇಚ್ಛೆ ರಾಜಕೀಯ ಏಕೀಕರಣ ಚಳು ವಳಿಯು ಇತ್ತ ನಡೆಯಬೇಕು, ಅದಕ್ಕೆ ಪಕ್ವಕಾಲ ಬರು ವಷ್ಟರಲ್ಲಿ, ಸಾಂಸ್ಕೃತಿಕ ಏಕೀಕರಣವು ಪರಿಷತ್ತಿನ ಮುಖಾಂ ತರವಾಗಿ ಪಕ್ವವಾಗಬೇಕು ಎಂಬುದು ನನ್ನ ಧೋರಣೆ. ಆ ದೃಷ್ಟಿಯಿಂದ ಕರ್ನಾಟಕ ವಿಶ್ವವಿದ್ಯಾಲಯವು ಸಾಂಸ್ಕೃ ತಿಕ ಧ್ಯೇಯ. ರಾಜಕೀಯ ಏಕೀಕರಣವು ರಾಜಕೀಯ ಧ್ಯೇಯ. ಎರಡೂ ಅರ್ಥಾತ್, ಧ್ಯೇಯಗಳೇ. ಇವೆರಡೂ ಧ್ಯೇಯಗಳನ್ನು ಒಟ್ಟುಗೂಡಿಸುವುದಕ್ಕೆ ಉಪಯೋಗವಾಗುವ ಚಳವಳಿಯೆಂದರೆ ಲಾಯಬ್ರರಿಗಳ ಸ್ಥಾಪನೆಯ ಚಳವಳಿಯು ಅದು ಅವುಗಳನ್ನು ಜೋಡಿಸುವ ಕೊಂಡಿಯು ಇದು ನನ್ನ ಮುಖ್ಯ ಧೋರಣ."

ಕರ್ನಾಟಕ ಸಾಹಿತ್ಯಪರಿಷತ್ತಿನಲ್ಲಿಯೂ ನನ್ನ ಆಟ ಸಾಗ ಲಿಲ್ಲ; ಕಾಂಗ್ರೆಸ್ಸಿನಲ್ಲಿಯೂ ಸಾಗಿಲ್ಲ. ಆದಕಾರಣ, ನನ್ನ ಕನಸು ಇನ್ನೂ ಕನಸಾಗಿಯೇ ಉಳಿದಿದೆ.

**ನನ್ನಲ್ಲಿ ಕರ್ನಾಟಕತ್ವದ ಉಗಮ** ಈ ಕರ್ನಾಟಕತ್ವದ ಕಲ್ಪನೆ ನನ್ನ ತಲೆಯಲ್ಲಿ ಆಕಾಶದಿಂದ ಒಮ್ಮೆಲೆ ಬೀಳಲಿಲ್ಲ. ಅದು ನನ್ನ ದೀರ್ಘವಾದ ಅನುಭವದ ಮತ್ತು ಸ್ವತಂತ್ರವಾದ ಹಾಗೂ ಪರಿಪಕ್ವವಾದ ವಿಚಾರದ ಫಲ. ೧೯೦೬ರಲ್ಲಿ ದೇಶಸೇವೆ ಮಾಡಬೇಕೆಂಬ ಸಂಕಲ್ಪಮಾಡಿ ಹೊರಟ ನಾನು ಯಾವ ಮಾರ್ಗದಿಂದ ಹೋದರೂ ಕೊನೆಗೆ ಈ ಕರ್ನಾಟಕತ್ವಕ್ಕೇನೇ ಬಂದು ತಲುಪಿದೆ ಸಂಪಾದಕನಾಗಬೇಕೆಂದು ಹವಣಿಸಿದೆ ಮುಂದೆ ಅಡ್ಡಗೋಡೆ ನಿಂತಿತು. ಏಕೆಂದರೆ ವೃತ್ತಪತ್ರಿಕೆಗಳಿಗೆ ಉತ್ತರಕರ್ನಾಟಕದ ಹೊರಗೆ ಹೋಗಲಿಕ್ಕೆ ಆಸ್ಪದವಿಲ್ಲ ಲೋಕಮಾನ್ಯರ ವಿಚಾರಗಳನ್ನೇ ಕನ್ನಡದಲ್ಲಿ 'ಕನ್ನಡ ಕೇಸರಿ'ಪತ್ರದ ಮುಖಾಂತರವಾಗಿ ಇಟ್ಟು ನೋಡಿದೆ ಅವನ್ನೂ ಓದುವವರಿಲ್ಲ ಗ್ರಂಥ ಬರೆದೆ. ಭಾಷಾಭೇದದ ಮೂಲಕ ಅವು ಉತ್ತರಕರ್ನಾಟಕದ ಗಡಿ ದಾಟಲಿಲ್ಲ ರಾಜಕಾರಣವನ್ನು ಹಬ್ಬಿಸಹೋದ ಕರ್ನಾಟಕಕ್ಕೆ ಪ್ರತ್ಯೇಕ ಅಸ್ತಿತ್ವವೇ ಇಲ್ಲವಾದ್ದರಿಂದ, ಅಲ್ಲಿಯೂ ಅದೇ ಗೋಡೆ ಮುಂದೆ ಬಂದುನಿಂತಿತು. ರಾಷ್ಟ್ರೀಯ ಶಿಕ್ಷಣಕ್ಕಾಗಿ, ಕರ್ನಾಟಕವನ್ನು ಬೇರ್ಪಡಿಸಬೇಕಾಯಿತು. ಏಕೆಂದರೆ, ಶಿಕ್ಷಣವು ದೇಶಭಾಷೆಯಲ್ಲಿ ಕೊಡಲ್ಪಡಬೇಕೆಂಬುದೇ ಆ ಶಿಕ್ಷಣದ ಮೂಲ ತತ್ವವು. ಕರ್ನಾಟಕಕ್ಕೆ ಬೇರೆ ರಾಜಕೀಯ ಪರಿಷತ್ತು, ಹೋಮರೂಲ ಲೀಗ, ಇತಿಹಾಸಮಂಡಳ ಮುಂತಾದವುಗಳು ಹೇಗೆ ಬೇಕಾದವೆಂಬುದನ್ನು ಹಿಂದೆ ಹೇಳಿಯೇ ಇರುವೆ ಸಾರಾಂಶ, ಯಾವ ದಿಕ್ಕಿನಿಂದ ಹೋದರೂ ಕೊನೆಗೆ ಕರ್ನಾಟಕಕ್ಕೆ ಸ್ವತಂತ್ರ ಸಂಸ್ಥೆಗಳು ಬೇಕೆಂಬ ಸಿದ್ಧಾಂತಕ್ಕೆ ಬಂದು ತಲುಪಿದೆ. ನನ್ನ ಜೀವನದಲ್ಲಿಯ ಮೊದ

ಲಿನ ಹತ್ತೆಂಟು ವರ್ಷಗಳು ಮಹಾರಾಷ್ಟ್ರದೊಡನೆ ಸಹಕಾರ ದಿಂದ ಸಾಗಿದವು ಮುಂದೆ, ಮಹಾರಾಷ್ಟ್ರದಲ್ಲಿ ಪ್ರಾಂತಿಕ ಅಭಿಮಾನವನ್ನು ಮೀರಿದ ದೇಶಾಭಿಮಾನದ ಕೊರತೆಯ ಮೂಲಕವೂ ಕರ್ನಾಟಕದಲ್ಲಿಯ ಸ್ವಾಭಾವಿಕವಾದ ಜಾಗ್ರತಿಯ ಮೂಲಕವೂ ಕರ್ನಾಟಕಕ್ಕೆ ಬೇರಬೇರೆ ಸಂಸ್ಥೆಗಳನ್ನು ಹುಟ್ಟಿಸುವುದು ನನಗೆ ಅಗತ್ಯವಾಯಿತು. ಹುಟ್ಟಿಸಿದೆ ಪೈಸಾ ಫಂಡಿಗೆ ಸೆಕ್ರೆಟರಿಯಾಗಿ ಅನೇಕ ವರ್ಷ ಫಂಡು ಕಳಿಸಿದೆ ಆದರೆ ಅದರಿಂದ ಕರ್ನಾಟಕಕ್ಕೂ ಲಾಭಮಾಡಿಕೊಡಬೇಕೆಂಬ ವಿಚಾರವೇ ಮರಾಟಿಗರಲ್ಲಿ ಉದಯವಾಗಲಿಲ್ಲ; ಆಗ, ಅದನ್ನು ಬಿಟ್ಟುಕೊಟ್ಟೆ. ಕರ್ನಾಟಕದಲ್ಲಿ ಪೈಸಾಫಂಡು ಕೂಡಿಸುವುದಕ್ಕೆ ಕನ್ನಡದಲ್ಲಿ ಪತ್ರಿಕೆ ವರದಿ ಮುಂತಾದವುಗಳನ್ನು ಹೊರಡಿಸುವುದು ಅವಶ್ಯವೆಂಬ ಸಾದಾ ಸಂಗತಿ ಸಹ ಅವರಿಗೆ ತಿಳಿಯಲಿಲ್ಲ. ೧೯೧೭ನೆಯ ಇಸ್ವಿಯಲ್ಲಿ ಜಾವಡೇಕರರೆಂಬವರು ಆ ಮಂಡಳದ ಪತಿಯಿಂದ ಇಲ್ಲಿಗೆ ಬಂದಿದ್ದರು ಅವರನ್ನು ನಾನು ಅನೇಕ ದಿವಸ ಮನೆಯಲ್ಲಿ ಇಟ್ಟುಕೊಂಡು, ನಿಜಸ್ಥಿತಿ ತಿಳಿಹೇಳಿದೆ. ಅವರು ಒಪ್ಪಿದರು. ಆದರೆ ಮುಂದೆ ಅದರಿಂದೇನೂ ಲಾಭವಾಗಲಿಲ್ಲ ಮಹಾರಾಷ್ಟ್ರದಲ್ಲಿಯೂ ಅಚ್ಯುತ ಬಳವಂತ ಕೋಲ್ಹಟಕರ, ಬಾಮಣಗಾಂವಕರ, ದತ್ತೋವಾಮನ ಪೋತದಾರ ಮುಂತಾದ ನನ್ನ ಕೆಲವು ಸ್ನೇಹಿತರು ಕರ್ನಾಟಕಕ್ಕೆ ಸಹಾನುಭೂತಿಯುಳ್ಳವರಾಗಿದ್ದರು. ಆದರೆ, ಒಟ್ಟಿನಮೇಲೆ ಮಹಾರಾಷ್ಟ್ರವು ಉದಾಸೀನವೇ ಆಯಿತು.

**ಕನ್ನಡ-ಮರಾಠಿ ವಾದ:** ಕರ್ನಾಟಕತ್ವವನ್ನು ಕುರಿತು ಬರೆಯುವಾಗ ಕನ್ನಡ-ಮರಾಠೀ ವಾದವನ್ನು ಕುರಿತು ಉಲ್ಲೇಖಿಸುವುದು ಅವಶ್ಯವಿದೆ. ನಿಜವಾಗಿ ಈ ವಾದಕ್ಕೆ ನಿಷ್ಕಾರಣ

ವಾಗಿ ಇಲ್ಲದ ಮಹತ್ವ ಉಂಟಾಗಿದೆಂದು ನನ್ನ ಅಭಿಪ್ರಾಯ ಮರಾಟಿಗರು ತುಸು ವಿಚಾರಮಾಡಿ ನೋಡಿದರೆ, ಈ ವಾದದ ಬೇರೇ ಕತ್ತರಿಸಿಬೀಳುವುದು ಮರಾಟಿಗರ ಹಟವನ್ನು ತೆಗ್ಗಿಸುವುದಕ್ಕೆ ಪ್ರಯತ್ನಮಾಡಿದ ಮುಖ್ಯ ವ್ಯಕ್ತಿಯೆಂದರೆ ಕಡಪಾ ರಾಘವೇಂದ್ರರಾಯರು. ಆದರ ಶ್ರೇಯವು ನನಗೆ ಅಷ್ಟೊಂದು ಇಲ್ಲ ಕರ್ತೃತ್ವಶಕ್ತಿಯಲ್ಲಿ ನನಗಿಂತ ಅವರು ಬಲಿಷ್ಠರು ಇಲ್ಲಿ, ಈ ಸಂಬಂಧದ ನನ್ನ ವಿಚಾರ ಮಾತ್ರ ಹೇಳುವೆ ಗಂಗಾಧರರಾವ ದೇಶಪಾಂಡೆ ಇವರಿಗೆ ೧೪-೬-೨೯ನೆಯ ದಿವಸ ಬರೆದ ಪತ್ರದಲ್ಲಿ ಅದನ್ನು ಕೊಟ್ಟಿರುವೆ ಅದರಲ್ಲಿ ಕೆಲವು ಭಾಗ ಹೀಗೆ ಇದೆ

"In olden days, there was the patriotism for the mother-tongue. In the new circumstances country's tongue is more important than mother tongue Therefore, I dont quarrel with those who have not grasped this new idea It is but natural that whenever there is strong patriotism for the mother-tongue it becomes more difficult for them to adjust themselves with this new idea. That is the reason in my opinion, why Maharastra people living in Karnatak cannot adjust themselves to Karnatak The second reason is the idea that is contained in बृहन्महाराष्ट्र. Some portion of it is, in my opinion, anti-national, and unless it is rooted out, there is no safety for nationalism. It is sowing seeds of bad nationalism everywhere. The far-reaching effects of it are not yet foreseen by many The

third reason lies in the selfish temperament of the Maharastrians, as a whole The merits and defects of Peshwai are still there.

But I have a robust faith in an indegenous movement. No power on earth can take from us what is ours, if we are but awake You should oppose tooth and nail every attack in a dignified way. I only want that you should realise that without the growth of this Karnatak Movement, no real work in Karnatak is possible. Some, why many, are under the impression that they can do political work without caring for this Karnatak spirit In my opinion it is an illusion I know full well that Non-Brahmins have now taken up this Karnatak movement from some other object But I am sure that in a few years the Non-Brahmin youths will take up this movement in the right spirit. If the Congress workers take up this movement, there will be no anti-nationalism in this movement.

I am not anxious about the opposition of the few Maharastrians living in Karnatak They are now actuated by the pan-Maharastrian ideas, which I regard as anti-national But because they are suicidal to themselves in the long run, I care a bit about them.

**ಕರ್ನಾಟಕವೂ ಕೇಸರಿ ಪತ್ರವೂ:** ಲೋಕಮಾನ್ಯರ 'ಕೇಸರಿ' ಪತ್ರವು ಕರ್ನಾಟಕದಲ್ಲಿ ಜಾಗ್ರತಿ ಮಾಡಿದುದನ್ನು ಹೇಳಿಯೇ ಇರುವೆ ಕರ್ನಾಟಕತ್ವದ ಉದಯವಾದ ಬಳಿಕ ಕೇಸರಿಯು ಮತ್ಸರಬುದ್ಧಿ ತಾಳಿ ವಿರುದ್ಧ ಲೇಖ ಬರೆಯಿತು. ಆಗ, ನಾನೇ ಅದರ ವಿರುದ್ಧ ಮೊದಲಿಗೆ ಲೆಕ್ಕಣಿಕೆ ಎತ್ತಿದೆ. ಕೇಳಕರ ಇವರು ಕರ್ಪೂರ ಶ್ರೀನಿವಾಸರಾಯರ ಸೂಚನೆಯ ಮೇರೆಗೆ, ಆ ಪ್ರಸಂಗದಲ್ಲಿ ಕ್ಷಮೆ ಬೇಡಿಕೊಂಡರೇನೋ ಸರಿ ಆದರೆ, ನಾಯಿಯ ಬಾಲ ಡೊಂಕೆಂಬಂತೆ, ಆ ಪತ್ರವು ಪುನಃ ತನ್ನ ಕಾಯಕವನ್ನೇ ನಡಿಸಿರುವುದು ಜಿ ಸಿ ಕರಂದೀಕರರು ತಮಗೆ ಮುಂಚೆ ಆಶ್ರಯ ಕೊಟ್ಟ ಧಾರವಾಡವನ್ನು ಮರೆತು ಬಿಟ್ಟು, ಬೃಹನ್ಮಹಾರಾಷ್ಟ್ರದ ನೆವದಿಂದ ತಪ್ಪು ರಾಷ್ಟ್ರೀಯತ್ವ ವನ್ನು ಹರಡಿ, ದೇಶಕ್ಕೆ ಘಾತಮಾಡುತ್ತಿರುವರು.

**ಮಹಾರಾಷ್ಟ್ರದಲ್ಲಿ ಶಿವಾಜಿಯ ಮಹಾ ಉತ್ಸವವೂ ನಾನೂ** - ೧೦-೧೧ ವರ್ಷಗಳ ಹಿಂದೆ ಮಹಾರಾಷ್ಟ್ರವು ಶಿವಾಜಿ ಮಹಾರಾಜರ ೩೦೦ ವರ್ಷದ ಉತ್ಸವ ಹೂಡಿತು ಆ ಉತ್ಸ ವವು ಮಹಾರಾಷ್ಟ್ರದ ಪುಷ್ಟಿಗೆ ಎಂದು ಸಾರಿತು. ಸಾರಲಿ ಆ ಉತ್ಸವದ ಕೇಂದ್ರ ಕಮಿಟಿಯಲ್ಲಿ ಶಿವಾಜಿಯ ಅಭಿಮಾನಿ ಗಳಾದ ಕನ್ನಡಿಗರನ್ನೂ ಸೇರಿಸಿಕೊಳ್ಳಬೇಕೆಂದು ಯೋಚಿಸಿತು ಯೋಚಿಸಲಿ ಶಿವಾಜಿಯ ಅಭಿಮಾನವನ್ನು ಮುಂದೆ ಚಾಚಿ, ನನ್ನನ್ನು ಆ ಕೇಂದ್ರ ಕಮಿಟಿಯಲ್ಲಿ ಸೇರಿಸಿಕೊಳ್ಳಲಿಕ್ಕೆ ಕೇಳಿತು ಹಾಗೆ ಮಾಡುವುದಕ್ಕೆ ನನ್ನದೇನೂ ಅಡ್ಡಿ ಇದ್ದಿಲ್ಲ. ಆದರೆ, ಪ್ರಕಟನೆಯಲ್ಲಿ ಬೆಳಗಾಂವಿ ಜಿಲ್ಹೆಯನ್ನು ಮಹಾ ರಾಷ್ಟ್ರದಲ್ಲಿ ಸೇರಿಸಿಕೊಂಡು, ಪ್ರಕಟನೆ ಹೊರಡಿಸಿತ್ತು. ಅದಕ್ಕೆ ಮಾತ್ರ ನನ್ನ ಒಪ್ಪಿಗೆ ಇಲ್ಲವೆಂದು ೨೧-೧-೧೯೩೪ ನೆಯ ದಿವಸ

ಕೇಳಕರ ಇವರಿಗೆ ಪತ್ರ ಬರೆದೆ. ಆ ಬಳಿಕ ನನ್ನ ಹೆಸರು ಕೇಂದ್ರ ಕಮೀಟಿಯಲ್ಲಿ ಏಕೆ ಹಾಕುತ್ತಾರೆ? ಕವಜಲಗಿ ಮತ್ತು ಬೆಳವಿಯವರ ಹೆಸರು ಹಾಕಿಕೊಂಡು ಕೆಲಸ ಸಾಗಿಸಿದರು!

**ಕರ್ನಾಟಕತ್ವದ ಬಗ್ಗೆ ನನ್ನ ಚಟುವಟಿಕೆಗಳು** — ಈ ವಿಚಾರವನ್ನು ಹರಡುವುದಕ್ಕೆ ನಾನು ಕೈಕೊಂಡ ಕೆಲವು ವಿಶಿಷ್ಟ ಮಾರ್ಗಗಳ ಉಲ್ಲೇಖ ಮಾತ್ರ ಇಲ್ಲಿ ಮಾಡುವೆ. ೧೯೧೬ ನೆಯ ಇಸ್ವಿಯಲ್ಲಿ, ಗದಿಗೆಯ್ಯಾ ಹೊನ್ನಾಪುರಮಠ ಇವರ ಅಟ್ಟದ ಮೇಲೆ ನಾನು, ಕಡಪಾ, ನರಗುಂದಕರ, ಹೊನ್ನಾಪುರಮಠ ಇವರೇ ನಾಲ್ಕಾರು ಜನರು ಕೂಡಿ ಸ್ಥಾಪಿಸಿದ ಕರ್ನಾಟಕಸಭೆಯೇ ಈ ವಿಷಯವನ್ನು ಸಮಗ್ರವಾಗಿ ಕೈಕೊಂಡ ಮೊದಲಿನ ಸಂಸ್ಥೆ ಅಲ್ಲಿಯ ವರೆಗೆ ಕರ್ನಾಟಕತ್ವದ ಕಲ್ಪನೆಯು ತುಣುಕು ತುಣುಕಾಗಿ ಹೊರಬೀಳುತ್ತಿತ್ತು. ೧೯೦೭ ನೆಯ ಇಸ್ವಿಯ ವಾಗ್ಭೂಷಣದ ಫೆಬ್ರುವರಿ ಸಂಚಿಕೆಯಲ್ಲಿ ನಾನು ಕರ್ನಾಟಕದ ರಾಜಕೀಯ ಏಕೀಕರಣದ ಬಗ್ಗೆ ಮಾಡಿದ ವಿಧಾನವೇ ಮೊದಲಿನೆಯದು ಆ ಮುಂಚೆ ಅಷ್ಟು ಸ್ಪಷ್ಟವಾದ ಉಲ್ಲೇಖವು ಆದದ್ದು ನನಗೆಲ್ಲಿಯೂ ದೊರೆತಿಲ್ಲ. ಅವರಲ್ಲಿ ನಾನು ಬರೆದದ್ದೇನೆಂದರೆ "ಜರಾಸಂಧನ ದೇಹದ ತುಂಡುಗಳಲ್ಲಿ ಸಮ್ಮೀಲನ ಶಕ್ತಿಯು ಇದ್ದಂತೆ, ನಮ್ಮ ಕನ್ನಡ ಭಾಷೆಯ ಈಗ ನಿರ್ಜೀವವಾಗಿರುವ ತುಂಡುಗಳಲ್ಲಿ ತಮ್ಮಷ್ಟಕ್ಕೆ ತಾವೇ ಸಮ್ಮೀಲನವಾಗುವ ಶಕ್ತಿಯು ಇಲ್ಲ; ಈ ಐದು ತುಂಡುಗಳನ್ನು ಒತ್ತಟ್ಟಿಗೆ ಕೂಡಿಸಿ, ಅವುಗಳಲ್ಲಿ ಜೀವಕಳೆಯನ್ನು ತುಂಬಿಸುವ ಭಾರವು ಕನ್ನಡಿಗರ ಮೇಲೆ ಇರುತ್ತದೆಂಬುದನ್ನು ಯಾರೂ ಮರೆಯಬಾರದು" ಆ ಕಾಲಕ್ಕೆ ಕರ್ನಾಟಕ ಏಕೀಕರಣದ ಕಲ್ಪನೆ ಎಸ್. ಜಿ. ನರಸಿಂಹಾಚಾರ್ಯರಂಥ ಕನ್ನ

ಡದ ಕಟ್ಟಭಿಮಾನಿಗಳಿಗೆ ಕೂಡ ಇರಲಿಲ್ಲ ಇಷ್ಟೇ ಅಲ್ಲ. ಅವರಿಗೆ ಅದು ಅಸಂಭವವಾಗಿಯೇ ತೋರುತ್ತಿತ್ತೆಂಬುದು ಅದೇ ವರ್ಷ ಅಂದರೆ ೧೯೦೭ ನೆಯ ಇಸ್ವಿಯ ಮೇ ತಿಂಗಳ ಕೊನೆಗೆ ಕೂಡಿದ ಗ್ರಂಥಕರ್ತರ ಸಮ್ಮೇಲನದ ತಮ್ಮ ಅಧ್ಯಕ್ಷ ಭಾಷಣದಲ್ಲಿ ಅವರು, ಈಗ ಕರ್ನಾಟಕ ದೇಶವು ನಾಲ್ಕು ಭಾಗಗಳಾಗಿದೆ ಮುಂತಾಗಿ ಹೇಳಿ ಕೊನೆಗೆ "ಅದು ಪುನಃ ಒಂದಾಗಿ ಸೇರುವ ಸಂಭವವಿಲ್ಲ ಎಂದು ತಗೆದ ಉದ್ಗಾರದಿಂದ ಗೊತ್ತಾಗುವುದು ೧-೬-೧೯೧೨ ನೆಯ ದಿವಸ ಬಾಪೂ ಸುಬ್ಬರಾಯರೆಂಬ ಮೈಸೂರ ವಿದ್ವಾಂಸರು ನನ್ನ ಅತಿಥಿಗಳಾಗಿದ್ದರು. ಆಗ, ಅವರಿಗೆ ಕರ್ನಾಟಕದ ರಾಜಕೀಯ ಏಕೀಕರಣದ ಆವಶ್ಯಕತೆಯನ್ನು ಮನಗಾಣಿಸಿಕೊಟ್ಟೆ ಅವರು ಮಾತ್ರ ಆ ವಿಷಯವನ್ನು ಚೆನ್ನಾಗಿ ಗ್ರಹಿಸಿದರು. ೧೯೧೩ ನೆಯ ಇಸ್ವಿಯಲ್ಲಿ ನನ್ನ ಸ್ನೇಹಿತರಾದ ಡಿ ಪ್ಹಿ ಗುಂಡಪ್ಪನವರು "Karnatak" ವೆಂಬ ಇಂಗ್ಲಿಷ ಪತ್ರಿಕೆ ಹೊರಡಿಸಿದರು ಆ ಪತ್ರಿಕೆಯ ಮೊದಲನೆಯ. ವರ್ಷದ ಮೊದಲನೆಯ ಸಂಚಿಕೆಯಲ್ಲಿಯೇ (೨—೪—೧೯೧೩) ನಾನು "The Unification of Kannadigas" ಎಂಬ ಲೇಖ ಮುದ್ರಿಸಿದೆ ೧೯೧೬ ರಲ್ಲಿ ಹೊನ್ನಾಪುರಮಠ ಇವರ ಮನೆಯಲ್ಲಿ ನಾನೂ ಅವರೂ ಕಡಪಾ ನರಗುಂದಕರ ಮುಂತಾದ ೪-೬ ಜನರು ಕೂಡಿ ಕರ್ನಾಟಕಸಭೆ ತೆಗೆದವು. ಕಡಪಾ ರಾಘವೇಂದ್ರರಾಯರು ಕಾರ್ಯದರ್ಶಿಗಳು ಆಗಿನಿಂದ ಕರ್ನಾಟಕದ ಏಕೀಕರಣಕ್ಕೆ ನವಚೈತನ್ಯವುಂಟಾಯಿತು ಮುಂದೆ ಶಾಂತೇಶ ವಾಚನಾಲಯ, ಕನ್ನಡಿಗರ ಕೂಟ, ಕನ್ನಡಿಗರ ಸಂಘ, ಕರ್ನಾಟಕ ಏಕೀಕರಣ ಸಂಸ್ಥೆ, ಕಾಂಗ್ರೆಸ್ಸಿನ ಏಕೀಕರಣ ಶಾಖೆ ಇವೇ ಮುಂತಾದವುಗಳೂ ಭಿನ್ನ ಭಿನ್ನ ರೀತಿಯಿಂದ ಏಕೀಕರ

ಣದ ಚಳವಳಿಯನ್ನು ಕೈಕೊಂಡಿವೆ. ಕರ್ನಾಟಕತ್ವದ ಪ್ರಚಾರ
ಕ್ಕಾಗಿಯೇ ಹೊರಟ ಪತ್ರಿಕೆಯೆಂದರೆ ಮಂಗಳವೇಢೆ ಸೀನೂನು
ತೆಗೆದ ‘ಕನ್ನಡಿಗ’ ಪತ್ರಿಕೆಯೊಂದೇ. ಅವನು ಅದನ್ನು ಕೆಲವು
ವರ್ಷ ನಡಿಸಿದನು. ಅದಕ್ಕೆ ದೈನಿಕ ಪತ್ರದ ಸ್ವರೂಪ
ಕೊಡಲಿಕ್ಕೆ ಕೆಲವು ತಿಂಗಳು ಸಾಹಸಪಟ್ಟ. ಆಗ ಅದಕ್ಕೆ
ನಾನು ಸಂಪಾದಕ.

**ಶಾಂತೇಶ ವಾಚನಾಲಯದ ಸ್ಮೃತಿ** — ಧಾರವಾಡದಲ್ಲಿ
ಕರ್ನಾಟಕತ್ವದ ಜಾಗ್ರತಿಯನ್ನು ನಡಿಸಿದ ಮುಖ್ಯ ಸಂಸ್ಥೆ
ಯೆಂದರೆ ಶಾಂತಕವಿಗಳ ಸ್ಮಾರಕವೆಂದು ಹೊರಟಿರುವ
ಶಾಂತೇಶ ವಾಚನಾಲಯವು. ಮೊದಲಿಗೆ ಹೊಸೂರ ಮುಂತಾ
ದವರು ಅವನ್ನು ತಮ್ಮ ದುಡಿತದಿಂದ ನಡಿಸಿದರು, ನಾನು ಅವ
ರಿಗೆ ಹಣದ ಸಹಾಯ ಮಾಡಿದೆ. ಜಯಕರ್ನಾಟಕ, ಸ್ವಧರ್ಮ
ಮುಂತಾದ ಮಾಸಪತ್ರಿಕೆಗಳೂ ಈ ವಿಚಾರಕ್ಕೆ ಮೀಸಲಾಗಿ
ದ್ದವು. ಶಾಂತೇಶವಾಚನಾಲಯವು ಉತ್ಸವ, ನಾಡಹಬ್ಬ
ಮುಂತಾದವುಗಳ ಮೂಲಕ ಈ ಕಾರ್ಯ ಮಾಡುತ್ತಿತ್ತು.
ಕನ್ನಡತನಕ್ಕೆ ಅದು ಆಶ್ರಯವಾಗಿತ್ತು. ಅದಕ್ಕೆ ನಾನು ಅನೇಕ
ವರ್ಷ ಅಧ್ಯಕ್ಷನಾಗಿದ್ದೆ. ಅದು ಒಂದು ಧರ್ಮಾರ್ಥ ವಾಚ
ನಾಲಯವನ್ನು ನಡಿಸುತ್ತಿತ್ತು. ಲೋಕಮಾನ್ಯರ ಸ್ಮಾರಕ
ವೆಂದು ಇಲ್ಲಿಯ ಶುಕ್ರವಾರ ಪೇಟೆಯ ವಾಚನಾಲಯದವರು
ಮೂರು ನೂರು ರೂಪಾಯಿಗಳನ್ನು “ಲೋಕಮಾನ್ಯ ವಾಚ
ನಾಲಯದ ಟ್ರಸ್ಟ್ ಫಂಡಿನ ಟ್ರಸ್ಟಿ” ಯೆಂದು ನನ್ನ ಹೆಸರಿ
ನಿಂದ ಅರ್ಬನ್ ಕೋ-ಆಪರೇಟಿವ್ಹ ಬ್ಯಾಂಕಿನಲ್ಲಿ ಇಟ್ಟರು. ಆ
ಬ್ಯಾಂಕು ದಿವಾಳಿ ತೆಗೆಯುವ ಸ್ಥಿತಿಗೆ ಬಂದಿತು. ಡಿಪಾಝಿಟ
ಹಣವೂ ಮುಳುಗಿ ಹೋಗುತ್ತಿತ್ತು. ನಾನು ಅದು ಧರ್ಮಾರ್ಥ

ಹಣವಾದುದರಿಂದ ಅದನ್ನಾದರೂ ತಿರುಗಿ ಕೊಡಬೇಕೆಂದು ಅನೇಕ ಅರ್ಜಿಗಳನ್ನು ಮಾಡಿದೆ ದಾದು ಹತ್ತಲಿಲ್ಲ ಹೊಸ ಕೇರಿ ಅಣ್ಣಾಚಾರ್ಯರು ಆ ಹಣವನ್ನು ವಸೂಲ ಮಾಡಿ ಕೊಳ್ಳುತ್ತೇವೆಂದು ಹೇಳಿದರು. ಹಾಗೆ ಮಾಡಲು ಹೇಳಿದೆ ಅವರು ಮಾಡಿಕೊಂಡರು ಕೆಲವು ವರ್ಷಗಳಲ್ಲಿ ಮುಟ್ಟಿಸಿದರು ಇಲ್ಲದಿದ್ದರೆ ಆ ಹಣ ಪೂರಾ ಮುಳುಗಿ ಹೋಗುತ್ತಿತ್ತು ಧಾರ ವಾಡದಲ್ಲಿ, ಬ್ಯಾಂಕಿನಲ್ಲಿ ಹಣ ಇಡುವದಕ್ಕಿಂತ ವ್ಯಕ್ತಿಯ ಕಡೆಗಿರುವುದು ಸುರಕ್ಷಿತವೆಂದು ಲೋಕಮಾನ್ಯ ವಾಚನಾಲಯ ದವರು ಬ್ಯಾಂಕಿನ ಬಡ್ಡಿಯ ದರದಿಂದ ನನ್ನ ಹತ್ತಿರ ಇಟ್ಟಿರು ತ್ತಾರೆ ಪ್ರತಿವರ್ಷ ಲೋಕಮಾನ್ಯ ವಕ್ತೃತ್ವ ಸ್ಪರ್ಧೆಯ ಸಲು ವಾಗಿ ಕೊಡುತ್ತ ಬಂದಿರುವೆ ಇತ್ತೀಚೆಗೆ ಕರ್ನಾಟಕತ್ವದ ಆ ಸಂಸ್ಥೆಯು ಕರ್ನಾಟಕ ವಿದ್ಯಾವರ್ಧಕ ಸಂಘವೆಂಬ ವಾಙ್ಮಯ ಸಂಸ್ಥೆಯಲ್ಲಿ ಅಡಕವಾಗಿಹೋಗಿದೆ ಕರ್ನಾಟಕತ್ವದ ಚಟು ವಟಿಕೆಗಳನ್ನು ನಡಿಸುವುದಕ್ಕೆ ಈಗ ಇಲ್ಲಿರುವ ಸಂಸ್ಥೆಯೆಂದರೆ ಕನ್ನಡಿಗರ ಸಂಘವೊಂದೇ. ಅದಕ್ಕೂ ನಾನು ಅಧ್ಯಕ್ಷನು ಆದರೆ, ಧಾರವಾಡದಲ್ಲಿ, ಕನ್ನಡತನದ ಚಟುವಟಿಕೆಗಳು ಇಳಿ ತರಹಕ್ಕೆ ಬಂದಿವೆಯೆಂದು ನನಗೆ ತೋರುತ್ತದೆ.

**ಕರ್ನಾಟಕತ್ವವೂ ವಿವಿಧ ಉತ್ಸವಗಳೂ** — ವಿದ್ಯಾ ರಣ್ಯ ಉತ್ಸವ, ನಾಡಹಬ್ಬ, ವಿಜಯನಗರ ಉತ್ಸವ, ಬಸ ವೇಶ್ವರ ಉತ್ಸವ, ನಿಜಗುಣ ಶಿವಯೋಗಿಗಳ ಉತ್ಸವ, ಕುಮಾರವ್ಯಾಸ ಉತ್ಸವ, ಪಂಪ ಉತ್ಸವ ಇವೇ ಮುಂತಾದ ವುಗಳು ಕರ್ನಾಟಕತ್ವವನ್ನು ಬಲಪಡಿಸುವುದಕ್ಕೆ ಕೈಕೊಂಡ ಉತ್ಸವಗಳು. ಇವೆಲ್ಲವುಗಳಲ್ಲಿ ನಾನು ಭಾಗ ತೆಗೆದುಕೊಂಡಿ ರುವೆ. ಹುಬ್ಬಳ್ಳಿ ಗದಗ ಹಾವೇರಿ ಬೆಂಗಳೂರುಗಳ ಬಸವೇಶ್ವರ

ಉತ್ಸವಗಳಿಗೆ ಆಮಂತ್ರಿತನಾಗಿ ಹೋಗಿ, ಕರ್ನಾಟಕತ್ವದ ವಿಚಾರ ಹರಡಿದೆ ೧೯೩೬ ನೆಯ ಇಸ್ವಿಯಲ್ಲಿ (೨೮-೨-೩೬) ಕಡೂರ ಹತ್ತಿರ ಎಳು ಓವನ ನಡದ ನಿಜಗುಣ ಶಿವಯೋಗಿಗಳ ಸ್ಮಾರಕದ ಸಾಹಿತ್ಯಸುಗ್ಗಿಯ ಉದ್ಘಾಟನ ಸಮಾರಂಭವನ್ನು ನೆರವೇರಿಸಲಿಕ್ಕೆ ಹೋಗಿ ಎರಡು ದಿವಸ ಅಲ್ಲಿ ಇದ್ದು ಕರ್ನಾಟಕತ್ವದ ಪ್ರಚಾರ ಮಾಡಿದೆ. ಹಾನಸಪಲ್ಲಿ ಕುಮಾರವ್ಯಾಸರ ಸ್ಮಾರಕೋತ್ಸವ ಜರಗಿಸಿದೆ ವಿಜಯನಗರದ ಮಹಾ ಉತ್ಸವಕ್ಕೆ ಉಪಾಧ್ಯಕ್ಷನಾಗಿದ್ದೆ

**ಅಖಿಲ ಕರ್ನಾಟಕ ವಿಶ್ವವಿದ್ಯಾಲಯದ ಸ್ಮೃತಿ**— ಅಖಂಡ ಕರ್ನಾಟಕವನ್ನು ನಿರ್ಮಾಣ ಮಾಡುವುದಕ್ಕೆ ಹುಟ್ಟಿದ ಮತ್ತೊಂದು ಮಹತ್ವದ ಸಂಸ್ಥೆಯೆಂದರೆ ಅಖಿಲಕರ್ನಾಟಕಕ್ಕೆ ಒಂದೇ ವಿಶ್ವವಿದ್ಯಾಲಯವನ್ನು ಮಾಡಲಿಕ್ಕೆ ಪ್ರಯತ್ನಪಡುವ ಸಂಸ್ಥೆ ಬಳ್ಳಾರಿ ಜಿಲ್ಲೆಯನ್ನು ಆಂಧ್ರ ವಿಶ್ವವಿದ್ಯಾಲಯಕ್ಕೆ ಕೂಡಿಸಬೇಕೆಂದು ಆಂಧ್ರರು ಪ್ರಯತ್ನಿಸಿದಾಗ ಈ ಸಂಸ್ಥೆ ಹೊರಟಿತು. ಅದಕ್ಕೆ ನಾನೂ ಬಸವನಾಳರೂ ಕಾರ್ಯದರ್ಶಿಗಳು ಮೈಸೂರ ವಿಶ್ವವಿದ್ಯಾಲಯವನ್ನೇ ಅಖಿಲ ಕರ್ನಾಟಕದ ವಿಶ್ವವಿದ್ಯಾಲಯವನ್ನು ಮಾಡಬಹುದೆಂದು ನಾವಿಬ್ಬರೂ ನಿರ್ಣಯಿಸಿದೆವು. ಆ ಮಾರ್ಗದಲ್ಲಿ ಲೇಖ ಪ್ರಕಟನೆ ಮುಂತಾದವುಗಳ ಮೂಲಕ ಪ್ರಯತ್ನಪಟ್ಟೆವು ಕಡಪಾ ರಾಘವೇಂದ್ರರಾಯರು ಮದ್ರಾಸಿಗೆ ಹೋಗಿ, ಅಲ್ಲಿಯ ಕಾಯದೆ ಕೌನ್ಸಿಲಿನ ಸಭಾಸದರ ಮುಂದೆ, ಕರ್ನಾಟಕಕ್ಕಾಗುವ ಅನ್ಯಾಯವನ್ನು ಇಟ್ಟರು ಇತ್ತ ನಾನೂ ಕವಜಲಗಿ ಶ್ರೀನಿವಾಸರಾಯರೂ ಮುದವೇಡೇಕರ ಕೃಷ್ಣರಾಯರೂ ಮೈಸೂರಿಗೆ ಹೋಗಿ ಮೈಸೂರಿನವರ ಮನವೊಲಿಸಲಿಕ್ಕೆ ಪ್ರಯತ್ನಿಸಿದೆವು. ಮಿರಝೂ

ಇಸ್ಮಾಯಿಲರ ( ಅಂದರೆ ೧೯೩೫ ರಲ್ಲಿ ಆಗ ಮಹಾರಾಜರ ಪ್ರಾಯವ್ಹೆಟ ಸೆಕ್ರೆಟರಿಗಳು ) ಇವರನ್ನು ೨—೧೦—೧೯೩೫ ನೆಯ ಇಸ್ವಿಯ ದಿವಸ ಭೆಟ್ಟಿಯಾಗಿ ಅವರ ಸಹಾನುಭೂತಿ ಯನ್ನು ಸಂಪಾದಿಸಿದೆವು ಇವೆಲ್ಲವುಗಳ ಪರಿಣಾಮವಾಗಿ, ಬಳ್ಳಾರಿ ಜಿಲ್ಲೆಯು ಆಂಧ್ರವಿಶ್ವವಿದ್ಯಾಲಯಕ್ಕೆ ಜೋಡಿಸಲ್ಪಡು ವುದು ಉಳಿಯಿತು. ಆದರೆ, ಮೈಸೂರಿನ ವಿಶ್ವವಿದ್ಯಾಲಯವನ್ನು ಕರ್ನಾಟಕದ್ದಾಗಿ ಮಾಡುವ ಚಳವಳಿಯು ಮುಂದುವರಿಯ ಲಿಲ್ಲ. ಸಂಸ್ಥಾನಕ್ಕೆ ಕೂಡುವುದಕ್ಕೆ ಇಲ್ಲಿಯವರ ವಿರೋಧ ಸಂಸ್ಥಾನದವರಿಗೆ ಅಖಿಲ ಕರ್ನಾಟಕ ದೃಷ್ಟಿ ಸಾಕಷ್ಟು ಇಲ್ಲ ಹೀಗಾಗಿ ಅದು ನೆನೆಗುದಿಗೆ ಬಿದ್ದಿದೆ ಮಂಗಳೂರು ಮತ್ತು ಮೈಸೂರು ಸಾಹಿತ್ಯಸಮ್ಮೇಲನಗಳಲ್ಲಿ ಆ ಬಗ್ಗೆ ಕಮೀಟಿ ಗಳೇನೋ ಆದವು. ಕೆಲಸವಾಗಲಿಲ್ಲ ಮೈಸೂರಿನ ಕಮೀಟಿಗೆ ಶ್ರೀಕಂಠಯ್ಯನವರು ಅಧ್ಯಕ್ಷರು ನಾನು ನನ್ನ ಕಡೆಗೆ ಇದ್ದ ಬಿದ್ದ ಆ ಸಂಬಂಧದ ಹೊತ್ತಿಗೆಗಳನ್ನೆಲ್ಲ ಅವರ ಕಡೆಗೆ ಗುಡ್ಸ ಮಾಡಿ ಕಳಿಸಿಕೊಟ್ಟೆ. ಮುಂದೆ ವರುಷದ ಮೇಲೆ ಅವು ಗುಡ್ಸ ದಿಂದ ಹಾಗೇ ತಿರುಗಿ ಬಂದವು ಸಾಸನೂರ ಇವರು ಆ ಕಾರ್ಯ ನಡಿಸುತ್ತೇವೆಂದು ಹೇಳಿದ್ದರು. ಅವರ ಕಡೆಗೆ ಆ ಕಾಗದಪತ್ರ ಕೊಟ್ಟೆ ಅವರು ಆಕಸ್ಮಿಕವಾಗಿ ತೀರಿಕೊಂಡದ್ದ ರಿಂದ, ಅವುಗಳಲ್ಲಿ ಕೆಲವು ಮಾತ್ರ ನನ್ನ ಕೈಗೆ ಹತ್ತಿವೆ. ಈ ವಿಶ್ವವಿದ್ಯಾಲಯದ ವಿಚಾರವನ್ನು ಅಂತಃಕರಣಪೂರ್ವಕವಾಗಿ ಎತ್ತಿಹಿಡಿದ ವ್ಯಕ್ತಿಯೆಂದರೆ ನನ್ನ ಮಿತ್ರರಾದ ಎನ್ ಎಸ್. ಸುಬ್ಬರಾಯರು ( ಈಗಿನ ಮೈಸೂರ ವಿಶ್ವವಿದ್ಯಾಲಯದ ವ್ಹಾಯಿಸ್ ಚ್ಯಾನ್ಸಲರರು). ಅವರೂ ನಾವು ಕೂಡಿ Federated Colleges ಅಂದರೆ ಸಮಾನಸ್ಕಂಧವಾಗಿ ಉತ್ತರ ಕರ್ನಾಟಕದ

ಕಾಲೇಜುಗಳನ್ನು ಕರ್ನಾಟಕ ವಿಶ್ವವಿದ್ಯಾಲಯಕ್ಕೆ (ಮೈಸೂರು ವಿಶ್ವವಿದ್ಯಾಲಯಕ್ಕಲ್ಲ) ಜೋಡಿಸುವ, ಮತ್ತು ಕಚೇರಿಗಳನ್ನು ಮಾತ್ರವೇ ಮೈಸೂರಿನಲ್ಲಿ ಇಡುವ ಯೋಜನೆಯನ್ನು ಸಿದ್ಧಪಡಿಸಿ, ಎಲ್ಲರನ್ನೂ ಸಮಾಧಾನಗೊಳಿಸಬೇಕೆಂದೆವು ಯುನಿವ್ಹರ್ಸಿಟಿ ಬಿಲ್ಲನ್ನೇ ನಾನು ತಯಾರು ಮಾಡಿ, ಟಾಯಿಪ ಮಾಡಿಸಿ, ಕಮೀಟಿಯ ಮೆಂಬರರಿಗೆ ಹಂಚಿದೆ ಒಬ್ಬರಿಂದಲೂ ಉತ್ತರ ಬರಲಿಲ್ಲ ಹಣದ ಅಭಾವದ ಮೂಲಕ ಮತ್ತು ಚಳವಳಿಯನ್ನು ಮಾಡುವವರಿಲ್ಲದ ಮೂಲಕ, ಆ ಕೆಲಸವೂ ಅಲ್ಲಿಯೇ ಉಳಿದಿದೆ

**ಕರ್ನಾಟಕ ರಾಷ್ಟ್ರೀಯ ಪರಿಷತ್ತು** —೧೯೨೦ ನೆಯ ಇಸ್ವಿಯಲ್ಲಿ ನಾನು ಧಾರವಾಡದಲ್ಲಿ ನಿವೃತ್ತ ದಿವಾಣ ವ್ಹಿ ಪಿ. ಮಾಧವರಾಯರ ಅಧ್ಯಕ್ಷತೆಯಲ್ಲಿ ಕೂಡಿಸಿದ ಅಖಿಲ ಕರ್ನಾಟಕ ರಾಷ್ಟ್ರೀಯ ಪರಿಷತ್ತೇ, ಈ ವಿಷಯದ ನನ್ನ ಪ್ರಯತ್ನದ ಕಳಸ. ಆ ಪರಿಷತ್ತಿಗೆ ಸುಮಾರು ೨೦೦೦ ಪ್ರತಿನಿಧಿಗಳು ಕೂಡಿದ್ದರು ಕರ್ನಾಟಕಕ್ಕೆ ಸಂಬಂಧಪಟ್ಟ ಯಚ್ಚಾವತ್ತು ವಿಷಯಗಳು ಚರ್ಚಿಸಲ್ಪಟ್ಟವು ಅಂಥ ಪರಿಷತ್ತುಗಳನ್ನು ಪ್ರತಿವರ್ಷ ಕೂಡಿಸಬೇಕೆಂದೂ, ಒಂದು ಶಾಶ್ವತ ಸಂಸ್ಥೆಯನ್ನು ಸ್ಥಾಪಿಸಬೇಕೆಂದೂ ನನ್ನ ಮನಸ್ಸಿನಲ್ಲಿತ್ತು ಆದರ ಮುಂದೆ ತೀವ್ರವೇ ಅಸಹಕಾರ ಚಳವಳಿಯು ಪ್ರಾರಂಭವಾಯಿತು ಈ ಪ್ರಶ್ನೆ ಹಿಂದೆ ಬಿದ್ದಿತು. ಅಖಿಲ ಕರ್ನಾಟಕ ರಾಜಕೀಯ ಪರಿಷತ್ತುಗಳು ಕೂಡಹತ್ತಿದವು ಅವು ರಾಷ್ಟ್ರೀಯ ಅಂದರೆ ಸಾಂಸ್ಕೃತಿಕ ಮತ್ತು ರಾಜಕೀಯ ಮುಂತಾದ ಯಾವತ್ತು ಪ್ರಶ್ನೆಗಳನ್ನು ಚರ್ಚಿಸುವ ಈ ಪರಿಷತ್ತನ್ನು ನುಂಗಿಬಿಟ್ಟವು. ಈಗ, ಇಡೀ ಕರ್ನಾಟಕದ ಪ್ರಶ್ನೆಗಳನ್ನು ವಿಚಾರ ಮಾಡುವು

ವಕ್ಕೆ ಒಂದು ಸಂಸ್ಥೆಯು ಕೂಡ ಇಲ್ಲ ಒಂದು ಪರಿಷತ್ತೂ ಇಲ್ಲ. ಆದಕಾರಣ, ಕರ್ನಾಟಕಕ್ಕೆ ಬೇಕಾದ ನೀರ ಕಾಲುವೆ, ಬಂದರು, ಹಾಯಕೋರ್ಟ, ವಿಶ್ವವಿದ್ಯಾಲಯ, ರೇಲ್ವೆಗಳು, ಪ್ರೋಸ್ಟಿನ ಅನಾನುಕೂಲತೆಗಳು, ಮೋಟಾರ ಅನಾನುಕೂಲತೆಗಳು, ರಸ್ತೆಗಳು, ಸೇತುವೆಗಳು, ರಾಜಧಾನಿ ಪಟ್ಟಣ, ಆಂಧ್ರ-ಮರಾಟಿಗರ ಆಕ್ರಮಣ, ಕನ್ನಡ ಶಾಲೆಗಳು, ವಿವಿಧ ಕಾಲೇಜುಗಳು, ಗಡಿನಾಡಿನ ಜಾಗ್ರತಿ, ಸಂಗೀತ ನಾಟಕ ಸಿನೆಮಾ ಮುಂತಾದವುಗಳ ಪ್ರಶ್ನೆ, ವಾಚನಾಲಯಗಳು, ಒಳನುಡಿಗಳ ಪ್ರಶ್ನೆ, ಹಿಂದೀ ಸಂಸ್ಕೃತ ಮುಂತಾದವುಗಳ ಪ್ರಶ್ನೆ, ಕನ್ನಡಿಗರ ಸಂಘಗಳು (ಕನ್ನಡ ಸಂಘಗಳು ಅಲ್ಲ), ಪಟ್ಟಣ-ಹಳ್ಳಿಗಳ ರಚನೆ ಇವೇ ಮುಂತಾದ ಅಖಿಲ ಕರ್ನಾಟಕದ ದೃಷ್ಟಿಯಿಂದ ಬಿಡಿಸತಕ್ಕ ನೂರಾರು ಪ್ರಶ್ನೆಗಳು ಕೇಳುವವರು ದಿಕ್ಕಿಲ್ಲದೆ ಕೊಳೆಯುತ್ತ ಬಿದ್ದಿವೆ. ಅವನ್ನು ಸಾಕ್ಷಾತ್ತಾಗಿ ಬಿಡಿಸಲಿಕ್ಕೆ ಒಂದು ಸಂಸ್ಥೆಯೂ ಇಲ್ಲ ವ್ಯಾಪಾರೀ ಪರಿಷತ್ತು, ಆಯುರ್ವೇದ ಪರಿಷತ್ತು, ಮುಂತಾದವುಗಳು ಹುಟ್ಟಿದಂತೆ, ಆಯಾ ವಿಷಯಗಳ ಬಗ್ಗೆ ಪ್ರತ್ಯೇಕ ಸಂಸ್ಥೆಗಳು ಹುಟ್ಟುವವರೆಗಾದರೂ ಕರ್ನಾಟಕದ ಹಿತವನ್ನು ರಕ್ಷಿಸುವ ಒಂದು ಸಂಸ್ಥೆಯಾದರೂ ಬೇಕಲ್ಲವೆ? ನನ್ನ ದೃಷ್ಟಿಯಲ್ಲಿ, ಫ಼ಿ ಪಿ ಮಾಧವರಾಯರಷ್ಟು ವಿಶಾಲವಾದ ಮತ್ತು ತೀಕ್ಷ್ಣವಾದ ದೃಷ್ಟಿಯುಳ್ಳ ರಾಜಕಾರಣ ಧುರಂಧರರನ್ನು ನಾನು ಈವರೆಗೆ ಕಂಡಿಲ್ಲ. ವಸ್ತುತಃ ಅವರು ಕರ್ನಾಟಕದ ಚಳವಳಿಯಲ್ಲಿ ಎಂದೂ ಇಲ್ಲದವರು. ಆದರೆ, ರಾಷ್ಟ್ರೀಯ ಪರಿಷತ್ತಿನ ಕಾರ್ಯದರ್ಶಿಯೆಂದು ನಾನು ಮತ್ತು ಬ್ಯಾರಿಸ್ಟರ ಸೆಟಲೂರ ಅವರು ಅವರಿಗೆ ಭೆಟ್ಟಿಯಾಗಿ, ಕರ್ನಾಟಕದ ಚಳವಳಿಯ ಮರ್ಮವನ್ನು ಅವರಿಗೆ ತಿಳಿಸಿ ಹೇಳಿ

ದಾಗ, ಅವರು ಅರ್ಧಗಂಟೆಯಲ್ಲಿ ಅದನ್ನು ಗ್ರಹಿಸಿ, ಸಮಗಾರಿಗೂ ಕೂಡ ತಿಳಿಯದಿರದಷ್ಟು ವ್ಯಾಪಕ ದೃಷ್ಟಿಯಿಂದ, ತಮ್ಮ ಅಧ್ಯಕ್ಷಭಾಷಣದಲ್ಲಿ ಅದರ ವಿವೇಚನೆ ಮಾಡಿದರು ಮೂರು ಸಂಸ್ಥಾನಗಳ ದಿವಾಣರಾಗಿದ್ದರೂ, ಇಡೀ ಹಿಂದುಸ್ಥಾನದ ಸ್ವಾತಂತ್ರ್ಯಕ್ಕಾಗಿ ಹೋಮರೂಲ ಲೀಗಿನ ಪ್ರತಿನಿಧಿಗಳಾಗಿದ್ದರೂ ಕರ್ನಾಟಕತ್ವವನ್ನು ಪ್ರಚಾರ ಮಾಡುವುದಕ್ಕೆಂದು ಬಳ್ಳಾರಿ ಜಿಲ್ಹೆಯಂಥ ಒಂದು ಸಣ್ಣ ಜಿಲ್ಲೆಯ ರಾಜಕೀಯ ಪರಿಷತ್ತಿಗೆ ಅಧ್ಯಕ್ಷರಾಗಲು ಒಪ್ಪಿ, ಅಲ್ಲಿ ಕರ್ನಾಟಕದ ಏಕೀಕರಣದ ಗೊತ್ತುವಳಿಯನ್ನು ಮಂಜೂರು ಮಾಡಿಕೊಂಡರು! ಕೀರ್ತನ ಸಮ್ಮೇಲನಕ್ಕೂ ಇದೇ ಉದ್ದೇಶದಿಂದ ಪ್ರೆಸಿಡೆಂಟರಾದರು! ಇದಕ್ಕಿನ್ನ ಬೇಕು ರಾಜಕಾರಣ ಧುರಂಧರತೆಯೆಂದು!

**ಕರ್ನಾಟಕತ್ವದ ಪ್ರಚಾರಕ್ಕೆ ಪದವೀಧರರು**—ನಾನು ಸಂಕಲ್ಪಿಸಿಕೊಂಡ ಕರ್ನಾಟಕದ ಕಾರ್ಯವು ಅತಿಶಯ ವ್ಯಾಪಕವಾಗಿತ್ತೆಂಬುದೂ ಅದು ನನ್ನೊಬ್ಬನಿಂದ ಸಾಧ್ಯವಿಲ್ಲವೆಂಬುದೂ ನನಗೆ ಗೊತ್ತಿತ್ತು ಆ ಕಾರ್ಯವನ್ನು ಮುಂದುವರಿಸಲಿಕ್ಕೆ ಭಿನ್ನ ಭಿನ್ನ ಕ್ಷೇತ್ರಗಳಲ್ಲಿ ಕೆಲಸಮಾಡುವುದಕ್ಕೆ ಭಿನ್ನ ಭಿನ್ನ ಅಭಿರುಚಿಯುಳ್ಳ ತರುಣ ಪದವೀಧರರ ತಂಡವೊಂದು ಸಿದ್ಧವಾಗಬೇಕೆಂದು ನಾನು ಹಾತೊರೆದೆ ಈ ವಿಷಯವನ್ನು ಹಿಂದಕ್ಕೆ (ಪು. ೭೮) ತುಸು ಪ್ರಸ್ತಾಪಿಸಿರುವೆ. ಇಲ್ಲಿ ವಿಸ್ತರಿಸುವೆ. ೧೯೧೦ ರಲ್ಲಿ, ರಾಷ್ಟ್ರೀಯ ಶಾಲೆ ನಿಂತಾಗ, ಈ ವಿಚಾರ ಜೋರಿನಿಂದ ಬರಹತ್ತಿತು. (೧) ವಿಕ್ಟೋರಿಯಾ ಹಾಯಸ್ಕೂಲಿನ ಪುನರ್ಘಟನೆ (೨) ಖಾಸಗೀ ಕಾಲೇಜದ ಸ್ಥಾಪನೆ (೩) ಕರ್ನಾಟಕ ಮಹಿಲಾ ವಿದ್ಯಾಲಯದ ಸ್ಥಾಪನೆ ಮುಂತಾದ ರೂಪಗಳಲ್ಲಿ ಅದು ಮುಂದೆ ಹೊರಬಿದ್ದಿತು. ಆಗಿನ ನನ್ನ

ಡಾಯರಿಗಳೊಳಗಿನ ಅವತರಣಿಕೆಗಳಿಂದ ನನ್ನ ವಿಚಾರಗಳು ಗೊತ್ತಾಗುವವು. ೧೩-೧-೧೯೧೦ನೆಯ ದಿವಸದ ಡಾಯರಿ ಯಲ್ಲಿ ದೇಶಪಾಂಡೆ ಜಯರಾಯರಿಗೆ ಉಪದೇಶಮಾಡಿದ ಬಗ್ಗೆ —" ಕೇವಲ ಸ್ವಂತದಮೇಲೆ ಅವಲಂಬಿಸಿ ಬರತಿದ್ದರೆ ಬರಲಿಕ್ಕೆ ಹೇಳಿದೆ ಅವರಲ್ಲಿ ಇನ್ನೂ ಆತ್ಮವಿಶ್ವಾಸ ಹುಟ್ಟಿಲ್ಲ ಅವರ ವಿಚಾರಗಳು ಪಕ್ವವಾಗಿಲ್ಲ ಒಮ್ಮೆ ವರ್ತಮಾನಪತ್ರ ತೆಗೆಯಬೇಕೆನ್ನುತ್ತಾರೆ .ಅವರು ಯಾವುವೇ ಚಳವಳಿ ಮಾಡಿ ದರೂ ನಾನು ಸಹಾಯ ಮಾಡತೀನಿ ಕರ್ನಾಟಕದೊಳಗೆ ಸ್ವಾರ್ಥತ್ಯಾಗಿ ಜನರು ಹುಟ್ಟಿದರ ಸಾಕು ಅಂತಾ ಹೇಳಿದೆ. ನನ್ನ ಪಾಲಿಗೆ ಬಂದರೆ ಒಂದು ವರ್ಷದ ತನಕ ಹೊಟ್ಟೀ 'ಗ್ಯಾರಂಟಿ' ತಗೋತೀನಿ " ದೇಶಪಾಂಡೆ ಜಯರಾಯರು ಧಾರವಾಡಕ್ಕೆ ಬಂದು ನಮ್ಮ ಮನೆಯಲ್ಲಿಯೇ ಇದ್ದುಕೊಂಡು' ವ್ಹಿಕ್ಟೋರಿಯಾ ಹಾಯಸ್ಕೂಲನ್ನು ತಮ್ಮ ವಶಕ್ಕೆ ತೆಗೆದು ಕೊಳ್ಳಲಿಕ್ಕೆ ಒಂದು ವರ್ಷ ಪ್ರಯತ್ನಿಸಿದರು. ಸಾಧ್ಯವಾಗ ಲಿಲ್ಲ ಮುಂದೆ ,ಅವರು ವಿಜಾಪುರದಲ್ಲಿ ವಕೀಲಿಮಾಡಿ, ಕರ್ನಾಟಕವೈಭವದ ಮುಖಾಂತರ ಮಾಡಿದ ದೇಶಸೇವೆ ಪ್ರಸಿದ್ಧವೇ ಅದೆ

**ವ್ಹಿಕ್ಟೋರಿಯಾ ಹಾಯಸ್ಕೂಲಿನ ಪುನರ್ಘಟನೆ :—** ೧೯೧೨ ನೆಯ ಇಸ್ವಿಯ ಪ್ರಾರಂಭಕ್ಕೆ ಈ ಕಾರ್ಯ ಎತ್ತಿದೆ ಅಲ್ಲಿ ಒಬ್ಬ ಪದವೀಧರನೂ ಆಜೀವ ಸದಸ್ಯನಾಗಿರಲಿಲ್ಲ. ಅನೇಕ ಪದವೀಧರರ ಮನವೊಲಿಸಲಿಕ್ಕೆ ಶ್ರಮಪಟ್ಟೆ. ೩೧-೩-೧೯೧೨ ನೆಯ ದಿವಸ ನಾನು ಜಹಾಗೀರದಾರ ರಂಗಾಚಾರ್ಯ ಮುಂಬಯಿ ಹಾಯಕೋರ್ಟಿನ ಈಗಿನ ಸರಕಾರೀ ವಕೀಲರು) ಇವರಿಗೆ ಬರೆದ ಅತಿ ಉದ್ದವಾದ ಪತ್ರದ ಸಂಬಂಧದ ಉಲ್ಲೇಖ

ನನ್ನ ಡಾಯರಿಯಲ್ಲಿ—"Today I wrote a letter to
Jahagirdar in which I stated my long cherished
object of forming a nucleus body of young graduates
with Victoria High School as the centre, for the
regeneration of Karnatak. I am strongly of
opinion that unless such a body of graduates,
who sacrifice all their prospects for the good of
the country is formed, no real work can begin."
ಜಹಾಗೀರದಾರರು "ಕರ್ನಾಟಕದ ಭಾಗ್ಯ ರವಿಯು ಉದಯ
ವಾಗುವನೋ" ಎಂಬ ವಿಷಯದ ಬಗ್ಗೆ ಒಂದು ಪತ್ರ ನನಗೆ
ಬರೆದಿದ್ದರು. ಅದಕ್ಕೆ ನಾನು ಕೊಟ್ಟ ಉತ್ತರ ಮೇಲೆ ಉಲ್ಲೇಖಿ
ಸಿದ ನನ್ನ ಪತ್ರ ಅವರು ಚಾಣಾಕ್ಷರು ಬಲೆಯಲ್ಲಿ ಸಿಗ
ಲಿಲ್ಲ ಮುಂದೆ ಅವರ ಭಾಗ್ಯರವಿ ಉದಯವಾದನು. ಈಗ
ಅವರು ಇಹಪರವೆರಡನ್ನೂ ಸಾಧಿಸುತ್ತಿದ್ದಾರೆ ಅವರ ಮನೆ
ಕನ್ನಡಿಗರಿಗೆ ಅನ್ನಛತ್ರ ಆದರೆ, ಔದಾರ್ಯದಲ್ಲಿಯೂ ತೂಕ,
ತಾರತಮ್ಯ ಅವರ ಬುದ್ಧಿವಂತಿಕೆ ಮತ್ತು ವ್ಯವಹಾರ ಕುಶಲತೆ
ಗಳು ಅವರನ್ನು ಲೋಕಪ್ರಿಯರನ್ನಾಗಿ ಮಾಡಿವೆ. ಆದರೆ,
ಅವರು ಸ್ವಾರ್ಥತ್ಯಾಗ ಮಾಡಿದ್ದರೆ, ಕರ್ನಾಟಕಕ್ಕೆ ಒಬ್ಬ
ಉತ್ಕೃಷ್ಟ ಮುಖಂಡರು ದೊರಕಿ, ಇದಕ್ಕಿಂತ ಹೆಚ್ಚು ಲಾಭ
ವಾಗುತ್ತಿತ್ತೆಂದು ಇನ್ನೂ ನನ್ನ ಮತ ಅವರು ಕ್ಷಮಿಸಬೇಕು.
ಇರಲಿ. ಪದವೀಧರರನ್ನು ಕುರಿತು ಹೀಗೆ ಬೇಟೆಯಾಡುತ್ತಿರು
ವಾಗ, ನನಗೆ ಗುತ್ತಲ ರಂಗಾಚಾರ್ಯರೇ ಮುಂತಾದ ಹಲವು
ಪದವೀಧರರು ದೊರೆತರು. ಅವರು ಹಿಂದುಮುಂದಿನ ವಿಚಾರ
ವಿಲ್ಲದೆ, ಸ್ವಾರ್ಥತ್ಯಾಗಕ್ಕೆ ಧುಮುಕಿದರು! ವ್ಹಿಕ್ಟೋರಿಯಾ
ಹಾಯಸ್ಕೂಲಿನಲ್ಲಿ ಅವರನ್ನು ಸೇರಿಸಲಿಕ್ಕೆ ನಿಶ್ಚಯಿಸಿದೆ.

ಕಿರ್ಲೋಸ್ಕರ ಶಂಭುರಾಯರು ನಿಯಮಾವಳಿಯನ್ನು ಮಾಡಿ ಕೊಡಲಿಕ್ಕೆ ನನಗೆ ಹೇಳಿದರು ಆಲೂರಲ್ಲಿ ಕೂತುಕೊಂಡು ಒಂದೆರಡು ತಿಂಗಳಲ್ಲಿ ನಿಯಮಾವಳಿಯನ್ನು ಸಿದ್ಧಪಡಿಸಿದೆ ನರಗುಂದ ರಾಮರಾಯರ ಮನೆಯಲ್ಲಿ ಪ್ರತಿನಿತ್ಯ ಸಭೆಗಳು ಕೂಡಿ ಅವು ಚರ್ಚಿತವಾದವು ೧೦-೧೧-೧೯೧೨ ನೆಯ ದಿವಸ ಅವು 'ಗವ್ಹರ್ನಿಂಗ ಬಾಡಿ'ಯಲ್ಲಿ ಮಂಜೂರಾದವು ಈ ಮಧ್ಯೆ ೯-೯-೧೨ ನೆಯ ದಿವಸದ ಡಾಯರಿಯಲ್ಲಿಯ ಅವತರಣಿಕೆ. "ಧಾರವಾಡದಲ್ಲಿ ಸಾರ್ವಜನಿಕ ಕೆಲಸಗಳನ್ನು ಮಾಡಲಿಕ್ಕೆ ಸಿದ್ಧರಾದ ಕೆಲವು ತರುಣ ಪದವೀಧರರ ಕೇಂದ್ರವನ್ನು ಸ್ಥಾಪಿಸುವ ನನ್ನ ಮನೋರಥವು ಎಂದಿಗೆ ಸಾಧ್ಯವಾಗುವುದೋ ದೇವರೆ ಬಲ್ಲ! ಹಾಗೆ ಮಾಡಿದ ಹೊರತು, ಮಾಸಿಕ ಪುಸ್ತಕವನ್ನು ತೆಗೆಯುವ ಜನರೇ ಆಗಲಿ, ವರ್ತಮಾನ ಪತ್ರವನ್ನು ತೆಗೆಯುವ ಜನರೇ ಆಗಲಿ, ಧರ್ಮಸಂಬಂಧಿ ಕೆಲಸ ಮಾಡುವವರೇ ಆಗಲಿ, ಅಥವಾ ಯಾವದೇ ಕೆಲಸವನ್ನು ಮಾಡುವ ಜನರೇ ಆಗಲಿ, ಕರ್ನಾಟಕದಲ್ಲಿ ಹೊರಡಲಾರರೆಂದು ನನ್ನ ಅಭಿಪ್ರಾಯ." ೧೦-೯-೧೯೧೨ ನೆಯ ದಿವಸದ ಡಾಯರಿಯಲ್ಲಿ ಹೀಗೆ ಬರೆದಿರುವೆ "ಕರ್ನಾಟಕದಲ್ಲಿ ಸಾರ್ವಜನಿಕ ಕೆಲಸದಲ್ಲಿ ಆಯುಷ್ಯ ವೆಚ್ಚ ಮಾಡುವ ಜನರು ನಮ್ಮಲ್ಲಿ ಹುಟ್ಟಬೇಕೆಂಬದೇ ನನ್ನ ಮೂಲ ಉದ್ದೇಶವು ಈ ಉದ್ದೇಶವು ನನ್ನ ತಲೆಯಲ್ಲಿ ಹೊಕ್ಕು ಮೂರು ನಾಲ್ಕು ವರ್ಷಗಳಾದವು. ಯಾವುದೊಂದು ವಿಷಯವನ್ನು ಕೈಕೊಂಡು, ಅದನ್ನು ಪೂರ್ಣವಾಗಿ ಅಭ್ಯಾಸಮಾಡಿ, ಆದರಲ್ಲಿ ತಮ್ಮ ಆಯುಷ್ಯವನ್ನು ಹಾಕಲಿಕ್ಕೆ ಜನರು ಸಿದ್ಧರಾಗಬೇಕು. ಸಾರಾಂಶ, ಇವತ್ತಿನವರೆಗೆ ಸಾರ್ವಜನಿಕ ಕೆಲಸಕ್ಕೆ ಇರುವ ಸ್ವರೂಪವು ಸಂಪೂರ್ಣವಾಗಿ

ಬದಲು ಆಗಬೇಕು.. . ಮಾನ, ಕೀರ್ತಿ ಮುಂತಾದವುಗಳನ್ನು ತೊರೆಯುವ ಜನರು ಬೇಕು." ೨೭-೧೧-೧೨ ನೆಯ ದಿವಸದ ಡಾಯರಿಯಲ್ಲಿ ಹೀಗೆ ಬರೆದಿರುವೆ "ನಾನು ಈ ಊರಿಗೆ ಬಂದ ಒಟ್ಟು ೪-೬ ವರ್ಷಗಳಲ್ಲಿ, ಸಾರ್ವಜನಿಕ ಕೆಲಸಗಳಲ್ಲಿ ವಿಲಕ್ಷಣ ಅನುಭವವು ಬಂದಿರುತ್ತ್ತವ ನನಗೆ ಬಂದಂತ ನಮ್ಮ ದೇಶದಲ್ಲಿ ಎರಡನೆಯವರಿಗೆ ಯಾರಿಗೂ ಅನುಭವ ಬಂದಿಲ್ಲವೆಂದು ತೋರುತ್ತದೆ ... ನಾನು ದಿನಾಲು ಈ ಮಾತಿನ ವಿಚಾರ ಮಾಡುತ್ತಿರುತ್ತೇನೆ. ಇದರಿಂದ ನನಗೆ ಕಂಡು ಬಂದಿರುವದೇನಂದರೆ—ನಮ್ಮಲ್ಲಿ ಜನರು ಇಲ್ಲ. ಕಾರಣ, ಮೊದಲು ಜನರು ನಿರ್ಮಾಣವಾಗದೆ ಯಾವ ಕಾರ್ಯವೂ ಕೈಗೂಡುವದಿಲ್ಲ. ಎಲ್ಲಿ ಹೋದರೂ ಒಣ ಆಡಂಬರ ಬೆಳೆದಿದೆ ... ಮಿಕ್ಕ ಯಾವತ್ತು ಕೆಲಸಗಳನ್ನು ಬಿಟ್ಟುಕೊಟ್ಟು, ಜನರನ್ನು ನಿರ್ಮಾಣ ಮಾಡುವದಕ್ಕೆ ನಾನು ಹೊರಟದ್ದಕ್ಕೆ ಇವೇ ಕಾರಣವು "**ನೂತನ ಕರ್ನಾಟಕ**" ವನ್ನು ಹುಟ್ಟಿಸುವದನ್ನೆ ನಾವೆಲ್ಲರೂ ಧ್ಯೇಯವಾಗಿಟ್ಟುಕೊಳ್ಳಬೇಕು.....ನಾನು ಎರಡೇ ವರ್ಷ ಪ್ರಯತ್ನ ಮಾಡಿದ್ದರ ಫಲವು ನಾನು ಈ ನಾಲ್ಕು ಜನರಿಗೆ ಒಂದು ತರದ ದೇಶಸೇವೆಗೆ ಹಚ್ಚಿದ್ದರಿಂದಾಯಿತೆಂದು ನಾನು ತಿಳಿಯುತ್ತೇನೆ. "ನೂತನ ಕರ್ನಾಟಕ"ಕ್ಕ ನಾನು ಪ್ರಾರಂಭ ಮಾಡಿಕೊಟ್ಟ ಕಿತ್ತೆಯು ಅಲ್ಲಿಗೇ ಎಲ್ಲಿ ಮುಗಿಯುತ್ತದೆಯೋ ಏನೋ ಎಂದು ನನಗೆ ಅಂಜಿಕೆಯಿತ್ತು. ಇಷ್ಟರಲ್ಲಿಯೇ, ನನ್ನಿಂದಲೇ ಮುಂದಿನ ಕಾರ್ಯವು ಸಾಗಿತೆಂದು ನನ್ನ ಮನಸ್ಸಿಗೆ ಒಂದುಬಗೆಯ ಸಂತೋಷವಾಗುತ್ತದೆ. ಇಲ್ಲಿಯವರೆಗೆ ನನ್ನ ಮನಸ್ಸಿಗೆ ಚೈನವೇ ಇರಲಿಲ್ಲ ..." ವ್ಹಿಕ್ಟೋರಿಯಾ ಹಾಯಸ್ಕೂಲಿನಲ್ಲಿ ಪದವಿಧರರು ಸೇರಿ, ಅದರ ಹೊಸ ಆಡಳಿ

ತಕ್ಕೆ ಪ್ರಾರಂಭವಾಯಿತು ನಾನು ಆ ಆಡಳಿತದಲ್ಲಿ ಪುನ ಕೈಹಾಕಲಿಲ್ಲ. ನನ್ನ ಹೆಸರು ಆಗ ಸರಕಾರದ ಕರೀಪಟ್ಟಿ (Black list) ಯಲ್ಲಿ ಇದ್ದದರಿಂದ ನಾನು ಅಲ್ಲಿ ಆಜೀವ ಸದಸ್ಯ ನಾಗುವಂತೆ ಇರಲಿಲ್ಲ ಅದೂ ಒಂದು ರೀತಿಯಿಂದ ಒಳಿತೇ ಆಯಿತು ದೇವರು ನನ್ನನ್ನು ಬೇರೆ ಕೆಲಸಕ್ಕೆ ಹುಟ್ಟಿಸಿದ್ದನು ಇರಲಿ. ೪-೪-೧೯೧೩ ನೆಯ ದಿವಸದ ಡಾಯರಿಯಲ್ಲಿ ಹೀಗೆ ಇದೆ. "I shall try my utmost, and as soon as I find another person willing to take up the responsibility, I shall at once hand over the charge to any one at any time" ಇದರಿಂದ ನಾನು ಮೊದಲಿ ನಿಂದಲೂ, ಸಾರ್ವಜನಿಕ ಕಾರ್ಯಮಾಡುವುದರಲ್ಲಿ ಯಾವ ಧೋರಣೆ ಇಟ್ಟುಕೊಂಡಿದ್ದೆನೆಂಬುದು ಗೊತ್ತಾಗುವುದು

ಇತ್ತೀಚೆಗೆ, ಖಾಸಗೀ ಶಾಲೆಗಳಲ್ಲಿ ಪದವಿಧರರು ಹೆಚ್ಚಾಗಿ ಸೇರಿಪ್ಪೇನೋ ನಿಜ. ಆದರ, ನನ್ನ ಉದ್ದೇಶಕ್ಕೂ ಅವರ ಉದ್ದೇಶಕ್ಕೂ ಅಜಗಜಾಂತರವಿದೆ ಅರಾಷ್ಟ್ರೀಯವಾದ ಈಗಿನ ಶಿಕ್ಷಣವನ್ನು ಕೊಡುವದರಲ್ಲಿ ಪದವೀಧರರು ತಾವು ಹಗಲಿರುಳು ದುಡಿಯಬೇಕೆಂದೂ ಅನ್ಯರನ್ನು ದುಡಿಸಿಕೊಳ್ಳಬೇಕೆಂದೂ ನಾನು ಬಯಸಿರಲಿಲ್ಲ ಹತ್ತು ಜನ ಪಧವೀಧರರು ಹೊಟ್ಟೆಯ ಮಟ್ಟಿಗೆ ಯಾವುದೊಂದು ಸಂಸ್ಥೆಯಲ್ಲಿ ವ್ಯವಸ್ಥೆ ಮಾಡಿಕೊಂಡು ಕರ್ನಾಟಕದ ಯಾವತ್ತೂ ಕ್ಷೇತ್ರಗಳನ್ನು ವ್ಯಾಪಿಸಿ ಕರ್ನಾಟಕವನ್ನು ಮುಂದೆ ತರಬೇಕೆಂಬುದು ನನ್ನ ಉದ್ದೇಶ.

**ಕರ್ನಾಟಕ ಮಹಿಲಾ ವಿದ್ಯಾಲಯ**—ಇದೇ ಸುಮಾರಕ್ಕೆ ಗಂಡುಮಕ್ಕಳಿಗೆ ಇಲ್ಲದಿದ್ದರೆ ಇಲ್ಲ, ಹೆಣ್ಣುಮಕ್ಕಳಿಗಾದರೂ ರಾಷ್ಟ್ರೀಯ ಶಿಕ್ಷಣ ಸಿಗಲಿ ಎಂಬ ಉದ್ದೇಶದಿಂದ ಕುಂಭ

ಕೋಣಂ ಎಂಬ ಪದವೀಧರರು ಮತ್ತು ಅವರ ಪತ್ನಿ ಲಕ್ಷ್ಮೀ ಬಾಯಿ ಈ ದಂಪತಿಗಳ ಮುಖಾಂತರವಾಗಿ ನಾನು ಹೊರಡಿಸಿದ ಸಂಸ್ಥೆ ಇದು ಇದರ ಉದ್ಘಾಟನ ಸಮಾರಂಭಕ್ಕೆ ನಾನು ನನ್ನ ಪರಮಸ್ನೇಹಿತರೂ ಅಭಿಮಾನಿಗಳೂ ಆದ ಎಚ್ ರುಕ್ಮಿಣಿಯಮ್ಮ ನವರನ್ನು ಕರಿಸಿದ್ದೆನು. ಮುಂದೆ, ನನ್ನ ತರುಣ ಮಿತ್ರಳಾದ ಡಾಕ್ಟರ ಇಂದುಮತಿಬಾಯಿ ನಾಯಿಕ ಇವಳನ್ನೂ ವಾರ್ಷಿಕ ಸಮಾರಂಭಕ್ಕೆ ಕರಿಸಿಕೊಂಡಿದ್ದೆ

**ಖಾಸಗೀ ಕಾಲೇಜಿನ ಸ್ಥಾಪನೆ** ವ್ಹಿಕ್ಟೋರಿಯಾ ಹಾಯ ಸ್ಕೂಲಿನ ಪುನರ್ಘಟನೆ ಮಾಡಿದ ಮಾತ್ರದಿಂದ ನನಗೆ ಸಮಾ ಧಾನವಾಗಲಿಲ್ಲ. ಧಾರವಾಡದಲ್ಲಿ ಒಂದು ಖಾಸಗೀ ಕಾಲೇಜು ಸ್ಥಾಪಿತವಾದರೆ, ಇಲ್ಲಿಯ ವಾತಾವರಣವು ಉದಾತ್ತವಾಗಿ ಬೆಳೆಯುತ್ತದೆಂದು ನನಗೆ ಪ್ರತಿಕ್ಷಣಕ್ಕೆ ಹೊಳೆಯುತ್ತಿತ್ತು ಅನಿರ್ವಾಹಪಕ್ಷಕ್ಕೆ ಸರಕಾರೀ ಕಾಲೇಜಕ್ಕೆ ಬೆಂಬಲಕೊಟ್ಟಿ ದ್ದನ್ನು ಹಿಂದೆ ( ಪು ೫೭ ) ಹೇಳಿಯೇ ಇರುವೆ ದೇಶವನ್ನು ಮುಂದುಮುಂದಕ್ಕೆ ಜಗ್ಗುವುದು ನನ್ನ ಧೋರಣ. ವ್ಹಿಕ್ಟೋ ರಿಯಾ ಹಾಯಸ್ಕೂಲಿನ ಪುನರ್ಘಟನೆಯಾದಬಳಿಕ, ಖಾಸಗೀ ಕಾಲೇಜಿನ ವಿಚಾರ ಬರಹತ್ತಿತು ಆದರೆ, ಯೋಗ್ಯತೆಯುಳ್ಳ ಜನರು ಸಿಗಬೇಕಲ್ಲವೆ? ೧೯೧೪ನೆಯ ಇಸ್ವಿಯಲ್ಲಿ ಡೆಕ್ಕನ ಕಾಲೇಜಕ್ಕೆ ಉಪನ್ಯಾಸ ಕೊಡಲಿಕ್ಕೆ ಹೋದಾಗ ಅಲ್ಲಿಯ ತರುಣರ ಉತ್ಸಾಹ ನೋಡಿ ಅವರನ್ನು ಎಳೆಯಲಿಕ್ಕೆ ಹವ ಣಿಸಿದೆ. ಬಹುಶಃ ಪ್ರತಿವರ್ಷ ಪುಣೆಕ್ಕೆ ಒಂದಿಲ್ಲೊಂದು ನೆವ ದಿಂದ ಹೋಗಿ, ತರುಣರನ್ನು ಹುರಿದುಂಬಿಸುತ್ತಿದ್ದೆ ಕೆಲ ವರಿಗೆ ಸಂಪಾದಕತ್ವದ ಕಡೆಗೆ ಮನಸ್ಸು ಕೆಲವರಿಗೆ ಶಿಕ್ಷಣದ ಕಡೆಗೆ ಎಳೆತ. ಆದರೆ, ಎಲ್ಲರಿಗೂ ಹೊಟ್ಟೆಯ ಪ್ರಶ್ನೆ ತಕ್ಕ

ಮಟ್ಟಿಗಾದರೂ ಬಿಡಿಸಬೇಕೆಂಬ ಸ್ವಾಭಾವಿಕ ಹಂಬಲ. ಆದ
ಕ್ಕಾಗಿ, ನಾನು ಅವರಿಗೆ ಒಂದು ಯುಕ್ತಿಯನ್ನು ಸೂಚಿಸಿದೆ
ಅದೇನೆಂದರೆ ಬಹಳ ಮಂದಿ ಸ್ವಾರ್ಥತ್ಯಾಗ ಮಾಡಿ ನಿಲ್ಲು
ವುದು ಶಕ್ಯವಿಲ್ಲ ಆದಕಾರಣ, ನೀವು ನಿಮ್ಮ ಸ್ನೇಹಿತರೊಳ
ಗಿಂದ ಒಳ್ಳೇ ತೀಕ್ಷ್ಣಬುದ್ಧಿಯುಳ್ಳ ಹಲಕೆಲವರನ್ನು ಆರಿಸಿ
ಕೊಂಡು, ಅವರನ್ನು ಕೆಲಸಕ್ಕೆ ಅಣಿಮಾಡಿ ಅವರ ಹೊಟ್ಟೆಯ
ಭಾರವನ್ನು ಮಿಕ್ಕವರು ಹೊರಬೇಕೆಂದು ಹೇಳಿದೆ ಮತ್ತು ನಿಜ
ವಾಗಿ ವಿಚಾರಮಾಡಿದರೆ, ಅಂತಃಕರಣಪೂರ್ವಕವಾಗಿ ಕೆಲಸ
ಮಾಡುವವರಿಗೆ ಇದು ಎಷ್ಟು ಸುಲಭವಿದೆಂಬುದನ್ನು ತಿಳಿಸಿ
ಹೇಳಿದೆ ಪ್ರತಿಯೊಬ್ಬರು ತಮ್ಮ ಗಳಿಕೆಯ ಮಹತ್ವಾಕಾಂ
ಕ್ಷೆಗೆ ಎಲ್ಲಿಯಾದರೂ ಒಂದು ಒಡ್ಡು ಹಾಕಿಕೊಳ್ಳಬೇಕು.
ಮತ್ತು ಸುದೈವದಿಂದ ಹೆಚ್ಚಿಗೆ ಗಳಿಸಿದರೆ, ಆ ಉಳಿತಾಯ
ವನ್ನು ಸ್ವಾರ್ಥತ್ಯಾಗಮಾಡಿ ಮುಂದೆ ನಿಲ್ಲುವವರ ಹೊಟ್ಟೆಯ
ಚಿಂತೆ ಬಿಡಿಸಲಿಕ್ಕೆ ಉಪಯೋಗಿಸಿದರೆ, ಅಶಕ್ಯವಾಗಿ ತೋರುವ
ಅನೇಕ ಕಾರ್ಯಗಳು ಶಕ್ಯವಾಗುವವೆಂದು ಹೇಳಿದೆ. ಉದಾ.
ನನಗೆ ತಿಂಗಳಿಗೆ ಕನಿಷ್ಠ ೨೦೦ ರೂಪಾಯಿ ಗಳಿಸಿದರೆ ಸಮಾ
ಧಾನವಾಗುತ್ತದೆಂದು ಇಟ್ಟುಕೊಳ್ಳಿರಿ ಈಗಲೇ ಆ ಮಹತ್ವಾ
ಕಾಂಕ್ಷೆಗೆ ಒಡ್ಡುಹಾಕಿಬಿಟ್ಟರೆ, ಹೆಚ್ಚಿನದನ್ನು ದೇಶಸೇವಕರಿಗೆ
ಕೊಡಬೇಕೆಂಬ ಬುದ್ಧಿ ಹುಟ್ಟುತ್ತದೆ ಹೀಗೆ ಮುಂದೆ
ಸುದೈವದಿಂದ, ನಾಲ್ಕೆಂಟು ಇಂಥ ಜನರಿಗೆ ೨೦೦ಕ್ಕಿಂತ
ಹೆಚ್ಚಿಗೆ ಉತ್ಪನ್ನವಾದಲ್ಲಿ, ಆ ಹೆಚ್ಚಿನ ಉಳಿತಾಯದ ಕೆಲ
ವಂಶವನ್ನಾದರೂ ದೇಶಸೇವಕರಿಗಾಗಿ ಮೀಸಲಾಗಿಟ್ಟರೆ
ಕರ್ನಾಟಕದಲ್ಲಿ ೧೦-೨೦ ಪದವೀಧರರು ನಿಶ್ಚಿಂತರಾಗಿ
ದೇಶಸೇವೆ ಮಾಡಲು ಸಿದ್ಧರಾಗಬಹುದು! ಹೀಗೆ ಉಪ

ದೇಶ ಮಾಡಿ, ಅವರಿಗೆ ಆ ರೀತಿಯಿಂದ ವಿಚಾರಮಾಡಿ, ಮನಸ್ಸಿನಲ್ಲಿ ಹಾಗೆ ಪ್ರತಿಜ್ಞೆಮಾಡಲಿಕ್ಕೆ ಹೇಳಿದೆ. ಅದು ಅನೇಕರ ಮನಸ್ಸಿನಲ್ಲಿ ನಾಟಿತು ೨೯-೧-೧೯೧೭ನೆಯ ದಿವಸದ ಡಾಯರಿಯಲ್ಲಿ ನಾನು ಈ ಸಂಬಂಧವಾಗಿ ಹೀಗೆ ಬರೆದಿರುವೆ "Students should take a vow that they would devote to public cause, a certain portion of their income but every man is free to choose his own limit of ambition" ರುಕ್ಮಾಂಗದ ದೇಶಪಾಂಡೆ, ಅಸುಂಡಿ ಮುಂತಾದವರು ಸ್ವಾರ್ಥತ್ಯಾಗಕ್ಕೆ ಸಿದ್ಧರಾದರು. ಅವರಿಗೆ ಕಾಲೇಜು ತೆಗೆಯಲಿಕ್ಕೆ ಹೇಳಿವೆ ೨೮-೬-೧೮ನೆಯ ದಿವಸ ರುಕ್ಮಾಂಗದರಾಯರು ಕಾಲೇಜ ಹೊರಡಿಸುವ ಉದ್ದೇಶದಿಂದ ವ್ಹಿಕ್ಟೋರಿಯಾ ಹಾಯಸ್ಕೂಲಿನಲ್ಲಿ ಆಜೀವ ಸದಸ್ಯರಾಗ ಬೇಕೆಂಬ ನನ್ನ ಇಚ್ಛೆಗೆ ಸಮ್ಮತಿ ಇತ್ತರು ಖಾಸಗಿ ಕಾಲೇಜಿನ ಪ್ರಯತ್ನವು ಯಶಸ್ವಿಯಾದಾಗ ನಾನು ೧-೧-೧೯೧೯ ನೆಯ ಇಸ್ವಿಯ ನನ್ನ ಡಾಯರಿಯಲ್ಲಿ ಹೀಗೆ ಉದ್ಗಾರ ತೆಗೆದಿರುವೆ " ಈಗ ೧-೨ ವರ್ಷಗಳಿಂದ ನಡಿಸಿದ ಪ್ರಯತ್ನ ಸಫಲವಾಗಿ ನನ್ನ ತರುಣ ಮಿತ್ರರಾದ ರಾ|| ರುಕ್ಮಾಂಗದ ಮೊದಲಾದವರು ಕಾಲೇಜ ತೆಗೆಯುವದಕ್ಕೆ ನಿರ್ಧಾರಮಾಡಿದ ಸಂಗತಿಯನ್ನು ನಾನು ಇಂದು ವಕೀಲರ ಖೋಲಿಯಲ್ಲಿ ಹೇಳಿದೆ " ರುಕ್ಮಾಂಗದ ಮತ್ತು ಅಸುಂಡಿ ಇವರನ್ನು ವ್ಹಿಕ್ಟೋರಿಯಾ ಹಾಯಸ್ಕೂಲಿನಲ್ಲಿ ಸೇರಿಸಿದೆ. ಅವರ ವಿಶ್ವಪ್ರಯತ್ನದಿಂದ ರ್‍ಯಾಂಗಲರ ಕಟ್ಟಿ, ದಾತಾರ ಮುಂತಾದವರು ಮುಂದೆ ಬಂದರು. ಮತ್ತು ಖಾಸಗೀ ಕಾಲೇಜು ಹೊರಟಿತು. ಅಸಹಕಾರ ಚಳವಳಿಯಲ್ಲಿ ಕರ್ನಾಟಕದ ಸಂಕುಚಿತ ಧೋರಣೆಯ ಮೂಲಕ ಅದು ಹಳ್ಳಗೂಡಿತು !

ಇದು ಪದವೀಧರರ ಕೇಂದ್ರ ಸ್ಥಾಪಿಸುವ ನನ್ನ ಕಲ್ಪನೆಯ ಸಂಕ್ಷಿಪ್ತ ಚಿತ್ರ ಹತ್ತೆಂಟು ಜನರು ಅಂಥವರು ಹೊರಟರೆ ಕರ್ನಾಟಕದ ಸರ್ವಾಂಗೀನ ಉನ್ನತಿಯೂ ಆಗುವುದೆಂದು ನನಗೆ ಬಲವಾದ ಶ್ರದ್ಧೆಯಿದೆ

**ಕರ್ನಾಟಕತ್ವದ ಬಗ್ಗೆ ನನ್ನ ಕಿರಕುಳ ಪ್ರಯತ್ನಗಳು.** ಕರ್ನಾಟಕದ ಏಳ್ಗೆಗಾಗಿ ಹೊರಟ ಯಾವ ಚಳವಳಿಯಲ್ಲಿಯೂ ನಾನು ಸೇರದೆ ಇಲ್ಲ ನಾಟಕಪ್ರೇಮಿಯಲ್ಲದಿದ್ದರೂ ಭರತ ಕಲೋತ್ತೇಜಕ ನಾಟಕಮಂಡಳಕ್ಕೆ ಸ್ಥಾಯಿಸ ಪ್ರೆಸಿಡೆಂಟ ನಾದೆ ಸಂಗೀತಪ್ರಿಯನಲ್ಲದಿದ್ದರೂ ೯-೧೨-೯೯೧ಲನೆಯ ದಿವಸ ನನ್ನ ಮಿತ್ರರಾದ ಎಚ್ ರುಕ್ಮಿಣಿಯಮ್ಮನವರ ಹಿರಿಯ ಮಗನಾದ ನರಸಿಂಗರಾವ ಉರ್ಫ ಅಪ್ಪಿ ಇವರ ವೀಣಾ ವಾದನವನ್ನು ಧಾರವಾಡದಲ್ಲಿ ಮಾಡಿಸಿ, ಕರ್ನಾಟಕ ಸಂಗೀತದ ರುಚಿ ಹಚ್ಚಿಸಿದೆ. ಯೋಗಾನರಸಿಂಹಂ ಎಂ ಎ. ಇವರಿಂದ ಕರ್ನಾಟಕ ಸಂಗೀತದ ರುಚಿ ತೋರಿಸಿಕೊಟ್ಟೆ. ೩-೪ ಸಲ ಕರ್ನಾಟಕ ಸಂಗೀತಕಚೇರಿ ಮಾಡಿಸಿದೆ ಕುಂ. ಸೌ. ರಾಜಮ್ಮ ( ವಿಶ್ವಕರ್ನಾಟಕದ ಸಂಪಾದಕ ತಾತಾಚಾರ್ಯ ಇವರ ಪತ್ನಿ ) ಇವರು ವೀಣಾವಾದನದಲ್ಲಿ ಒಳ್ಳೇ ನಿಪುಣರು ಅವರನ್ನೂ ಕರಿಸಿಕೊಂಡು ಅನೇಕ ದಿವಸ ನನ್ನಲ್ಲಿ ಇರಿಸಿಕೊಂಡು ಅವರ ವೀಣಾವಾದನದಿಂದ ಜನರನ್ನು ಆನಂದಗೊಳಿಸಿದೆ. ಕೀರ್ತನಕಾರನಲ್ಲದಿದ್ದರೂ ಬೆಂಗಳೂರಿನ ಕೀರ್ತನ ಸಮ್ಮೇಲನಕ್ಕೆ ವ್ಹಿ. ಪಿ ಮಾಧವರಾಯರು ಪ್ರೆಸಿಡೆಂಟರು, ನಾನು ಸ್ಥಾಯಿಸಪ್ರೆಸಿಡೆಂಟನು ! ಯದುಗಿರಿಯಮ್ಮಳೆಂಬ ಚಿಕ್ಕ ಬಾಲಿಕೆಯನ್ನು ನನ್ನ ಮನೆಯಲ್ಲಿ ತಿಂಗಳಗಟ್ಲೆ ಇಟ್ಟುಕೊಂಡು ಕೀರ್ತನಮಾಡಿಸಿದೆ. ವೈದ್ಯನಲ್ಲದಿದ್ದರೂ ಬೆಂಗಳೂರಿನ ಆಯು

ರ್ವೇದ ಸಮ್ಮೇಲನದಲ್ಲಿ ಭಾಗತಕ್ಕೊಂಡೆ. ಅದಕ್ಕೆ ಅಧ್ಯಕ್ಷರು ನನ್ನ ಮಿತ್ರ ಸವಣೂರ ಹಣಮಂತರಾಯರು. ಹಾಗೆಯೇ ವ್ಯಾಪಾರೀ ಪರಿಷತ್ತು, ನಾಟ್ಯಸಮ್ಮೇಲನ ಮುಂತಾದವುಗಳಲ್ಲಿ ಮನಸ್ಸು ಹಾಕಿದೆ. ಕೈಲಾಸಂ ಇವರಿಂದ ಪ್ರಯೋಗ ಮಾಡಿಸಿದೆ. ತೆಲುಗನಲ್ಲದಿದ್ದರೂ ಆಂಧ್ರ ಸಾಹಿತ್ಯಪರಿಷತ್ತಿಗೂ ಆಂಧ್ರ ರಾಷ್ಟ್ರೀಯ ಪರಿಷತ್ತಿಗೂ ಹೋಗಿದ್ದೆ ಇವೆಲ್ಲ ಚಟುವಟಿಕೆಗಳ ಮೂಲ "**ಕರ್ನಾಟಕತ್ವ**".



೭ನೆಯ ಪ್ರಕರಣ

# ನನ್ನ ಧಾರ್ಮಿಕಜೀವನ

**ಪ್ರಸ್ತಾವನೆ:—** ನನ್ನ ಸಾರ್ವಜನಿಕ ಚಟುವಟಿಕೆಗಳಿಗೆಲ್ಲಕ್ಕೂ ಕರ್ನಾಟಕತ್ವವು ಮೂಲವೆಂದೂ ಅದೇ ಗುರಿಯೆಂದೂ ಹೋದ ಪ್ರಕರಣದಲ್ಲಿ ಹೇಳಿದೆನಷ್ಟೆ. ಹೀಗೆ **ಬಾಹ್ಯ** ಚಲನವಲನಗಳಿಗೆ ಅದು ಮೂಲವಾದರೆ, ಧರ್ಮವು ನನ್ನ ಇಡೀ ಜೀವನದ **ಅಂತರ್ಬಾಹ್ಯ** ಚಳವಳಿಗಳ ಉಗಮವು, ಕೊನೆಯ ಧ್ಯೇಯವು ಅವೇ. ಅದು ನನ್ನ ಯಾವತ್ತು ಕೆಲಸಗಳಲ್ಲಿ ಅಂತರ್ಯಾಮಿಯಾಗಿದೆ. ಅದು ಗೌಪ್ಯವಾಗಿಯೇ ಉಳಿಯತಕ್ಕದ್ದು ಉಚಿತ. ಎಲ್ಲರೂ ಅರಿಯಲಿಕ್ಕೆ ಅರ್ಹವಾದ ಅಂಶಗಳನ್ನಷ್ಟೇ ಕೊಡುವೆ. ಅದರಿಂದ ಹಲವರಿಗೆ ಪ್ರಚೋದನ ದೊರೆತರೆ ದೊರೆಯಲಿ.

**ನನ್ನ ಧಾರ್ಮಿಕ ಜೀವನದ ಉಗಮ:—** ನನ್ನ ಈ ಜೀವನದಲ್ಲಿ ಮೂರು ಒಳಭಾಗಗಳನ್ನು ಮಾಡಬಹುದು. (೧) ಆತ್ಮವಿಕಾಸ, (೨) ಧಾರ್ಮಿಕ ಚಟುವಟಿಕೆಗಳು, (೩) ಏಕಾಂತ ಜೀವನ. ತಂದೆತಾಯಿಗಳ ಪರಿಶುದ್ಧ ನೈತಿಕ ಆಚರಣೆ ಮತ್ತು ಧಾರ್ಮಿಕ ಭಾವನೆ ಇವನ್ನು ಕುರಿತು ಹೇಳಿಯೇ ಇರುವೆ. ಆನುವಂಶಿಕ ಸಂಸ್ಕಾರಗಳಲ್ಲದೆ, ಅವರ ಪ್ರತ್ಯಕ್ಷ ಆಚರಣೆಯ ಪರಿಣಾಮವೂ ನನ್ನ ಮೇಲೆ ಅಪ್ರತ್ಯಕ್ಷವಾಗಿ ಆಗಿರಲೇಬೇಕು. ಅಲ್ಲದೆ, ಮೂಲತಃ ನನ್ನ ಜೀವಸ್ವಭಾವವು ಅನುಕೂಲವಿಲ್ಲದಿದ್ದರೆ, ಅವೆಲ್ಲವೂ ನಿರುಪಯೋಗ. ನನಗೆ

ನೆನಪಿದ್ದಮಟ್ಟಿಗೆ, ನನ್ನ ಸಾರ್ವಜನಿಕ ಜೀವನದ ಪ್ರಾರಂಭಕ್ಕೆ ಅಂದರೆ ೧೯೦೫ನೆಯ ಇಸ್ವಿಯ ಸುಮಾರಕ್ಕೆ ನನ್ನ ಮನಸ್ಸಿನ ಮೇಲೆ ಮೂಡಿದ ಮೊದಲನೆಯ ವಾಕ್ಯವೆಂದರೆ ಸ್ಪೆನ್ಸರ ಸಾಹೇಬರ ಶಿಕ್ಷಣಮೀಮಾಂಸೆಯಲ್ಲಿಯ ಒಂದು ವಾಕ್ಯ. **ಜನರು ಜಗತ್ತಿನಲ್ಲಿ ಹೇಗೆ ಇರಬೇಕೆಂಬ ವಿಚಾರವನ್ನು ಮಾಡದೆ, ಹೇಗೆ ಕಾಣಬೇಕೆಂಬ ವಿಚಾರವನ್ನೇ ಹಗಲಿರುಳು ಮಾಡುತ್ತಿರುತ್ತಾರೆಂಬುದೇ** ಆ ವಾಕ್ಯದ ಮಥಿತಾರ್ಥ. ಆ ಪ್ರವೃತ್ತಿಯನ್ನು ಅವರು ಬಲವಾಗಿ ಟೀಕಿಸಿರುವರು. ಅವರ ಉಪದೇಶವು ನನ್ನ ಜೀವನದಲ್ಲಿ ಬಲು ದೊಡ್ಡ ಮಾರ್ಪಾಡು ಮಾಡಿತು ಆಗಿನಿಂದ, ನಾನು ಅವರ ಉಪದೇಶದಂತೆ ಹೇಗೆ ಇರಬೇಕೆಂಬುದನ್ನಷ್ಟೆ ಯೋಚಿಸಬೇಕಲ್ಲದೆ, ಹೇಗೆ ಕಾಣಬೇಕೆಂಬುದನ್ನು ಮನಸ್ಸಿನಲ್ಲಿ ಕೂಡ ತರಬಾರದು ಎಂದು ನಿಶ್ಚಯಿಸಿದೆ. ಆದರೆ, ಅದರಂತೆ ಸಂಪೂರ್ಣವಾಗಿ ನಡೆದಿರುವೆನೆಂದು ಹೇಳುವುದು ಸಾಹಸದ ಮಾತಾದೀತು; ನಡೆಯಲಿಕ್ಕೆ ಮನಃಪೂರ್ವಕವಾಗಿ ಪ್ರಯತಿಸುತ್ತಿರುವೆನೆಂದು ಮಾತ್ರ ಧೈರ್ಯದಿಂದ ಹೇಳಬಲ್ಲೆ ನಿಜವಾಗಿ ವಿಚಾರಮಾಡಿದರೆ, ನಮ್ಮ **ಕಣ್ಣಿಗೆ ಕಾಣುವ ಜಗತ್ತೇ ಬೇರೆ; ಇರುವ ಜಗತ್ತೇ ಬೇರೆ.** ಕೃತ್ರಿಮ ಜೀವನ ಜಗತ್ತಿನ ಸಾಮಾನ್ಯಜೀವನ ಆದರ ವಿರುದ್ಧ ದಿಶೆಯಲ್ಲಿ ಇರಬೇಕೆನ್ನುವವರು ಪ್ರವಾಹದ ವಿರುದ್ಧ ಈಸಬೇಕಾಗುವುದು ಕಣ್ಣಿಗೆ ಗುಡ್ಡದಂತೆ ದೊಡ್ಡದಾಗಿ ಕಾಣುವ ಜೀವನಗಳಲ್ಲಿ ಡೊಗರುಗಳು ಇರುತ್ತವೆ.

ನನ್ನ ಜೀವನವನ್ನು ಸಂಪೂರ್ಣವಾಗಿ ಮಾರ್ಪಾಟು ಮಾಡಿದ ಮತ್ತೊಂದು ವಾಕ್ಯವೆಂದರೆ ಮಧ್ವಾಚಾರ್ಯರ

ಮತದಲ್ಲಿ ಮೇಲಿಂದಮೇಲೆ ಉಚ್ಚರಿತವಾಗುವ "**ನಾಹಂ ಕರ್ತಾ ಹರಿಃ ಕರ್ತಾ, ತತ್ಪೂಜಾ ಕರ್ಮ ಚಾಖಿಲಂ**" ಎಂಬ ವಾಕ್ಯ. ಇದರ ರಹಸ್ಯ ನನಗೆ ಒಮ್ಮೆಲೆ ಹೊಳೆಯಲಿಲ್ಲ. ರಾಜಕೀಯ ಜೀವನದ ಗುಂಗಿನಲ್ಲಿದ್ದಾಗ, ನಾನು ಒಂದು ಬಗೆಯ ಸೊಕ್ಕಿನಲ್ಲಿದ್ದೆ ಅದನ್ನು ಮಾಡಬೇಕು, ಇದನ್ನು ಮಾಡಬೇಕು, ಅದನ್ನು ಮಾಡೇನು, ಇದನ್ನು ಮಾಡೇನು ಎಂದೆನ್ನುತ್ತಿದ್ದೆ. ಆದರೆ ಸಾರ್ವಜನಿಕ ಜೀವನದಲ್ಲಿ ಬಂದ ನನ್ನ ಅನುಭವವು ನನ್ನ ಕಣ್ಣನ್ನು ತೆರೆಯಿಸಿತು ಮೇಲಿನ ವಾಕ್ಯದ ಸತ್ಯತೆಯು ಎಂದು ನನ್ನ ಮನಸ್ಸಿನಲ್ಲಿ ನಾಟಿತೋ ಆ ದಿವಸವೆಂದರೆ ೯-೧೧-೧೯೧೪ನೆಯ ದಿನವು ಆ ದಿನದ ದಿನವಹಿಯಲ್ಲಿ ನಾನು ಅದನ್ನು ನಮೂದಿಸಿಟ್ಟಿರುವೆ ಅಂದಿನಿಂದ, ಕೂತಲ್ಲಿ, ನಿಂತಲ್ಲಿ ಆ ಮಂತ್ರದ ಜಪ ನಡೆಸಿರುವೆ ನನ್ನಲ್ಲಿ ಶಕ್ತಿ ಏನಾದರೂ ಇದ್ದರೆ ಅದು ಆ ಮಂತ್ರದ ಪ್ರಭಾವ.

ನಿಜವಾದ ವೈರಾಗ್ಯವೆಂದರೇನೆಂಬುದು ನನಗೆ ಪ್ರಾಣೇಶ ವಿಠಲರ ಕೆಳಗಿನ ವಾಕ್ಯಗಳಿಂದ ಗೊತ್ತಾಯಿತು

**ಉಂಡೂ ಉಂಡೂ ನಾ ಉಂಡಿಲ್ಲವೆಂಬುದೆ ಮಹವೈರಾಗ್ಯ**

ಹಿಂಡು ಬಳಗದೊಳು ಇದ್ದು ಇದ್ದು ಇಲ್ಲೆಂಬುದೆ ದೃಢವೈರಾಗ್ಯ.

**ಕೊಟ್ಟು ಕೊಟ್ಟು ನಾ ಕೊಟ್ಟೇಯಿಲ್ಲೆಂತೆಂಬುದೆ ವೈರಾಗ್ಯ.**

ಅಷ್ಟು ಶ್ರೀಪ್ರಾಣೇಶ ವಿಠಲಗರ್ಪಿತವೆಂಬುದೆ ವೈರಾಗ್ಯ.

**ತಾನು ಏನೂ ಮಾಡಿಲ್ಲನೆಂಬ ಭಾವನೆ ಮನದಲ್ಲಿ ಇಡಬೇಕು.** ಇದು ಅನೇಕರು ತಿಳಿವಂತೆ ನೈರಾಶ್ಯವಾದವಲ್ಲ. ತಾನು ಎಷ್ಟು ಸೇವೆ ಮಾಡಿದರೂ ತೃಪ್ತಿಯಿರಬಾರದು. ಮಂದಿ **ಸ್ವಲ್ಪ ಸೇವೆ ಮಾಡಿದ ಕೂಡಲೆ ಉಬ್ಬಿ ಹೋಗುತ್ತಾರೆ!**

ಅನ್ಯರು ತಮ್ಮನ್ನು ಅತಿಶಯವಾಗಿ ಹೊಗಳಬೇಕೆಂದು ಬಯಸುತ್ತಾರೆ. ಅಂಥ ಅಹಂಕಾರಕ್ಕೆ ಇದು ಮದ್ದು.

ನಮ್ಮ ವರ್ಣಾಶ್ರಮಧರ್ಮದ ತತ್ವವನ್ನು ವಿಚಿತ್ರರೀತಿಯಿಂದ ತಿಳಿಹೇಳುವ ಒಂದು ವಾಕ್ಯವೆಂದರೆ ಸರ್ ಜೇಮ್ಸ ಜೀನ್ಸರವರ ಕೆಳಗಿನ ವಾಕ್ಯ.

"If I had to choose a one word motto, I do not think it would be '**Equality.**' I must choose '**Excelsior**' —let us go on to higher things.

The actual achievement of Democracy is that it gives a tolerably good time to the under-dog My objection to it is that, as I think, it forms a barrier to further upward progress. · As I see it, democracy encourages the nimble charlatan, at the expenseo f the thinker and prefers the plausible wizard with quack remedies to the true statesman"

ನಮ್ಮ ಪೂರ್ವದ ಆಚಾರ್ಯರು ಮತ್ತು ಋಷಿಗಳು ಅನುಸರಿಸಿದ ಪದ್ಧತಿ ಇದು **ಅವರು ಕೆಳಗಿನ ವರ್ಣದವರನ್ನು ತುಳಿಯಲಿಚ್ಛಿಸಿದರೆಂಬುದು ಶುದ್ಧ ಸುಳ್ಳು.** ಅವರ ವಂಶಜರು ಆ ತತ್ವದ ದುರುಪಯೋಗ ಮಾಡಿದ್ದರೆ, ಅದು ವಂಶಜರ ತಪ್ಪು.

ಮಾದರಿಗಾಗಿ ಮೇಲಿನ ವಾಕ್ಯ ಕೊಟ್ಟಿರುವೆ ಜೀವನವನ್ನು ಮಾರ್ಪಡಿಸಿದ ಕೆಲವನ್ನು ಆರಿಸಿ, ನನ್ನ ಗೀತಾಭವನದಲ್ಲಿ ಇದುರಿಗೆ ಅಂಟಿಸಿಕೊಂಡಿರುವೆ. ಓದಿದವೆಲ್ಲವನ್ನೂ ಅಂಟಿಸಲಿಕ್ಕೆ ಹೋಗಿಲ್ಲ.

**ನನ್ನ ಧಾರ್ಮಿಕ ಜೀವನದ ನಿತ್ಯಕ್ರಮ:**-ನನ್ನ ಜೀವನದ **ಒಂದು ವೈಶಿಷ್ಟ್ಯವೆಂದರೆ ನಿನ್ನಿನಂತೆ ಇಂದು ನಾನಿಲ್ಲ; ಹಿಂದಿ**

**ಸಂತೆ ಇಂದು ಇಲ್ಲ.** ಕಣ್ಣಿಗೆ ಕಾಣಲಿಕ್ಕೆ ನನ್ನ ಜೀವನದ ಮೊದಲಿನ ಹತ್ತಿಪ್ಪತ್ತು ವರುಷಗಳು ಅತಿಶಯ ಚಟುವಟಿಕೆಯ ದಿವಸಗಳು ಆದರೆ, ಆಗಿನಗಿಂತ ಈಗಿನ ಜೀವನವು ಹೆಚ್ಚು ಉದಾತ್ತವಾಗಿದೆಂದು ಹೇಳಬಹುದು ಮನುಷ್ಯನು ಪ್ರತಿನಿತ್ಯ ಸುಧಾರಿಸುತ್ತ ಹೋಗಬೇಕು **ಮನುಷ್ಯನು ತನ್ನಲ್ಲಿದ್ದ ಗುಣಗಳನ್ನು ಮರೆಯಬೇಕು; ಅವಗುಣಗಳನ್ನು ನೆನೆಯಬೇಕು.** ಇದ್ದ ಗುಣಗಳ ಪ್ರಕಾಶ ತಾನೇ ಬಿದ್ದೇ ಬೀಳುತ್ತದೆ, ಅವಗುಣಗಳನ್ನು ನೆನೆದು ಅವನ್ನು ತಿದ್ದಿಕೊಳ್ಳುವುದೇ ಮುಖ್ಯ ಕೆಲಸ ನನ್ನ ನಿತ್ಯಕ್ರಮ ಬಹಳ ಸಾದಾ ಇದೆ ನಸುಕಿನಲ್ಲಿ ಏಳುವುದು; ಸನಾತನ ಸಂಪ್ರದಾಯದಂತೆ ಪ್ರಾರ್ಥನೆ ಮಾಡಿ, ಬಹಿರ್ದೆಶೆಗೆ ಎರಡು ಮೈಲು ದೂರ ಹೋಗಿ ಸೂರ್ಯೋದಯದ ಸುಮಾರಕ್ಕೆ ತಿರುಗಿ ಮನೆಯಲ್ಲಿ ಇರುವುದು ಸುಮಾರು ಒಂದು ಗಂಟೆ ಧ್ಯಾನ-ಜಪ-ಪೂಜೆ-ನಮಸ್ಕಾರ ಒಂದಕ್ಕೆ ಕೆಲವು ಧಾರ್ಮಿಕ ಗ್ರಂಥಗಳ ನಿತ್ಯಪಾರಾಯಣ ಮಾಡುತ್ತಿದ್ದೆ. ಇತ್ತೀಚೆಗೆ, ಬಹುಶಃ ಎಲ್ಲ ಕಾಲವೂ ಧಾರ್ಮಿಕ ವಾಚನದಲ್ಲಿ ಹೋಗುವುದರಿಂದ, ಬೇರೆ ಪಾರಾಯಣ ಇಟ್ಟುಕೊಂಡಿಲ್ಲ ಒಂದು ಗಂಟೆ ಪೂಜೆ ಧ್ಯಾನಾದಿಗಳನ್ನು ಮಾಡಿದರೆ, ನಾಲ್ಕು ಗಂಟೆ ಓದಿದಷ್ಟು ಶಕ್ತಿ ಬರುತ್ತದೆ ಒಂದು ಗಂಟೆ ಓದಿದರೆ ನಾಲ್ಕು ಗಂಟೆ ಕರ್ಮಮಾಡಿದಷ್ಟು ಶಕ್ತಿ ಬರುತ್ತದೆ ರಾತ್ರಿಯಲ್ಲಿ ಒಂದು ನಿದ್ದೆಯಾಗಿ ಎಚ್ಚರವಾದಾಗ ತುಂಬಾ ವಿಲಕ್ಷಣ ಹೊಸ ವಿಚಾರಗಳು ಮುಕುರುತ್ತವೆ. ಎಂದೋ ವಿಚಾರ ಮಾಡಿದ ವಿಷಯದ ಮೇಲೆ ಯಾವಾಗೋ ಝುಗ್ಗನೆ ಬೆಳಕು ಬೀಳುತ್ತದೆ. ಎದ್ದು ಕಾಗದದ ಮೇಲೆ ಮೂಡಿಸುವಷ್ಟರಲ್ಲಿ ಅವುಗಳಲ್ಲಿ ನೂರಕ್ಕೆ ೫೦ ಹೊರಟು ಹೋಗುತ್ತವೆ.

ಶಕ್ತಿಗಿಂತ ಆರೋಗ್ಯ ಹೆಚ್ಚೆಂದು ನನ್ನ ಮತ ಆದಕಾರಣ, ಸನಾತನ ಸಂಪ್ರದಾಯದಂತೆ ನಿತ್ಯಕ್ರಮವನ್ನಿಟ್ಟರೆ, ಬೇರೆ ಶಕ್ತಿ ವರ್ಧಕ ಆಟಗಳ ಆವಶ್ಯಕತೆಯೇ ಇಲ್ಲ ಕುರುಡರಾಗಿ ಸನಾತನ ಜೀವನವನ್ನು ನಡಿಸಿದರೂ ಲಾಭವಿದೆ ತಿಳಿದು ನಡಿಸಿದರಂತೂ ಕೇಳುವುದೇನು ? ಜೀವನಕ್ಕೂ ಆಚಾರಕ್ಕೂ, ಆಚಾರಕ್ಕೂ ವಿಚಾರಕ್ಕೂ ನಡುವೆ ಒಂದು ಪ್ರಮಾಣವಿರಬೇಕು ನಮ್ಮ ಧರ್ಮ ಹಾಳಾದದ್ದು ಪ್ರಮಾಣ ಮೀರಿದ ದಾಂಭಿಕ ಜನರಿಂದ. ಪರೋಪಕಾರ ಮಾಡದೆ, ನಿರರ್ಥಕವಾಗಿ ಜನ್ಮ ಕಳೆದು 'ಸುಧಾ' ಓದಿದರೆ ಆಗುವುದೇನು ? ಸಾರಾಂಶ, ನನ್ನ ದೃಷ್ಟಿಯಲ್ಲಿ, ಅಂತಃಕರಣಪೂರ್ವಕವಾದ ಸಾದಾ ಪ್ರಾಮಾಣಿಕ ಜೀವನಕ್ಕೆ ಹೆಚ್ಚು ಬೆಲೆ ಇದೆ

**ನನ್ನ ಧಾರ್ಮಿಕ ವಿಚಾರಗಳು**—ನಾನು ಮಧ್ವಮತದಲ್ಲಿ ಹುಟ್ಟಿದವ ಮಧ್ವಾಚಾರ್ಯರ ಮೂಲತತ್ವಗಳಲ್ಲಿ ನನಗೆ ಶ್ರದ್ಧೆ ಆದರೆ, ಅದು ಕೇವಲ ಅಂಧಶ್ರದ್ಧೆಯಲ್ಲ ಆ ತತ್ವಗಳ ಮರ್ಮವನ್ನು ಅರಿತುಕೊಳ್ಳಲಿಕ್ಕೆ ಪ್ರಯತ್ನ ಮಾಡಿದೆ, ಮಾಡುತ್ತಿರುವೆ ಅವನ್ನು ಅಭ್ಯಾಸಮಾಡಿದಂತೆ ಅವುಗಳ ಸತ್ಯತೆ ಹೆಚ್ಚಿಗೆ ಹೊಳೆಯಹತ್ತಿದೆ ಅವು ಇನ್ನೂ ಪೂರಾ ತಿಳಿದಿಲ್ಲ ಇಂದಿಲ್ಲ ನಾಳೆ, ಅವೂ ತಿಳಿಯಬಹುದೆಂದು ಶ್ರದ್ಧೆ ಇಟ್ಟುಕೊಂಡಿರುವೆ. ಅಷ್ಟು ಮಾತ್ರ ಅಂಧಶ್ರದ್ಧೆ. ಮಧ್ವಾಚಾರ್ಯರ ಗ್ರಂಥಗಳ ಅಭ್ಯಾಸಮಾಡುವ ಈಗಿನ ರೀತಿಯಲ್ಲಿ ದೋಷಗಳಿವೆಂದು ನನ್ನ ಅಭಿಪ್ರಾಯ. ಆ ರೀತಿಯಲ್ಲಿ ಪೂರಾ ಬದಲಾಗಬೇಕು ಅಲ್ಲದೆ, ಆ ಮತದ ಮೂಲ ತತ್ವಗಳನ್ನು ಆಧುನಿಕ ರೀತಿಯಲ್ಲಿ, ಆಧುನಿಕರಿಗೆ ಕೂಡ ಸಮಾಧಾನವಾಗುವಂತೆ ಮಂಡಿಸುವುದು ಅವಶ್ಯ. ನನ್ನ

ಗ್ರಂಥಗಳಲ್ಲಿ ಹಾಗೆ ಮಾಡಲು ಯತ್ನಿಸಿರುವೆ. ಇದೂ ಒಂದು ನನ್ನ ವಿಶೇಷ. ಭೌತಿಕ ಶಾಸ್ತ್ರಗಳ ತತ್ವಗಳೂ ಆ ಕೆಲಸಕ್ಕೆ ಸಹಾಯಕಾರಿಯಾಗುತ್ತವೆ. ಮಧ್ವಾಚಾರ್ಯರು ಶಂಕರಾಚಾರ್ಯ ಮತ್ತು ರಾಮಾನುಜಾಚಾರ್ಯರ ತರುವಾಯದಲ್ಲಿ ಆಗಿಹೋಗಿರುವದರಿಂದ, ಹಿಂದಿನವರ ವಿಚಾರಸರಣಿಯಲ್ಲಿಯ ಕೊರತೆಗಳನ್ನು ತಿಳಿಯುವುದಕ್ಕೆ ಮಧ್ವಾಚಾರ್ಯರಿಗೆ ಹೆಚ್ಚು ಅನುಕೂಲತೆಯಿತ್ತು. ಅಲ್ಲದೆ, ಮಧ್ವಾಚಾರ್ಯರ ತರುವಾಯ, ಅವರನ್ನು ಸಪ್ರಮಾಣವಾಗಿಯೂ ಸಶಾಸ್ತ್ರವಾಗಿಯೂ ಖಂಡಿಸುವ ಯಾವ ಆಚಾರ್ಯರೂ ಹುಟ್ಟಿಲ್ಲ. ಅದ್ವೈತ, ವಿಶಿಷ್ಟಾದ್ವೈತ, ದ್ವೈತ, ಇವು ಮೂರೇ ಮುಖ್ಯ ಸಂಥಗಳು. 'ದ್ವೈತ' ಎಂಬ ಹೆಸರೇ ಮಧ್ವಾಚಾರ್ಯರ ಮತಕ್ಕೆ ಅನ್ವರ್ಥಕವಾಗುವದಿಲ್ಲವೆಂಬುದನ್ನು ನನ್ನ ಗ್ರಂಥಗಳಲ್ಲಿ ಹೇಳಿರುವೆ.

ಇದಾಯಿತು, ಮಧ್ವಾಚಾರ್ಯರ ವಿಚಾರ. ಈ ಮತದ ಅಭ್ಯಾಸ ಮಾಡತೊಡಗಿದಾಗ, ಹಿಂದಿನ ಆಚಾರ್ಯರ ಮತಗಳನ್ನು ಮೂಲದಲ್ಲಿ ಅಭ್ಯಾಸ ಮಾಡದ, ಇವು ತಿಳಿಯುವುದಿಲ್ಲವೆಂದೆನಿಸಿತು. ಹಾಗೆ ಅಭ್ಯಾಸಮಾಡಿದೆ. ಆಗ, ನನಗೆ ಮತ್ತೊಂದು ಮಹತ್ವದ ಮಾತು ಹೊಳೆಯಿತು. **ಈ ಆಚಾರ್ಯರುಗಳಲ್ಲಿ, ಸಕೃದ್ದರ್ಶನಕ್ಕೆ ಎಷ್ಟು ವಿರೋಧಗಳು ಕಾಣುತ್ತವೆಯೋ ಅಷ್ಟು ಇಲ್ಲವೇ ಇಲ್ಲವೆಂಬುದು.** ಸಾಮಾನ್ಯಗಳೇ ಹೆಚ್ಚು. ಸಾಮಾನ್ಯಗಳ ಮೇಲೆ ಭಾರಕೊಟ್ಟರೆ, ಈಗ ಕಾಣುವ ವಿರೋಧವು ಬಲುಮಟ್ಟಿಗೆ ಕಡಿಮೆಯಾಗುವುದು. ಮತ್ತೂ ಒಂದು ಮಹತ್ವದ ಮಾತು ಕಂಡುಹಿಡಿದೆ. ಅದಾವುದೆಂದರೆ — **ಅಪರೋಕ್ಷಜ್ಞಾನವಾಗುವ ವರೆಗಿನ ಸಾಧನಗಳಲ್ಲಿ ಇವರೆಲ್ಲರಲ್ಲಿ ಬಲುಮಟ್ಟಿಗೆ ಐಕ್ಯವಿದೆಂಬ**

**ಮಾತು. ಭೇದಗಳಿರುವುದು ಅಪರೋಕ್ಷಜ್ಞಾನದ ನಂತರದ ಸ್ಥಿತಿಯ ಬಗ್ಗೆ.** ಸಾಮಾನ್ಯತಃ ಸಾಧಕರಿಗೆ ಅವು ಮಹತ್ವದವಲ್ಲ ಆದಕಾರಣ, ಎಲ್ಲರೂ ಒಂದೇ ಗಾಡಿಯಲ್ಲಿ ಕುಳಿತುಕೊಂಡು ಬಲು ದೂರದ ವರೆಗೆ ಹೋಗಬಹುದು. ಈ ಆಚಾರ್ಯರಲ್ಲಿ ಮಾತ್ರವೇ ಅಲ್ಲ, ಜೈನ ಮತ್ತು ವೀರಶೈವ ಧರ್ಮದವರೂ ನಾವು ಕೂಡ, ಬಲು ದೂರದ ವರೆಗೆ ಕೂಡಿ ದಾರೀ ನಡೆಯುಬಹುದು ಸಾರಾಂಶ, **ಈ ವಿಷಯುದಲ್ಲಿ ನಾನು ನನ್ನ ಅಭ್ಯಾಸದಿಂದ ದೃಷ್ಟಿಕೋನವನ್ನೇ ಬದಲಿಸುವುದೊಂದು ದೊಡ್ಡ ವಿಚಾರಕ್ರಾಂತಿಗೆ ಪ್ರಾರಂಭ ಮಾಡಿರುವೆ.** ಅದರ ಪರಿಣಾಮಗಳು ಈಗಲೆ ತಿಳಿಯಲಿಕ್ಕಿಲ್ಲ ಕಾಲಾವಧಿ ಬೇಕು ಏನೊ ಇದು ಎಲ್ಲರ ಮೋರೆಯ ಮೇಲೆ ಕೈಯೆಳೆಯುವ ಯುಕ್ತಿಯೆಂದು ತಿಳಿಯಕೂಡದು. ಒಂದೊಂದು ಮತದಲ್ಲಿ ಒಂದೊಂದು ದೃಷ್ಟಿಯ ಮೇಲೆ ಭಾರ ಹಾಕಿರುವುದರಿಂದ, ಅವು ಬೇರೆ ಬೇರೆ ಕಾಣುತ್ತವೆ ಸಾಮಾನ್ಯತಃ ಈ ಮಾತನ್ನು ಈ ಮೊದಲೇ ಹೇಳಿರುವರೇನೋ ನಿಜ. ಆದರೆ ನನ್ನಂತೆ, ಅದನ್ನು ಸಾಧಾರವಾಗಿ ಇಡಲಿಕ್ಕೆ ಇನ್ನೂ ಯಾರೂ ಪ್ರಯತ್ನಿಸಿಲ್ಲ. ಆ ದೃಷ್ಟಿಯಿಂದ ಅವು ನನ್ನ ಸ್ವತಂತ್ರಸಿದ್ಧಾಂತಗಳೆಂದು ಹೆಮ್ಮೆಯಿಂದ ಹೇಳುತ್ತೇನೆ ನಾನು ಕೈಕೊಂಡ ಕೆಲಸವು ಅರಗಚ್ಚಾಗಿದೆ. ನಾನು ಪೂರ್ಣ ಮಾಡಲಿ ಬಿಡಲಿ, ವಿದ್ವಾಂಸರು ಆ ದಿಶೆಯಿಂದ ಸಾಗಿ ಪೂರ್ಣಗೊಳಿಸಬೇಕೆಂಬುದೇ ನನ್ನ ಮುಖ್ಯ ಉದ್ದೇಶ. ಹಾಗೆ ಮಾಡಿದರೆ ಹಿಂದೂ ಮತದ ಐಕ್ಯಕ್ಕೆ ಅತ್ಯಂತ ಅಡ್ಡಬರುವವೆಂದರೆ ಈ ಮತಗಳು (ಸದ್ಯದ ಸ್ಥಿತಿಯಲ್ಲಿ ಆದರಲ್ಲಿ ತಥ್ಯಾಂಶವಿದೆ) ಎಂಬ ಭಾವನೆ **ಕಡಿಮೆಯಾಗಿ ಐಕ್ಯಕ್ಕೆ ದಾರಿಯಾಗಬಹುದು. ಅರವಿಂದ**

ಘೋಷರ ಮತವೇ ಈ ಮೂರು ಮತಗಳ ತರುವಾಯದಲ್ಲಿ ಹುಟ್ಟಿದ ನಾಲ್ಕನೆಯ ಮತವೆಂದು ನನ್ನ ಅಭಿಪ್ರಾಯ ಎಲ್ಲರೂ ಆ ದೃಷ್ಟಿಯಿಂದ ಅದನ್ನು ಅಭ್ಯಾಸಮಾಡುವುದು ಆಗತ್ಯವಿದೆ.

**ಸಾಮಾಜಿಕ ವಿಚಾರಗಳೂ ಧರ್ಮವೂ** — ಇದಾಯಿತು ವಿದ್ವಜ್ಜನರ ವಿಚಾರ ಸಾಮಾನ್ಯ ಜನಸಮೂಹಕ್ಕೆ ಇವು ಗಳ ಸಂಬಂಧ ವಿಶೇಷ ಬರುವುದಿಲ್ಲ ಸಾಮಾಜಿಕ ಪದ್ಧತಿ ಗಳು ಧಾರ್ಮಿಕ ವಿಚಾರತತ್ವಗಳ ತಳಹದಿಯಮೇಲ ಅವ ಲಂಬಿಸಿರುತ್ತವೆಂದು ನನ್ನ ಮತ ಆ ತರಹದ ಸಾಮಾ ಜಿಕ ಕ್ರಾಂತಿಗೆ ಬಲುದೊಡ್ಡ ಅಧಿಕಾರ ಬೇಕು ಆ ಯೋಗ್ಯತೆ ನನ್ನಲ್ಲಿ ಇಲ್ಲ ಆದಕಾರಣವೇ ನನ್ನ ವೈಯಕ್ತಿಕ ಅಭಿ ಪ್ರಾಯವೇನಿದ್ದರೂ, ಸಂಪ್ರದಾಯವನ್ನು ಆದಷ್ಟುಮಟ್ಟಿಗೆ ಅನುಸರಿಸುತ್ತೇನೆ ವರ್ಣಾಶ್ರಮ ಸಮಾಜಪದ್ಧತಿಯೇ ಹೆಚ್ಚು ಶಾಶ್ವತವಾದುದೆಂದು ನನಗೆ ತೋರುತ್ತದೆ ಗುಣಕರ್ಮಶಃ ಇದ್ದ ವರ್ಣಾಶ್ರಮವೇ ನಿಜವಾದ ವರ್ಣಾಶ್ರಮ. ಜನ್ಮ ಅವುಗಳನ್ನು ಅಭಿವೃದ್ಧಿಪಡಿಸುವುದಕ್ಕೆ ಒಂದು ಸಾಧನ; ಒಂದು ಸಾಧನ ಮಾತ್ರ ಅದು ೯-೧೦ ಸಾಧನಗಳಲ್ಲಿ ಒಂದು ಎಂದು ಭಾಗವತದಲ್ಲಿ ಹೇಳಿದೆ. ಅದರ ಅನುಕೂಲತೆಯುಳ್ಳವರು, ಮಿಕ್ಕ ಸಾಧನಗಳನ್ನ ಳವಡಿಸಿಕೊಂಡು, ಪೂರ್ಣರಾಗಲು ಪ್ರಯತ್ನಿಸಿದರೆ ತಪ್ಪೇನು? ಜನ್ಮವನ್ನು ಹಿಡಿಯದೆ, ಮಿಕ್ಕ ಪ್ರಯೋಗಗಳಾಗುವುದಕ್ಕೂ ಅಡ್ಡಿಯಿಲ್ಲ ಜಾತಿ-ವರ್ಣ ಇವೆಲ್ಲವನ್ನೂ ದೂರ ಸರಿಸಿದ ಪ್ರಯೋಗಗಳೂ ಆಗಲಿ. ಎಲ್ಲ ಪ್ರಯೋಗಗಳ ಮುಖ್ಯ ಧ್ಯೇಯವು ಮನುಷ್ಯನಲ್ಲಿದ್ದ ದೋಷ ಗಳನ್ನು ಆದಷ್ಟು ಕಡಿಮೆಮಾಡಿ, ಆತನಲ್ಲಿದ್ದ ಸಹಜ ಗುಣ ಗಳನ್ನು ಅಭಿವೃದ್ಧಿಮಾಡುವುದು. ಗುಣಗಳೆಂದರೆ ಬಾಹ್ಯ

ಗುಣಗಳಲ್ಲ, ಸಾತ್ವಿಕಾದಿ ಗುಣಗಳು ಸಾರಾಂಶ, ಭಿನ್ನಭಿನ್ನ ಅಭಿಪ್ರಾಯದವರು, ಮಿಕ್ಕವರ ಮೇಲೆ ಮಣ್ಣು ತೂರುತ್ತ ಕೂಡ್ರದೆ, ಒಂದು ಕ್ರಮ ಹಿಡಿದು, ತಮ್ಮದೊಂದು ಶಾಸ್ತ್ರ ವನ್ನು ನಿರ್ಮಾಣಮಾಡಿಕೊಂಡು ಪ್ರಯೋಗ ನಡಿಸಬೇಕು

ಇನ್ನು ಆಚಾರಗಳ ವಿಚಾರ. ಇದು ಅದಕ್ಕಿಂತ ಕಠಿನ ವಿಷಯ. ನಿಜವಾಗಿ ಆಚಾರಗಳಿಗೆ ಯಾರೂ ಅನಿರ್ಬಂಧ ವಾದ ಮಹತ್ವ ಕೊಟ್ಟಿಲ್ಲ **ಆಚಾರಗಳು ಒಳತಿರುಳನ್ನು ಸಂರಕ್ಷಿಸುವ ಕವಚಗಳು—ಕವಚಗಳು ಮಾತ್ರ**. ಆದರ, ಸಮಾಜದೃಷ್ಟಿಯಿಂದ ಈ ಕವಚಗಳೂ ಆವಶ್ಯಕಗಳೇ ಎಂದು ನನ್ನ ಅಭಿಪ್ರಾಯ **ಅವು ಮುತ್ತಿಗೆ ಸಿಂಪು ಇದ್ದಂತೆ; ಹಣ್ಣಿಗೆ ಸಿಪ್ಪೆಯಿದ್ದಂತೆ; ವಿಚಾರಗಳ ಕುಂದಣದಲ್ಲಿ ಅವನ್ನು ಕೂಡ್ರಿಸಬೇಕು.** ಅವಕ್ಕೆ ಮಿತಿಮೀರಿ ಮಹತ್ವ ಕೊಡುವುದೂ ತಪ್ಪು; ಅವನ್ನು ತೀರ ತುಚ್ಛೀಸುವುದೂ ತಪ್ಪು ಆಯಾಕಾಲದ ವಿದ್ವಾಂಸರು ( ಬಹುಮತದಿಂದಲ್ಲ) ಅವನ್ನು ನಿರ್ಣಯಿಸಬೇಕು ಧಾರ್ಮಿಕ ಕಾಂಗ್ರೆಸ್ಸು ಕೂಡಬೇಕು ಅಲ್ಲಿ ವಿದ್ವತ್ಪರಿಷತ್ತುಗಳ ಸಲಹೆಯಿಂದ ಆಚಾರವಿಚಾರಗಳ ನಿರ್ಣಯವಾಗಬೇಕು.

ಇರಲಿ ಈ ಸಂಬಂಧದಿಂದ, ನಾನು ಮಾಡಿದ ವಿಚಾರ ಗಳು ಇಷ್ಟೇ ಗೀತೆಯ ಸಂಬಂಧವಾದ ನನ್ನ ಗ್ರಂಥಗಳಲ್ಲಿ ನಾನು ನನ್ನ ಸ್ವತಂತ್ರ ಸಿದ್ಧಾಂತಗಳನ್ನು ಇಡಹತ್ತಿದ್ದೇನೆ. ತಟ್ಟಿ ಶ್ಯಾಮರಾಯರಂಥ ತೀಕ್ಷ್ಣ ಜ್ಞಾನದ ಲಾಲಸೆ ಯುಳ್ಳ ಜಿಜ್ಞಾಸುಗಳ ನೆರವು ನನಗೆ ಈ ವಿಷಯದಲ್ಲಿ ಉಪಯೋಗವಾಗುತ್ತಿದೆ. ವಾಯ್. ಕೆ. ರಾಮಚಂದ್ರರಾಯ ರಂಥವರ ಔದಾರ್ಯದಿಂದ ನನ್ನ ಗೀತಾಗ್ರಂಥಗಳನ್ನು

ಪ್ರಕಟಿಸುವುದಕ್ಕೆ ಪ್ರೋತ್ಸಾಹನ ದೊರೆತಿದೆ. ಶ್ರೀಮನ್ ಭಾಂವಿ ತಮ್ಮಣರಾಯರಂಥ ಗುಣಗ್ರಾಹಿಗಳು ನನ್ನ ಪ್ರತಿಯೊಂದು ಗ್ರಂಥಕ್ಕೆ ಐವ್ವೈದು ರೂಪಾಯಿ ಕೊಟ್ಟು ಕೊಳ್ಳುತ್ತೇವೆಂದು ಅಭಿವಚನ ಕೊಟ್ಟು, ಅದರಂತೆ ಕೊಳ್ಳುತ್ತಿದ್ದರೂ, ಅವರ ಗುಣಗ್ರಾಹಕತೆಯ ಪೂರ್ಣಲಾಭವನ್ನು ತಕ್ಕೊಳ್ಳುವುದು ಇನ್ನೂ ಆಗಿಲ್ಲ. ಮುಂದಿನದನ್ನು ಯಾರು ಹೇಳುವರು?

**ಹುಯಿಲಗೋಳ ವೆಂಕಟರಮಣಾಚಾರ್ಯರ ಸ್ಮೃತಿ.**

೨೮-೨-೧೯೧೦ನೆಯ ದಿವಸ ಗೀತಾಭ್ಯಾಸಕ್ಕೆ ಮೊದಲು ಮಾಡಿದೆ. ಹುಯಿಲಗೋಳ ವೆಂಕಟರಮಣಾಚಾರ್ಯರು ನನ್ನ ಗುರುಗಳು. ಅವರು ವೈಯ್ಯಾಕರಣಿಗಳು ಒಳ್ಳೇ ಘನಪಂಡಿತರೇನೂ ಅಲ್ಲ. ಆದರೆ ನಿಜವಾದ ವೇದಾಂತ ಜೀವಿಗಳು, ಅತ್ಯಂತ ಸಾತ್ವಿಕರು. ಆದಕಾರಣ, ಅವರನ್ನು ಆರಿಸಿಕೊಂಡೆ. ಅವರ ನಿಗರ್ವವೃತ್ತಿ, ವೈರಾಗ್ಯಬುದ್ಧಿ, ಸಾದಾ ಜೀವನ, ತಮ್ಮ ವೇದಾಂತದಲ್ಲಿ ಶ್ರದ್ಧೆ ಇವು ನನ್ನ ಮನವನ್ನು ಆಕರ್ಷಿಸಿದವು. ಅವರು ದಿನಾಲು ನಮ್ಮ ಮನೆಗೆ ಬಂದು ಗೀತಾಪಾಠ ಹೇಳುತ್ತಿದ್ದರು. ಗುತ್ತಲ ರಂಗಾಚಾರ್ಯರೂ ಧಾರವಾಡಕರ ವಾಮನರಾಯರೂ ಮುಂದೆ ನನ್ನೊಡನೆ ಅವರಲ್ಲಿ ಓದಹತ್ತಿದರು. ವರ್ಷ ಮುಗಿದ ಬಳಿಕ, ಅವರಿಗೆ ನಾನು ಕೆಲವು ಹಣ ಕೊಡಹೋದೆ (ಆಗ ನಾನು ವಕೀಲನಿದ್ದೆ) ಅವರು ಹಿಡಿಯಲಿಲ್ಲ! ಅವರಿಗೆ ಸಂಬಳ ಶಂಕರಾಚಾರ್ಯ ಪಾಠಶಾಲೆಯಲ್ಲಿ ಹತ್ತೇ ರೂಪಾಯಿ! ನಾನು ಅವರಿಗೆ ಸಲ್ಲಿಸತಕ್ಕ ಹಣ ಪ್ರತ್ಯೇಕ ಇಟ್ಟುಕೊಂಡಿದ್ದೆ. ಅನೇಕ ವರ್ಷ ಅದನ್ನೆಲ್ಲ ಬೆಳಿಸಿ, ಅವರು ಸತ್ತಬಳಿಕ ಅವರ ಮಗನಿಗೆ ಸಲ್ಲಿಸಿದೆ. ಅವರಿಗೆ ತಮ್ಮ ವಿದ್ಯೆಯಲ್ಲಿ ಎಷ್ಟರ

ಮಟ್ಟಿಗೆ ಶ್ರದ್ಧೆಯಿತ್ತೆಂದರೆ, ನಾನು ಎಷ್ಟು ಬೇಡವೆಂದರೂ ತಮ್ಮ ಬುದ್ಧಿವಂತ ಮಕ್ಕಳನ್ನು ಕನ್ನಡ ಮತ್ತು ಇಂಗ್ಲಿಷ ಶಾಲೆಗಳಿಗೆ ಹಾಕದೆ ಅವರಿಗೆ ತಮ್ಮ ವಿದ್ಯೆಯನ್ನೇ ಕೊಟ್ಟರು ದುರ್ದೈವದಿಂದ ಆವರ ಹಿರಿಯ ಮಗ ನಮ್ಮಲ್ಲಿದ್ದಾಗ ತೀರಿ ಕೊಂಡ ಅವರ ವೈರಾಗ್ಯವು ಎಷ್ಟು ಕಡಕು ಇತ್ತೆಂದರೆ ಅವರು ತಮ್ಮ ಹೆಂಡತಿಗೆ ಪ್ಲೇಗು ಬಂದಾಗ ಸಹ, ನಮ್ಮ ಮನೆಗೆ ಬಂದು ಪಾಠ ಹೇಳುವುದನ್ನು ಬಿಡಲಿಲ್ಲ! ನನಗೆ ಅದು ಮುಂಚೆ ಗೊತ್ತಾಗಿದ್ದಿಲ್ಲ ಗೊತ್ತಾದ ಕೂಡಲೆ ನಾನೇ ಅವರಿಗೆ ಸದ್ಯಕ್ಕೆ ಬರಬೇಡಿರೆಂದು ಹೇಳಿದೆ ಹೆಂಡತಿ ತೀರಿ ಕೊಂಡಳು! ಪುನಃ ಪಾಠ ಪ್ರಾರಂಭಿಸಿದರು

**ನನ್ನ ವೇದಾಂತದ ಅಭ್ಯಾಸ** — ನಾನು ಪಾಂಡುರಂಗಿ ಶ್ರೀನಿವಾಸಾಚಾರ್ಯರಲ್ಲಿ ಶಾಂತಿಪಾಠ ಹಾಕಿ, ಬ್ರಹ್ಮಸೂತ್ರ ಮುಗಿಸಿ, ಮಂಗಳವನ್ನು ಮಾಡಿದೆ ಅವರೂ ಏನೂ ಹಣತೆಗೆದು ಕೊಳ್ಳದೆ ಕೊನೆಯವರೆಗೆ ಪಾಠ ಹೇಳಿದರು! **ಇಂಥದೊಂದು ನಿಃಸ್ವಾರ್ಥ ವರ್ಗದ ಕೊರತೆ ನಮ್ಮ ಸಮಾಜಕ್ಕೆ ಇರುತ್ತದೆ. ಅವರು ಪಾಠವನ್ನೇ ಹೇಳಲಿ, ದೇಶಸೇವೆಯನ್ನೇ ಮಾಡಲಿ; ಅವರ ಹೊಟ್ಟೆಯ ಯೋಗಕ್ಷೇಮವನ್ನು ನೋಡಿಕೊಳ್ಳುವುದು ಸಮಾಜದ ಕರ್ತವ್ಯ.** ಎಲ್ಲಿಯವರೆಗೆ ಆ ತರಹದ ಬುದ್ಧಿಜಾಗ್ರತಿಯಾಗಿಲ್ಲವೋ ಅಲ್ಲಿಯವರೆಗೆ ಧರ್ಮವೆಂಬುದು ಒಂದು ಆಟ ಮಾತ್ರ ಮಿಕ್ಕ ಗ್ರಂಥಗಳೆಲ್ಲವನ್ನೂ ನಾನು ಸ್ವಂತವೇ ಓದಿದೆ; ಓದುತ್ತಿದ್ದೇನೆ ಮುಖ್ಯವಾಗಿ ಓದಿದ ಗ್ರಂಥವೆಂದರೆ ಗೀತೆಯೊಂದೇ, ಅದೇ ಇನ್ನೂ ಪೂರ್ಣವಾಗಿ ತಿಳಿದಿಲ್ಲ ಅರವಿಂದ ಘೋಷರ ಗ್ರಂಥಗಳು ನಮ್ಮ ವೇದಾಂತವನ್ನು ತಿಳಿಯುವುದಕ್ಕೆ ನನಗೆ ಬಹಳ

ಸಹಾಯವಮಾಡುತ್ತಿವೆ ಆಯಿತು ಇಷ್ಟೇ ಸಾಕು ಇಲ್ಲಿಗೆ ನನ್ನ ಆತ್ಮವಿಕಾಸದ ಕಥೆ ಮುಗಿಸುತ್ತೇನೆ

**ನನ್ನ ಧಾರ್ಮಿಕ ಚಟುವಟಿಕೆಗಳು.**— ಗಂಗಾಧರರಾವ ದೇಶಪಾಂಡೆ ಇವರಿಗೆ ಬರೆದ ಪತ್ರದಲ್ಲಿ ನಾನು ನನ್ನ ಧಾರ್ಮಿಕ ಜೀವನದ ತಿರುಳು ಕೊಟ್ಟಿರುವೆ ಅದು ಹೀಗೆ—" I am essentially a man of religious tendency. But I find that orthodoxy is lifeless and that the new tendency in religion is aimless So I want that new life should be put in orthodoxy But it is a task too great for me Therefore I simply want to study and myself lead a living, religious life as far as possible" **ಹಳೆಯದು ನಿರ್ಜೀವವು, ಹೊಸದು ನಿರ್ಧ್ಯೇಯುವು ಎಂಬುದು ನನ್ನ ಸೂತ್ರ.** ಆದಕಾರಣ, ಧಾರ್ಮಿಕ ಜೀವನದಲ್ಲಿ ನಾನು ತ್ರಿಶಂಕು ಸನಾತನಿಗಳಿಗೆ ಸುಧಾರಕನು; ಸುಧಾರಕರಿಗೆ ಸನಾತನಿಯು ನನ್ನ ಜೀವನದಲ್ಲಿ ಧಾರ್ಮಿಕ ಚಟುವಟಿಕೆಗಳು ಕಡಿಮೆ ಕೆಲವುಗಳನ್ನು ಕೆಳಗೆ ಕೊಡುತ್ತ ಹೋಗುವೆ.

**ಮಧ್ವಸಿದ್ಧಾಂತೋತ್ತೇಜಕ ಸಭೆಯ ಸ್ಮೃತಿ.**—೧೯೦೬ ರಲ್ಲಿ, ಇಲ್ಲಿಯ ವೈಷ್ಣವ ಸಭೆಯಲ್ಲಿ ಡಾಯರೆಕ್ಟರನಾದೆ. ಪರೀಕ್ಷಾಕ್ರಮದಲ್ಲಿ ಸುಧಾರಣೆ ಮಾಡಿದೆ, ವ್ಯವಸ್ಥೆ ಮಾಡಿದೆ. ಆದರೆ ಎರಡು ವರ್ಷಗಳಲ್ಲಿ, ಅಲ್ಲಿಯ ನಿರ್ಜೀವ ಸ್ಥಿತಿ ನನ್ನ ಮನಸ್ಸಿಗೆ ಬರಲಿಲ್ಲ. ಬಿಟ್ಟೆ ನಮ್ಮ ಕಕ್ಕಂದಿರನ್ನು ಡಾಯಕ್ಟರ ಮಾಡಿದೆ.

**ಉತ್ತರಾದಿ ಮಠಕ್ಕೆ ಮಾನಪತ್ರ.**— ೧೯೦೭ ರಲ್ಲಿ ಮಠದ ವ್ಯವಸ್ಥೆಯಲ್ಲಿ ಸುಧಾರಣೆ ಮಾಡಲಿಕ್ಕೆ ಪ್ರಯತ್ನಿ

ಸಿವೆ ಮಠದ ಬಗ್ಗೆ ನನ್ನಲ್ಲಿ ಪೂಜ್ಯಬುದ್ಧಿ ಅಂತಲೇ, ಆದರ ಮುಖಾಂತರವಾಗಿ ಧರ್ಮವ್ಯವಸ್ಥೆ ಚೆನ್ನಾಗಿ ಆಗ ಬೇಕೆಂದು ನನ್ನ ಇಚ್ಛೆ. ಗವ್ಹರ್ನರರಿಗೆ ಮಾನಪತ್ರದ ಮುಖಾಂತರವಾಗಿ ಬಿನ್ನವಿಸಿಕೊಳ್ಳುವಂತೆ, ಶ್ರೀಶ್ರೀಗಳವರಿಗೆ ಬಿನ್ನವತ್ತಳೆ ಕೊಟ್ಟು ಹೇಳಿಕೊಳ್ಳುವ ಸಂಪ್ರದಾಯ ತೆಗೆದೆ. ಇಡೀ ಧಾರವಾಡದವರಲ್ಲರೂ ಕೂಡಿ ಒಂದು ಮಾನಪತ್ರ ಕೊಡಬೇಕೆಂದು ಗೊತ್ತಾಯಿತು. ಮಾನಪತ್ರಕ್ಕಾಗಿ ಒಂದು ಚಿಕ್ಕ ಕಮೀಟಿ ಏರ್ಪಟ್ಟಿತ್ತು. ನಾನು ಅದಕ್ಕೆ ಕಾರ್ಯದರ್ಶಿ. ಮಾನಪತ್ರ ತಯಾರು ಮಾಡಿದೆ. ಮಂಜೂರು ಮಾಡಿಸಿಕೊಂಡೆ. ಧಾರವಾಡದಲ್ಲಿ ಸ್ವಯಂಸೇವಕ ದಳವನ್ನೇರ್ಪಡಿಸಿ ವೈಭವದಿಂದ ಶ್ರೀಶ್ರೀಗಳವರು ಬರಮಾಡಿಕೊಳ್ಳಲ್ಪಟ್ಟರು. ಮಾನಪತ್ರ ಅರ್ಪಿತವಾಯಿತು. ಉತ್ತರ ಕೊಡುತ್ತೇವೆಂದು ಆಶ್ವಾಸನ ದೊರೆಯಿತು. ಯಾರು ಏನು ಕಿವಿ ಊದಿದರೋ, ಶ್ರೀಶ್ರೀಗಳವರು ಹಿಂದಕ್ಕೆ ಸರಿದರು. ಶಿಷ್ಯರ ಮೇಲೆ ಹಣದ ಒತ್ತಾಯ ಪಡಿಸಬಾರದೆಂದು ಅದರಲ್ಲಿ ಕೇಳಿಕೊಂಡಿತ್ತು. ಆಗಿನ ಶ್ರೀಶ್ರೀಗಳವರು ಅತಿಶಯ ಸಾತ್ವಿಕ ಸ್ವಭಾವದವರು. ಶಿಷ್ಯರು ಮಾನಪತ್ರಕ್ಕೆ ಉತ್ತರದ ಹಾದೀ ನೋಡಿದರು. ಉತ್ತರ ದೊರೆಯಲಿಲ್ಲ. ಹುಬ್ಬಳ್ಳಿಗೆ ಹೊರಟು ಹೋದರು. ಅಲ್ಲಿಗೆ ಹೋಗಿ, ಆ ಊರ ವತಿಯಿಂದಲೂ ಮಾನಪತ್ರ ಕೊಡುವ ಏರ್ಪಾಟು ಮಾಡಿದೆ. ಅಲ್ಲಿ ಮಾನಪತ್ರವನ್ನೇ ಹಿಡಿಯಲಿಲ್ಲ. ಮುಂದೆ ಮಹಾಸಮಾರಾಧನೆ ಬಂದಿತು. ಆ ಕಾಲಕ್ಕೆ ಚಿನ್ನಮುಳಗುಂದ ಹನಮಂತರಾಯರ ಮಧ್ಯಸ್ತಿಕೆಯಿಂದ ಮಾನಪತ್ರ ಸ್ವೀಕೃತವಾಗಿ ಉತ್ತರ ಕೊಡಲ್ಪಟ್ಟಿತು. ಇಲ್ಲಿ ಸಭೆ ಕೂಡಿ, ಅಭಿನಂದನ ತಂತಿ

ಹೋಯಿತು. ನಾನು ಹೋಗಿ ಮುದ್ರಾಧಾರಣ ತಕ್ಕೊಂಡು
ಬಂದೆ. ಈ ಚಳವಳಿಯ ಇತಿಹಾಸವನ್ನು ಮಧ್ವಸಿದ್ಧಾಂತ
ಸಭೆಯವರು ಮುದ್ರಿಸಿದ ವರದಿಯಲ್ಲಿ ಓದಬಹುದು.

**ಮಹಾಭಾರತದ ರಾಜಕೀಯ ಮಹತ್ವ**—ರಾಷ್ಟ್ರೀಯ
ಶಾಲೆಯಲ್ಲಿ ಕಲಿಸುವಾಗ, ಮಹಾಭಾರತದ ರಾಜಕೀಯ
ಮಹತ್ವವನ್ನು ಮನಗಂಡೆ. ಉದ್ಯೋಗಪರ್ವದಲ್ಲಿಯ ಮೊದಲ
ನೆಯ ಕೆಲವು ಅಧ್ಯಾಯ ಓದಿ ನೋಡಿರಿ. ಈಗಿನ ಪೀರಪಕ್ಷ,
ಮಂದಪಕ್ಷ ಮುಂತಾದ ಮುಖಂಡರ ಬಾಯಿಯಿಂದ ಹೊರಡು
ವಂಥ ಉದ್ಗಾರಗಳೇ ಹೆಚ್ಚು ಉಜ್ವಲವಾದ ಭಾಷೆಯಲ್ಲಿ
ವ್ಯಾಸರು ಹಾಕಿದ್ದನ್ನು ಕಂಡು ನಿಮಗೆ ಆಶ್ಚರ್ಯವಾಗ
ಬಹುದು. ಆಗ ವ್ಯಾಸರ ಮಹತ್ವ ಗೊತ್ತಾಗುತ್ತದೆ. ಇದನ್ನೂ
ಉತ್ತರಗೋಗ್ರಹಣ, ಶಾಂತಿಪರ್ವ ಮುಂತಾದವುಗಳನ್ನೂ
ನಾನು ಕನಿಷ್ಠ ಸಾವಿರಾರು ವಿದ್ಯಾರ್ಥಿಗಳಿಗೆ ಓದಿತೋರಿಸಿರುವೆ.

**ಗೀತೋಪನ್ಯಾಸಗಳು**—೧೯೧೧ರ ಸುಮಾರಕ್ಕೆ ಥಿಯಾ
ಸಾಫಿಕಲ್ ಸೊಸಾಯಿಟಿಯ ಎಫ್. ಟಿ. ಬ್ರುಕ್ಸ ಎಂಬವರ
ಗೀತೆಯ ಉಪನ್ಯಾಸಗಳು ಆದವು. ಅವು ಉತ್ಕೃಷ್ಟವಾಗಿ
ದ್ದವು. ಆದರೆ ನಿಷ್ಕಾರಣವಾಗಿ ಹಳೆಯ ಆಚಾರ್ಯರ ಮೇಲೆ
ಅವರು ಕೆಲವು ಸಲ ಹರಿಹಾಯ್ದರು. ನಾನು ಎದ್ದು ತಡೆದೆ.
ಕೂಡಲೆ ರಪಾಟಿ ಚನ್ನಮಲ್ಲಪ್ಪನವರು ನನಗೆ ಸಭೆ ಬಿಟ್ಟು
ಹೊರಗೆ ಹೋಗಲಿಕ್ಕೆ ಹೇಳಿದರು. ನಾನು ಹೋಗುವುದಿಲ್ಲ
ವೆಂದೆ. ಬ್ರುಕ್ಸರವರು ರಪಾಟಿಯವರಿಗೆ ಬುದ್ಧಿಹೇಳಿ ಕೂಡ್ರಿ
ಸಿದರು. ಧಾರವಾಡದಲ್ಲಿ ಆಗ ಥಿಯಾಸಫಿ ವಿರುದ್ಧ ಕ್ಷೋಭೆ
ಯುಂಟಾಯಿತು. ವಿವೇಕಾನಂದ ಸೊಸಾಯಿಟಿಯ ನಿರ್ಮಲಾ
ನಂದರನ್ನು ಕರಿಸಿ, ಅವರ ಉಪನ್ಯಾಸ ಮಾಡಿಸುವುದು ಗೊತ್ತಾ

ಯಿತು. ಕರಿಸಿದೆ ಆದರೆ ಅವರು ಒಳ್ಳೆ ಉಪನ್ಯಾಸಕರಲ್ಲದ್ದ ರಿಂದ ಬ್ರುಕ್ಸರವರಷ್ಟು ಅವು ಪರಿಣಾಮಕಾರಿಯಾಗಲಿಲ್ಲ ಕೂಡಲೆ ಕುರ್ತಕೋಟಿಯ ಮಹಾಭಾಗವತರನ್ನು ಕರಿಸಿದೆ. ಅವರ ಉಪನ್ಯಾಸಗಳು ಜನತೆಯನ್ನು ಆಕರ್ಷಿಸಿದವು

**ಶಂಕರಾಚಾರ್ಯರ ಸಂಸ್ಕೃತ ಪಾಠಶಾಲೆ.**—ಗುರುನಾಥ ರಾಯರು ಈ ಪಾಠಶಾಲೆಯನ್ನು ಒಂದು ಉದಾತ್ತವಾದ ಧೋರಣದಿಂದ ನಡಿಸಿದರು ದ್ವೈತ ಅದ್ವೈತ ಮುಂತಾದ ಭೇದವಿಲ್ಲದೆ, ಯಾವತ್ತೂ ವೇದಾಂತಗಳನ್ನು ಕಲಿಸುವ ಶಾಲೆ ಅದು. ಘಾಟಕ ಗುರುನಾಥರಾಯರಿಗೂ ಕೃಷ್ಣಶಾಸ್ತ್ರಿ ಜಿಟ ಗೇರಿ ಇವರಿಗೂ ವೈಷ್ಣವರಾದ ಅಣ್ಣಿಗೇರಿ ತಮಣಾ ಚಾರ್ಯರು ಗುರುಗಳು; ಅವರೇ ಅದರ ಮೊದಲನೆಯ ಮುಖ್ಯ ಅಧ್ಯಾಪಕರು ಹುಯಿಲಗೋಳ ವೆಂಕಟರಮಣಾಚಾರ್ಯರು ಅಲ್ಲಿಯ ವೈಯ್ಯಾಕರಣಿಗಳು. ನಾನು ಹತ್ತೆಂಟು ವರ್ಷ ಅದಕ್ಕೆ ಚೇಅರಮನ್ನನು ಹೀಗೆ ಅವರು ಸಮಬುದ್ಧಿಯನ್ನು ಅವ್ಯಾಹತ ವಾಗಿ ಇಟ್ಟದ್ದರು ೧೯೧೧ರ ಸುಮಾರಕ್ಕೆ ಕುರ್ತಕೋಟಿ ಭಾಗವತರ ಉಪನ್ಯಾಸಗಳು ಪರಿಣಾಮಕಾರಿಯಾದಕೂಡಲೆ, ನನ್ನ ಬಾಲಸ್ನೇಹಿತರಾದ ಅವರನ್ನು ಪಾಠಶಾಲೆಗೆ ಬರಲಿಕ್ಕೆ ಬಿನ್ನವಿಸಿಕೊಂಡೆ. ಅವರು ಒಪ್ಪಿದರು ಬಂದು ೧೩-೧-೧೨ ನೆಯ ದಿವಸ ಕಾರ್ಯದರ್ಶಿಗಳಾದರು

**ಬೆಂಗಳೂರಿನಲ್ಲಿ ಶಂಕರಾಚಾರ್ಯರಿಗೆ ಮಾನಪತ್ರ.**— ನಾನೂ ವಿರೂಪಾಕ್ಷಶಾಸ್ತ್ರಿಗಳೂ ಗುರುನಾಥರಾಯರೂ ೨೩-೧-೧೯೧೧ನೆಯ ದಿವಸ ಬೆಂಗಳೂರಿನಲ್ಲಿ ಪಾಠಶಾಲೆಯ ವತಿ ಯಿಂದ ಮಾನಪತ್ರ ಅರ್ಪಿಸಿದೆವು ಸಂಸ್ಕೃತ ಅಭ್ಯಾಸಕ್ರಮ ದಲ್ಲಿ ಹೊಸ ಮಾರ್ಪಾಟು ಮಾಡುವ ನನ್ನ ಉದ್ದೇಶ ಅವರಿಗೆ

ತಿಳಿಸಿದೆ ಅವರು ಒಪ್ಪಿದರು ಆದರೆ, ಆ ಹೊಸ ಅಭ್ಯಾಸ ಕ್ರಮವನ್ನು ಸಿದ್ಧಪಡಿಸಲಿಕ್ಕೆ ನನಗೆ ಕೆಲವು ವರ್ಷಗಳು ಬೇಕಾದವು ಅವು ಮಂಜೂರಾಗಿ ೧೯೧೯ ರಲ್ಲಿ ಮುದ್ರಿತವಾದವು ಅದರಲ್ಲಿ ಹಳೆಯ ಅಭ್ಯಾಸಕ್ರಮವು ಅಷ್ಟೊಂದು ಫಲಕಾರಿಯಲ್ಲವೆಂಬುದನ್ನು ನಿಚ್ಚಳವಾಗಿ ನಿವೇದಿಸಿರುವೆ ಹೊಸ ಅಭ್ಯಾಸ ಕ್ರಮದಲ್ಲಿ, ಮೊದಲನೆಯ ನಾಲ್ಕು ವರ್ಷ ಸ್ಮಾರ್ತ, ಯಾಜ್ಞಿಕ, ಸಂಸ್ಕೃತ, ಆಂಗ್ಲ ಮತ್ತು ಸ್ವಭಾಷೆಗಳಲ್ಲಿ ಸಾಮಾನ್ಯ ಪರಿಚಯವೂ ಜ್ಯೋತಿಷ, ಸಾಹಿತ್ಯ ಮತ್ತು ವೈದ್ಯಕ ಇವುಗಳಲ್ಲಿ ಸ್ವಲ್ಪ ಪರಿಚಯವೂ ಉಂಟಾಗಿ, ವಿದ್ಯಾರ್ಥಿಯಾದವನಿಗೆ ಉಪಜೀವನಕ್ಕೂ ಅವನಿಂದ ಸಮಾಜಕ್ಕೂ ಉಪಯೋಗವಾಗುವಂತೆ ಅಭ್ಯಾಸಕ್ರಮವು ನಿರ್ಧರಿಸಲಾಗಿದೆ ಮುಂದೆ, ವಿಶೇಷ ಅಭ್ಯಾಸ ಮಾಡುವವರಿಗೆ ಮೈಸೂರಿನ ವಿದ್ವತ್ಪರೀಕ್ಷೆ, ಮದ್ರಾಸಿನ ಶಿರೋಮಣಿ ಪರೀಕ್ಷೆಗಳಿಗೂ ಹೋಗಲು ಅನುಕೂಲ ಮಾಡಿಕೊಡಲ್ಪಟ್ಟಿದೆ ಶ್ರೇಷ್ಠ ತರಗತಿಗಳಲ್ಲಿ ತುಲನಾತ್ಮಕ ಅಭ್ಯಾಸಕ್ಕೂ ವ್ಯವಸ್ಥೆಯಾಗಿದೆ ನಮ್ಮ ದೇಶದಲ್ಲಿ ಲುಪ್ತವಾದ ಪೂರ್ವಮೀಮಾಂಸ ಮತ್ತು ಆಯುರ್ವೇದ ಈ ವಿಷಯಗಳನ್ನೂ ಕ್ರಮೇಣ ಸೇರಿಸಬೇಕೆಂದಿತ್ತು ಆ ಅಭ್ಯಾಸ ಕ್ರಮವು ಆಮಲಿನಲ್ಲಿ ಬಂದಿದೆಯೋ ಇಲ್ಲವೋ ಗೊತ್ತಿಲ್ಲ ಘಾಟಕ ಗುರುನಾಥರಾಯರ ತರುವಾಯ ನಾನು ಅಲ್ಲಿ ಇಲ್ಲ

**ಪುಣೆಯಲ್ಲಿ ಮಧ್ವಸಿದ್ಧಾಂತ ಪ್ರಚಾರಿಣೀ ಸಭೆ.—** ರಂಗಾಚಾರ್ಯ ರಡ್ಡಿ ಇವರೂ ನಾವೂ ಕೂಡಿ, ಪುಣೆಯಲ್ಲಿ ೯-೫-೧೯೧೪ ನೆಯ ದಿವಸ ಒಂದು ಸಭೆ ಸ್ಥಾಪಿಸಿದೆವು. ಮರು ದಿವಸವೇ, ಮರಾಠಿಯಲ್ಲಿ ಮಧ್ವಸಿದ್ಧಾಂತದ ಮೇಲೆ ನನ್ನ ಉಪ

ನ್ಯಾಸವಾಯಿತು  ಮುಂದೆ ರಡ್ಡಿ ಆಚಾರ್ಯರು ಮಾಸಪತ್ರಿಕೆಯನ್ನು ತೆಗೆದರು  ಆದರೆ ಅದು ಮುಗ್ಗಿತು

**ದಾಸರ ಪದ ಕಮಿಟಿ:**—೧೯೧೪ರಲ್ಲಿ ಕೂಡಿದ ಒಂದು ಸಭೆಯಲ್ಲಿ ಮಾಳಾಪೂರ ರಾಮರಾಯರು ದಾಸರ ಪದಗಳ ಜೀರ್ಣೋದ್ಧಾರಕ್ಕಾಗಿ ಒಂದು ನೂರು ರೂಪಾಯಿ ಕೊಡುತ್ತೇವೆಂದು ವಚನಕೊಟ್ಟರು  ಅಲ್ಲಿ ೨೫-೪-೧೯೧೪ ನೆಯ ದಿವಸ ಒಂದು ಕಮಿಟಿ ಸ್ಥಾಪಿತವಾಯಿತು  ಅದಕ್ಕೆ ನಾನು ಕಾರ್ಯದರ್ಶಿ ಇದ್ದೆನೋ ಇಲ್ಲವೋ ನೆನಪಿಲ್ಲ  ಪತ್ರಿಕೆಗಳಲ್ಲಿ ಪ್ರಕಟನೆ ಹೊರಡಿಸಿದೆ. ಕಾಗಲಕರರೇ ಮುಂತಾದವರಿಂದ ಪದಸಂಗ್ರಹಗಳೂ ಬಂದವು. ಆದರೆ, ಆ ಕಾರ್ಯವನ್ನು ಮಾಡುವುದಕ್ಕೆ ಸಾಹಿತಿಗಳ, ಸಂಗೀತಜ್ಞರ ಹಾಗು ವೇದಾಂತಿಗಳ ನೆರವು ಬೇಕಾದ್ದರಿಂದ, ಹಣದ ಕೊರತೆಯುಂಟಾಗಿ ಆ ಕೆಲಸ ಅಲ್ಲಿಗೇ ಉಳಿಯಿತು  ಪದಸಂಗ್ರಹವನ್ನು ತಿರುಗಿ ಕೊಟ್ಟುಬಿಟ್ಟೆ

**ವಾರದ ವಿದ್ಯಾರ್ಥಿಗಳ ವ್ಯವಸ್ಥೆ.**—ಧಾರ್ಮಿಕ ಭಾವನೆ ಬೆಳೆಯುವುದಕ್ಕೆ ಬ್ರಾಹ್ಮಣರ ವಸತಿಗೃಹಗಳು ಬೇಕೆಂದು ತೋರಿತು  ೨೦-೧-೧೯೧೪ ನೆಯ ದಿವಸ, ಆ ಓಣಿಯಲ್ಲಿ ಪ್ರಯತ್ನ ಪಡುವುದಕ್ಕೆ ಸಭೆ ಕೂಡಿಸಿ ಸಾಹಸ ಪಟ್ಟೆ  ಸುಮಾರು ೫೦ ವಿದ್ಯಾರ್ಥಿಗಳು ವಾರ ಹಚ್ಚಿಕೊಂಡು ಉಪಜೀವಿಸುತ್ತಾರೆಂದು ತಿಳಿಯಿತು  ಆದಕ್ಕಾಗಿ ಫಂಡು ಕೂಡಿಸುವ ಪ್ರಯತ್ನವೂ ಆಯಿತು  ಆದರೆ ಆಗಿನ ದಿವಸಗಳಲ್ಲಿ ಪ್ಲೇಗಿನ ಹಾವಳಿ ಹೆಚ್ಚಿದ್ದುದರಿಂದ ಆ ಕೆಲಸವೂ ಅಲ್ಲಿಗೇ ಉಳಿಯಿತು

**ಟಿಳಕರೂ ಉತ್ತರಾದಿಮಠದ ಶ್ರೀಗಳವರೂ.**—೧೯೧೭ರಲ್ಲಿ ಚಿಕ್ಕೋಡಿಯಲ್ಲಿ ಟಿಳಕರಿಗೂ ಉತ್ತರಾದಿ ಮಠದ ಶ್ರೀಶ್ರೀ

ಗಳವರಿಗೂ ವೇದಾಂತಚರ್ಚೆಯಾಯಿತು. ಆ ಕಾಲಕ್ಕೆ ಚಿಕ್ಕೋಡಿಯಲ್ಲಿ ರಾಜಕೀಯ ಪರಿಷತ್ತು. ಶ್ರೀ ಟಿಳಕರು ನನ್ನನ್ನು ಶ್ರೀಶ್ರೀಗಳವರ ಕಡೆಗೆ ಕಳುಹಿ, ವಾದದ ವಿಷಯ ಮುಂತಾದವುಗಳನ್ನು ನಿರ್ಣಯಿಸಿಕೊಂಡು ಬರಲು ಹೇಳಿದರು. ನಾನು ಶ್ರೀಶ್ರೀಗಳವರ ದರ್ಶನ ತಕ್ಕೊಂಡೆ ಅವರನ್ನು ಕೇಳಿದೆ ಅವರು "ಮುತ್ತಾವ ವಿಷಯ? ದ್ವೈತಾದ್ವೈತ ವಿಷಯ" ಎಂದು ಅಂದರು. ಅದಕ್ಕೆ ಟಿಳಕರು ಗೀತಾರಹಸ್ಯದಲ್ಲಿ ತಾವು ಅದ್ವೈತದ ವಿಷಯವಾಗಿ ಸ್ವತಂತ್ರ ವಿಚಾರ ಮೆಚ್ಚಿಗೆ ಮಾಡಿರದೆ ಶಂಕರಾಚಾರ್ಯರ ಅಭಿಪ್ರಾಯವನ್ನು ಅವಲಂಬಿಸುತ್ತೇವೆಂದು ಹೇಳಿದ್ದರಿಂದ, ಆ ವಿಷಯವಾಗಿ ಟಿಳಕರೊಡನೆ ಚರ್ಚಿಸುವ ಕಾರಣವಿಲ್ಲವೆಂದೂ, ಗೀತಾರಹಸ್ಯದಲ್ಲಿ ಪ್ರತಿಪಾದಿಸಿದ ಮುಖ್ಯ ಸಿದ್ಧಾಂತವೆಂದರೆ ಜ್ಞಾನೋತ್ತರ ಕರ್ಮ, ಆ ವಿಷಯವಲ್ಲಿ ಮಧ್ವಾಚಾರ್ಯರ ಮತಕ್ಕೆ ಅದು ಅನುಕೂಲವಿರುವದರಿಂದ ಆ ವಿಷಯಕ ಚರ್ಚೆಯೂ ಕಾರಣವಿಲ್ಲವೆಂದೂ ನಾನು ಶ್ರೀ ಶ್ರೀಗಳವರಿಗೆ ಹೇಳಿದೆ. ಅವರು ಒಪ್ಪಿದರು. ಕೊನೆಗೆ ಗೀತೆಯಲ್ಲಿ ಟಿಳಕರು ಮಾಧ್ವಮತವನ್ನು ಸರಿಯಾಗಿ ಹೇಳಿಲ್ಲವೆಂಬ ವಿಷಯದ ಬಗ್ಗೆ ಚರ್ಚೆ ನಡೆಯಬೇಕೆಂದು ನಿಶ್ಚಿತವಾಯಿತು. ಜಯಪತ್ರ ಮುಂತಾದವುಗಳ ಗೊಂದಲವಿದೆಯೇ ಎಂದೂ ಕೇಳಿದೆ. ಶ್ರೀಶ್ರೀಗಳವರು ನಕ್ಕು "ಅದೇನೂ ಇಲ್ಲ. ಟಿಳಕರಂಥವರೊಡನೆ ವೇದಾಂತದ ಸಂಬಂಧವಾಗಿ ಮಾತಾಡುವುದಕ್ಕೆ ಇದೊಂದು ಸುಸಂಧಿ ಮಾತ್ರ" ಎಂದು ಅಂದರು. ಎರಡು ಗಂಟೆಗಳ ವರೆಗೆ ಚರ್ಚೆ ನಡೆಯಬೇಕೆಂದೂ ಕೂಡಲೆ ಚರ್ಚೆಯನ್ನು ನಿಲ್ಲಿಸಿ ಬಿಡಬೇಕೆಂದೂ ಶ್ರೀಶ್ರೀಗಳವರು ನಡುವೆ ಯಾರನ್ನೂ ಮಾತಾಡಗೊಡಿಸದೆ ತಾವೊಬ್ಬರೇ ಚರ್ಚೆ ನಡಿಸ

ಬೇಕೆಂದೂ ಗೊತ್ತಾಯಿತು. ಏಕೆಂದರೆ ಅತ್ತ ವೈಷ್ಣವವೃಂದದ ವಿದ್ವಾಂಸರ ಪಟಾಲಂಬ; ಇತ್ತ ರಾಜಕಾರಣಿಗಳ ಪಟಾಲಂಬ ರಾತ್ರಿ ಹನ್ನೆರಡರ ವರೆಗೆ ಟಿಳಕರು ನನ್ನನ್ನು ಕೂಡ್ರಿಸಿಕೊಂಡು ಕೆಲವು ಗೀತಾವಿಷಯಗಳನ್ನು ಸಿದ್ಧಪಡಿಸಿದರು. ಮರುದಿವಸ, ನನಗೆ ಪ್ರಾಸ್ತಾವಿಕ ಭಾಷಣೆ ಮಾಡಿ ಎಲ್ಲವನ್ನು ಸ್ಪಷ್ಟಪಡಿಸುವುದಕ್ಕೆ ಹೇಳಿದ ಪ್ರಕಾರ ನಾನು ಸ್ಪಷ್ಟಗೊಳಿಸಿದೆ. ಉಭಯತರ ನಡುವೆ ಚರ್ಚೆಯಾಯಿತು ಪರಸ್ಪರರ ವಿಷಯಕ್ಕೆ ಪರಸ್ಪರರ ಪೂಜ್ಯಬುದ್ಧಿ ಹೆಚ್ಚಿತು ಮಧ್ವಾಚಾರ್ಯರ ಅಭಿಪ್ರಾಯಗಳು ಟಿಳಕರಿಗೆ ಹೆಚ್ಚಿಗೆ ಸ್ಪಷ್ಟವಾದವು ಹೀಗೆ ಇಬ್ಬರು ಘನವಿದ್ವಾಂಸರ ಚರ್ಚೆ ಮನೋರಂಜಕವೂ ಬೋಧಪ್ರದವೂ ಆಯಿತು.

**ಬಿಟಗೇರಿ ಕೃಷ್ಣಶಾಸ್ತ್ರಿಗಳೂ ಶಂಕರಾಚಾರ್ಯರ ಪೀಠವೂ:**—ಕೃಷ್ಣಶಾಸ್ತ್ರಿಗಳು (ಸಾಯುವ ಮುಂಚೆ ಕೃಷ್ಣಾನಂದರಾದರು) ಸರಳವೃತ್ತಿಯ ಪಂಡಿತರು ಉತ್ತಮ ವಕ್ತಾರರು ಅವರ ನಿಷ್ಕಾಮವೃತ್ತಿಯ ಒಂದು ಉದಾಹರಣೆ ಇಲ್ಲಿ ಕೊಡುವೆ ನಾಸಿಕಕ್ಕೆ ನಾನು ರಾಜಕೀಯ ಪರಿಷತ್ತಿಗೆ ಹೋಗಿದ್ದೆ. ಟಿಳಕರು ನನ್ನನ್ನು ಏಕಾಂತದಲ್ಲಿ ಕರೆದು ಸಂಕೇಶ್ವರ ಪೀಠಕ್ಕೆ ಒಬ್ಬ ವಿಶಾಲ ಬುದ್ಧಿಯ ವಿದ್ವಾಂಸರನ್ನು ಕೂಡ್ರಿಸಬೇಕೆಂದು ತಮ್ಮ ಇಚ್ಛೆಯಿರುವುದೆಂದೂ ಅದಕ್ಕಾಗಿ ಕೃಷ್ಣಶಾಸ್ತ್ರಿಗಳನ್ನು ನಾನು ಮನವೊಲಿಸಬೇಕೆಂದೂ ಹೇಳಿದರು. ಅಂಥ ಮರ್ಯಾದೆಯ ಸ್ಥಳಕ್ಕೆ ಅವರು ಸಹಜವಾಗಿ ಒಪ್ಪಬಹುದೆಂದು ನಾನು ಹೇಳಿದೆ. ಕೃಷ್ಣಶಾಸ್ತ್ರಿಗಳಿಗೆ ಕೇಳಿದೆ. ಆದರೆ ಅವರು ನನಗೆ “ವೆಂಕಟರಾಯಾ, ನನಗೇಕೆ ಆ ಪೀಠದ ಗೊಂದಲ! ನನಗೆ ಆ ಪೀಠವೂ ಬೇಡ. ಆ ಮರ್ಯಾದೆಯೂ

ಬೇಡ ನಾನು ಹೀಗೆಯೇ ಸಾದಾ ಮನುಷ್ಯನಿದ್ದೇ ಸಾಯುವೆ" ಎಂದು ಅಂದರು. ಅವರ ಕುಟುಂಬ ತೀರಿಕೊಂಡು ಅನೇಕ ವರ್ಷಗಳಾಗಿದ್ದವು ಆದರೂ ಸಂನ್ಯಾಸಿಗಳಾಗಲಿಲ್ಲ ಅವರು ತೀರ ಸಾದಾ ವೃತ್ತಿಯನ್ನು ಇಟ್ಟುಕೊಂಡಿದ್ದರು ಅವರು ಸನ್ಯಾಸಿಗಳಾಗಿ ಆ ಪೀಠದ ಮರ್ಯಾದೆಯನ್ನು ಸ್ವೀಕರಿಸಲಿಕ್ಕೆ ಒಪ್ಪದಿದ್ದದ್ದು ಅವರ ವಿಷಯದಲ್ಲಿ ನನಗಿದ್ದ ಪೂಜ್ಯ ಬುದ್ಧಿ ಯನ್ನು ಹೆಚ್ಚಿಸಿತು

**ಅರವಿಂದರ ಗ್ರಂಥಗಳ ಅಭ್ಯಾಸವರ್ಗ.**—ನನಗೆ ಅರ ವಿಂದರ ಗ್ರಂಥಗಳಲ್ಲಿ ಶ್ರದ್ಧೆ ಅವರ 'ಆರ್ಯ' ಪತ್ರಿಕೆ ತಪ್ಪದೆ ತರಿಸುತ್ತಿದ್ದೆ ಓದುತ್ತಿದ್ದೆ ೧೯೨೦ ರಲ್ಲಿ ವಕೀಲಿ ಬಿಟ್ಟ ಕೂಡಲೆ ಆ ಗ್ರಂಥಗಳನ್ನು ಕಲಿಸುವುದಕ್ಕಾಗಿ ಒಂದು ವರ್ಗ ತೆಗೆದೆ ಮುಂದೆ ಸಾಧನಕೇರಿಯಲ್ಲಿ ಬೇಂದ್ರೆ, ಬುರ್ಲಿ, ಶಂ ಬಾ. ಜೋಶಿ, ಮುಧೋಳಕರ, ಸತ್ಯವಂತ ಮಳಿಬೆನ್ನೂರ ಮುಂತಾದ ಗೆಳೆ ಯರು ಕೂಡಿ, ವಾರದಲ್ಲಿ ಒಂದು ರಾತ್ರಿ ಅಧ್ಯಾತ್ಮದ ಅಭ್ಯಾಸ ನಡಿಸುತ್ತಿದ್ದೆವು. ಅದೇ ಮುಂದೆ ಜಯಕರ್ನಾಟಕಕ್ಕೂ ಗೆಳೆ ಯರ ಗುಂಪಿಗೂ ಜನ್ಮಕೊಟ್ಟಿತು.

**ಕರ್ಪೂರ ಶ್ರೀನಿವಾಸರಾಯರೂ ಮಧ್ವಾಚಾರ್ಯರ ಗ್ರಂಥಗಳ ಭಾಷಾಂತರವೂ**—೧೯೨೬ ನೆಯ ಇಸ್ವಿಯಲ್ಲಿ ಕರ್ಪೂರ ಶ್ರೀನಿವಾಸರಾಯರು ನಮ್ಮ ಮನೆಗೆ ಬಂದಾಗ, ಮಧ್ವಾಚಾರ್ಯರ ಯಾವತ್ತು ಮೂಲಗ್ರಂಥಗಳನ್ನು ಕನ್ನಡಿ ಸಿಸಿ ಮುದ್ರಿಸಬೇಕೆಂಬ ನನ್ನ ವಿಚಾರವನ್ನು ಅವರ ಮುಂದೆ ಇಟ್ಟೆ ನಾವೂ ಅವರೂ ಒಂದು ಸ್ಕೀಮು ತಯಾರು ಮಾಡಿ ದೆವು. ಮುಂದೆ ಉಡುಪಿಯಲ್ಲಿ ಅನೇಕ ಮಧ್ವಮತಾಭಿಮಾನಿ ಗಳ ಸಹಾಯದಿಂದ ಅದಕ್ಕೆ ಒಂದು ರೂಪ ಸಿಕ್ಕಿತು ನಾನೂ

ಆದಕ್ಕೆ ಮೆಂಬರನಾಗಿ ಆ ಗ್ರಂಥ ಕೊಂಡುಕೊಂಡೆ. ಆ ಮಧ್ವ ಮುನಿ ಸೇವಾಸಂಘದ ಕೌನ್ಸಿಲಿನ ಮೆಂಬರನೂ ಆಗಿದ್ದೆ. ಅಲ್ಲಿಯವರ ಶ್ರಮದಿಂದ ಆ ಕಾರ್ಯವು ಒಂದು ಮಟ್ಟಕ್ಕೆ ಮುಟ್ಟಿದೆ.

**ನನ್ನ ಮುದ್ರಾಧಾರಣದ ವಿಷಯಕ್ಕೆ ಗೊಂದಲ** -೧೯೨೭ರಲ್ಲಿ ಶ್ರೀಶ್ರೀಗಳವರ ಸ್ವಾರಿ ಇಲ್ಲಿಗೆ ಬಂದಿತ್ತು ಆ ಕಾಲಕ್ಕೆ ಸಮುದ್ರಯಾನ ಮಾಡಿ ಬಂದವರಿಗೆ ಪ್ರಾಯಶ್ಚಿತ್ತ ಕೊಟ್ಟು ತೆಗೆದುಕೊಳ್ಳಲಿಕ್ಕೆ ಶಾಸ್ತ್ರದಲ್ಲಿ ಆಧಾರವಿದೆಯೆಂಬ ಬಗ್ಗೆ ಮಹಾದೇವ ದೀಕ್ಷಿತ ಸೋಮಯಾಜಿಯವರ ಲೇಖ ಮುದ್ರಿಸಿ, ಶ್ರೀಶ್ರೀಗಳವರ ಕೈಯಲ್ಲಿ ಕೊಟ್ಟೆ. ಮುಂದೆ ಕೆಲವು ದಿನಗಳಲ್ಲಿ, ಈ ಊರಲ್ಲಿ ನನ್ನ ಮಿತ್ರರಾದ ಸಿಡೇನೂರ ಗುರುರಾಯರಲ್ಲಿ ಮುಂಜಿಯಾಯಿತು. ನಾನು ಊಟಕ್ಕೆ ಹೋಗಿದ್ದೆ ಇನ್ನೂರು ಜನ ವೈದಿಕ ಬ್ರಾಹ್ಮಣರ ಪಂಗ್ತಿಯಲ್ಲಿ ನನ್ನ ಎಲೆ ಊಟ ಮಾಡಿದೆ. ನಾಲ್ಕಾರು ಮನೆಗಳಲ್ಲಿ ಎಲೆ ಹಾಕಿದ್ದವು ಮತ್ತೊಂದು ಮನೆಯಲ್ಲಿ ಒಬ್ಬರು ಸಮುದ್ರಯಾನ ಮಾಡಿಬಂದವರು ಕೂತಿದ್ದರು ಮುಂದೆ ಕೆಲವು ದಿನಗಳಲ್ಲಿ, ವೆಂಕಟರಾಯರು ಸಮುದ್ರಯಾನ ಮಾಡಿದವರೊಡನೆ ಊಟ ಮಾಡಿದ್ದ ಕಾರಣ, ಅವರು ಪ್ರಾಯಶ್ಚಿತ್ತ ತಕ್ಕೊಳ್ಳಲೇಬೇಕೆಂದು ಹೂಲಿ ಹುಟ್ಟಿತು. ನಾನು ಆ ಸುಮಾರಕ್ಕೆ ಆಲೂರಿಗೆ ಹೋಗಿದ್ದೆ ಅಲ್ಲಿಂದ ಶ್ರೀಶ್ರೀಗಳವರಿಗೆ ನಿಜ ಸಂಗತಿ ತಿಳಿಸಿದೆ. ನಾನೇನೂ ಧರ್ಮಲಂಡನಲ್ಲ; ತಮ್ಮ ಆಕ್ಷೇಪವಿದ್ದರೆ ತಿಳಿಸಿರಿ ಎಂದು ಹೇಳಿದೆ. ಅವರೇನೂ ನನ್ನ ಮೇಲೆ ಆರೋಪ ಇಡಲಿಲ್ಲ. ತಿರುಗಿ ಬಂದು ನೋಡುತ್ತೇನೆ, ನಡುವಿನವರು ನನ್ನ ವಿರುದ್ಧ ಚಳವಳಿಯೆಬ್ಬಿಸಿದ್ದರು. ನಾನು ಒಂದೇ ಉತ್ತರ ಕೊಟ್ಟೆ. "ನನ್ನೊಡನೆ ಇನ್ನೂರು ವೈದಿಕರು ಕುಳಿತಿದ್ದಾರೆ. ಶಾಸ್ತ್ರಾಧಾರ ತೋರಿಸಿದರೆ, ನಾವೆಲ್ಲರೂ

ಪ್ರಾಯಶ್ಚಿತ್ತ ತಕ್ಕೊಳ್ಳೋಣ’’ಎಂದು ಹೇಳಿದೆ ಅಪರಾಧವಾಗ ದಿದ್ದರೆ ಪ್ರಾಯಶ್ಚಿತ್ತರೂಪವಾಗಿ ನಾನು “ನಾರಾಯಣ” ವೆಂದು ಕೂಡ ಅನ್ನಲಿಕ್ಕೆ ಸಿದ್ಧನಿಲ್ಲವೆಂದು ಹೇಳಿದೆ. ಮುಂದೆ ಕೆಲವು ವರ್ಷಗಳಲ್ಲಿ ಆ ಹೂಲಿಯು ಅಲ್ಲಿಯೇ ಅಡಗಿಹೋಯಿತು.

**ಪಂಡಿತ ಮದನಮೋಹನ ಮಾಲವೀಯರಿಗೆ ಬರೆದ ಪತ್ರ** --೨೫-೧-೧೯೩೩ನೆಯ ದಿವಸ ಮಾಲವೀಯರು ಸನಾತನ ಧರ್ಮದ ಮಹಾಸಮ್ಮೇಲನವನ್ನು ಕರೆದಿದ್ದರು. ಆ ಕಾಲಕ್ಕೆ ನಾನು ಕಲಘಟಗಿ ಹಳ್ಳಿಯಲ್ಲಿ ನಿರ್ಬಂಧದಲ್ಲಿ ಇದ್ದೆ. ಅವರಿಗೆ ೨೨-೧-೧೯೩೩ ನೆಯ ದಿವಸ ಒಂದು ಪತ್ರ ಬರೆದೆ. ಅದರಲ್ಲಿಯ ಭಾಗ ಹೀಗೆ ಇದೆ.

“It seems to me that the question of temple entry and the removal of untouchability are too minor issues, as compared with the questions of the spiritual and religious ideals, which India should keep before itself, and the question of the structure of the Hindu Society which is best suited to carry out those ideals in practice Your faith and zeal for Sanatan Dharma are unquestionable, but not so, those of Mahatma Gandhi, who sometimes seems to be wonderfully ignorant of some of the basic principles of Sanatan Dharma. His utterances and writings are clear, but not complete; are simple, but not accurate. So, many times he becomes vague and ambiguous to others. I am yet to know what his views exactly are with regard to some of the vital questions of Sanatan Dharma,

such as Varnashram, Marriage, Acharas, Samskaras etc. Such expressions as 'sin' 'blot' 'curse' excretion do not befit the mouth of a Mahatma. There are three schools of thought or rather of opinion prevalent now (1) that based upon fundamental right, (2) that based on the letter of the Shastras, (3) that based on the spirit of the Shastras. Each is partially true and each is not wholly opposed to the other two If one has a right to touch the world, I have the right to ask the world not to touch me There is a true and useful principle underlying the idea of untouchability. So there is a true and useful principle underlying the idea of touchability. Each is true in its place .Changed times do require new adjustments There is a hope of compromise between all these schools, if they properly understand each other, and do not monopolise sense to themselves "

**ಅನ್ಯಮತಗಳ ನನ್ನ ಅಭ್ಯಾಸ ಮತ್ತು ಪರಮತ ಸಹಿಷ್ಣುತೆ** — ನನಗೆ ಮಾಧ್ವಮತದಲ್ಲಿ ಶ್ರದ್ಧೆ. ಆದರೆ ತುಲನಾತ್ಮಕವಾಗಿ ಅಭ್ಯಾಸ ಮಾಡಲಿಕ್ಕೆ ನನ್ನ ಹವಣಿಕೆ. ಏಕೆಂದರೆ, ಮಧ್ವಮತದಲ್ಲಿಯು ಎಷ್ಟೋ ತೊಡಕುಗಳು ತಿಳಿದಿಲ್ಲ. ನಾನು ಏಕಾಂತ ಜೀವನವನ್ನು ಕೈಕೊಂಡ ಬಳಿಕ, ಆಚಾರ್ಯರುಗಳಲ್ಲಿ ಮೊದಲು ನಾನು ತಿಳಕೊಂಡಷ್ಟು ಭೇದಗಳಿಲ್ಲವೆಂಬ ಸಿದ್ಧಾಂತಕ್ಕೆ ಬಂದಿರುವೆ. ತಮ್ಮ ಮೂಲ ಶ್ರದ್ಧೆ ಬಿಡದೆ, ಎಲ್ಲರೂ ಬಹಳ ದೂರದವರೆಗೆ ಅಂದರೆ ಅಪರೋಕ್ಷ ಜ್ಞಾನವಾಗುವವರೆಗೆ ಒಂದೇ ದಾರಿಯಿಂದ ಸಾಗಬಹುದೆಂ

ಬುದೇ ನಾನು ಕಂಡುಹಿಡಿದ ಸ್ವತಂತ್ರ ಸಿದ್ಧಾಂತ. ಇದಕ್ಕಾಗಿ ಲಿಂಗಾಯತ ಮತ್ತು ಜೈನ ಧರ್ಮಗಳನ್ನೂ ಅಭ್ಯಾಸ ಮಾಡಿರುವೆ, ಮಾಡುತ್ತಿರುವೆ. ಅವೂ ನನ್ನ ಸಿದ್ಧಾಂತಕ್ಕೆ ಪುಷ್ಟಿಕೊಡುತ್ತವೆ. ನನ್ನ ಗೀತಾಕುಸುಮಮಂಜರಿ ಗ್ರಂಥ ಮಾಲೆಯ ಈಗ ಹೊರಟಿರುವ ಗ್ರಂಥಗಳಲ್ಲಿ ಅಲ್ಪಮಟ್ಟಿಗೆ ನನ್ನ ಸಿದ್ಧಾಂತವನ್ನು ಇಟ್ಟಿರುವೆ ಇನ್ನೂ ಅವನ್ನು ಬಹಳ ವಿಸ್ತಾರ ಗೊಳಿಸಬೇಕಾಗಿದೆ ಮುಂದಿನದು ದೇವರ ಕೈಯಲ್ಲಿ ಆಚಾರ ದಲ್ಲಿ ಐಕಮತ್ಯ ಮಾಡುವುದಕ್ಕೆ ಬಹಳ ದೊಡ್ಡ ಅಧಿಕಾರಬೇಕು. ಅದರಲ್ಲಿ ಕೈಹಾಕಲು ಇಚ್ಛಿಸುವುದಿಲ್ಲ. ವಿಚಾರದಲ್ಲಿ ಇವೆಲ್ಲವು ಗಳಲ್ಲಿ ಬಹಳಮಟ್ಟಿಗೆ ಸಮನ್ವಯವಾಗಬಹುದೆಂದು ನನಗೆ ತೋರುತ್ತದೆ. ಪರಮತ ಸಹಿಷ್ಣುತೆ ಹುಟ್ಟುವುದಕ್ಕಾದರೂ ಇದರಿಂದ ಸಹಾಯವಾಗಬಹುದಲ್ಲವೆ? ನಾನು ಪಂಡಿತ ತಾರಾ ನಾಥರಂಥ ಮತಭೇದವುಳ್ಳವರೊಡನೆ ಸಹಿಷ್ಣುತಾ ಬುದ್ಧಿ ಯಿಂದ ನಡೆಯುವುದಕ್ಕೂ ಇದೇ ಕಾರಣ ಅವರಿಗೆ ನಾನು ೩.೬-೧೯೩೨ ರಲ್ಲಿ ಬರೆದ ಪತ್ರದಲ್ಲಿ ಹೀಗೆ ಇದೆ

"I stand for unity amongst diversity and not for dead uniformity. The more the conviction, the more the toleration. To tolerate opposite views or different views is real toleration."

ನನ್ನ ಧಾರ್ಮಿಕ ಚಟುವಟಿಕೆಗಳ ಮಾದರಿಗಾಗಿ ಇಷ್ಟು ಸಾಕು.

**ನನ್ನ ಏಕಾಂತ ಜೀವನ :—** ಹತ್ತು ಹನ್ನೊಂದು ವರ್ಷಗಳ ಕೆಳಗೆ ಇದನ್ನು ಬುದ್ಧಿಪೂರ್ವಕವಾಗಿ ಕೈಕೊಂಡಿರುವೆ.

ಇನ್ನೂ ನಡಿಸುತ್ತಿರುವೆ. ಕೂರ್ಮೋಽಂಗಾನೀವ ಸರ್ವಶಃ ಎಂಬದುನ್ನನುಸರಿಸಿ ಪ್ರತಿಯೊಬ್ಬನೂ ತನ್ನ ಜೀವನದಲ್ಲಿ ವಾನಪ್ರಸ್ಥಾಶ್ರಮ ಕೈಕೊಳ್ಳಬೇಕೆಂದು ನನ್ನ ಮತ ಸಂಸಾರದ ತೀಕ್ಷ್ಣವಾದ ಮುಶಿಯಲ್ಲಿ ಹಾಯ್ದು ಬರುವುದರಿಂದ, ಈ ಜೀವನಕ್ಕೆ ಹೆಚ್ಚು ತೇಜವುಂಟಾಗುತ್ತದೆ. ಕಾಣಲಿಕ್ಕೆ ಇದು ಮೌನಜೀವನವಾದರೂ ಹೆಚ್ಚು ಶಕ್ತಿಯುಳ್ಳದ್ದು, ಶಾಂತಿಯುಳ್ಳದ್ದು, ಆನಂದವುಳ್ಳದ್ದು ಈ ಜೀವನವು ಬರಿದಾದ ಜೀವನವಲ್ಲ, ತುಂಬಿದ ಜೀವನ ಸತತವಾದ ಅಭ್ಯಾಸ ಮತ್ತು ಧ್ಯಾನ ಮುಂತಾದವುಗಳಿಂದ ಮನುಷ್ಯನಲ್ಲಿ ಹೆಚ್ಚು ಆಧ್ಯಾತ್ಮಿಕ ಶಕ್ತಿ ತುಂಬುತ್ತದೆ ಇದರ ಸ್ಮೃತಿಗಳನ್ನು ಕೊಡುವುದಕ್ಕೆ ಇದು ಯೋಗ್ಯ ಸ್ಥಳವೂ ಅಲ್ಲ, ಕಾಲವೂ ಅಲ್ಲ.



# ನನ್ನ ಜೀವನಸ್ಮೃತಿಗಳ ಫಲಿತಾಂಶ

## ೮ನೆಯ ಪ್ರಕರಣ

**ಪ್ರಸ್ತಾವನೆ**—ಇಲ್ಲಿಯವರೆಗೆ, ನಾನು ನನ್ನ ಸಾರ್ವಜನಿಕ ಜೀವನದ ತಿರುಳು ತಿಳಿಯುವವುಟ್ಟಿಗೆ ಸ್ಮೃತಿಗಳನ್ನು ಕೊಟ್ಟ ದ್ದಾಯಿತು ಇತ್ತೀಚಿನ ೧೦-೧೫ ವರುಷಗಳ ಕೆಲವು ಸ್ಮೃತಿ ಗಳನ್ನು ಕೊಟ್ಟು ಅವಕ್ಕೆ ಎಳೆಯನ್ನು ಜೋಡಿಸಿದ್ದೂ ಆಯಿತು. ಈ ಕೊನೆಯ ಪ್ರಕರಣದಲ್ಲಿ, ಅವುಗಳ ಫಲಿತಾಂಶವನ್ನು ಕೊಟ್ಟು, ಈ ಆತ್ಮಪುರಾಣ ಮುಗಿಸಿಬಿಡುವೆ

**ನನ್ನ ಖಾಸಗೀ ಜೀವನ**—ಆ ಫಲಿತಾಂಶಕ್ಕೆ ಹಿನ್ನೆಲೆ ಯೆಂದು ನನ್ನ ಖಾಸಗೀ ಜೀವನದ ಕೆಲವು ಅಂಶಗಳನ್ನು ಹೇಳುವೆ ನಾನು ಮಧ್ಯಮ ತರಗತಿಯ ಮನೆತನದಲ್ಲಿ ಹುಟ್ಟಿ ದವ, ಮಧ್ಯಮ ಬುದ್ಧಿವಂತ, ಮಧ್ಯಮ ಶಕ್ತಿವಂತ. ಸುದೈವ ದಿಂದ, ಸಚ್ಛೀಲ ತಾಯಿತಂದೆಗಳ ಲಾಭಪಡೆದವ. ೧೫-೧೬ ಜನರ ಕುಟುಂಬ ನಮ್ಮದು; ಮನೆಯಲ್ಲಿ ಏಳು ದಿವಸ ಏಳು ವಾರದ ಹುಡುಗರು; ೨-೩ ಆಪ್ತಮಿತ್ರರ ಮಕ್ಕಳು ಸತತ ಕಲಿಯುವವರು, ಅಲ್ಲದೆ ೨-೩ ಆಶ್ರಿತರು ನಮ್ಮ ತಂದೆ ಉಡಿಗೆ ತೊಡಿಗೆಗಳಲ್ಲಿ ಹಿಡಿತದವರು ಆದರೆ, ಅನ್ನಕ್ಕೆ ಮಾತ್ರ ಮುಕ್ತದ್ವಾರ. ೧೫-೨೦ ಜನರ ಕುಟುಂಬದಲ್ಲಿ ೪-೬ ಜನರು ಹೆಚ್ಚಿಗೆ ಬಂದರೆ, ಸಹಜವಾಗಿ ಒಳಕೊಂಡು ಹೋಗುತ್ತದೆ; ಬಹಳಾದರೆ ವರ್ಷಕ್ಕೆ ೧೦೦-೨೦೦ ರೂಪಾಯಿ ಹೆಚ್ಚಿಗೆ ಖರ್ಚು ಮಾಡಿದರೆ ಸಾಕು-ಎಂದು ಅವರು ಅನ್ನುತ್ತಿದ್ದರು. ಉದ್ರಿ

ಯೆಂದರೆ ಅವರಿಗೆ ತಲೆಶೂಲಿ. ಹಾಲುಮೊಸರಿನವರು ಬಂದಾಗ, ತಮ್ಮ ಸೊಸೆಂದಿರು "ನಾಳೆ ಬಾ" ಎಂದು ಹೇಳಿದ್ದು ಅವರ ಕಿವಿಗೆ ಬಿದ್ದರೆ, ಅವರ ಹುಬ್ಬುಗಳು ಗಂಟಿಕ್ಕಿದವೇ ಸುದೈವ ದಿಂದ ಅವರಿಗೆ ಸಾಲಮಾಡುವ ಪ್ರಸಂಗವೇ ಬರಲಿಲ್ಲ. ನನಗೂ ಸಾಲವೆಂದರೆ ತಲೆಸೂಲಿ. ಆದರೆ ಮಾಡುವದೇನು? ವಕೀಲಿ ಬಿಡುವಾಗ ವರ್ಷಕ್ಕೆ ನನ್ನ ಪಾಲಿಗೆ ಸಾವಿರಾರು ರೂಪಾಯಿ ಹೊಲದ ಉತ್ಪನ್ನ ಅವಿಭಕ್ತಕುಟುಂಬದ ಸಾಲ ನ್ನೈಮೇಲೆ ಬಂತು ದೇಶದ ಆರ್ಥಿಕ ಮುಗ್ಗಟ್ಟಿನ ಮೂಲಕ ಹೊಲದ ಉತ್ಪನ್ನ ಝರ್‍ರನೆ ಇಳಿಯಿತು ಆದರೂ ಕಟಾಸುಕಟಿಯಿಂದ ಸಂಸಾರ ಸಾಗಿಸಿ ಅಲ್ಪಸ್ವಲ್ಪೇ ಆಸ್ತಿಮಾರಿ, ಸಾಲ ಹತ್ತಿಗೆ ತಂದು ಈಗ ಪರಂಜಳನಾಗಿರುವೆ. ನನ್ನ ಸ್ವರಾಜ್ಯದ ವ್ಯಾಖ್ಯೆ ಯೆಂದರೆ "**ಪರರಿಗೆ ಬೇಡದಂತೆ ಮಾಡು**' ಎಂಬುದು. ಉಪವಾಸಬಿದ್ದರೂ ಚಿಂತೆಯಿಲ್ಲ, ಒಬ್ಬರ ಹಂಗಿನಲ್ಲಿರಬಾರದು ಪರರಿಗೆ ಉಪಕಾರಮಾಡಲು ದೇವರು ಶಕ್ತಿಕೊಟ್ಟರೆ ಮಾಡ ಬೇಕು; ಆದರೆ ಉಪಕಾರಮಾಡಲಿ ಬಿಡಲಿ, ಅನ್ಯರ ಉಪ ಕಾರ ಆದಷ್ಟುಮಟ್ಟಿಗೆ ಇಟ್ಟುಕೊಳ್ಳಬಾರದು ಕೆಲವರಿಗೆ ಪೈಪೈಲೆಕ್ಕ ಇಡುವುದೊಂದು ಚಟವೇ ಇರುತ್ತದೆ ಇಷ್ಟು ಸೂಕ್ಷ್ಮ ಲೆಕ್ಕ ಇಡುವದರಿಂದ ಅನೇಕರ ಮನಸ್ಸು ಕ್ಷುದ್ರವಾದ ದ್ದನ್ನು ನಾನು ನೋಡಿರುವೆ ಅವಿಭಕ್ತ ಕುಟುಂಬದ ಸಾಲ ನ್ನೈಮೇಲೆ ಬಂದಾಗ, ಮನೆತನದ ಅಭಿಮಾನ ಅಡ್ಡಬಂದು, ಹಿರಿಯರ ಆಸ್ತಿ ಮಾರುವುದು ಹೇಗೆ, ಎಂದೆನಿಸಿತು. ಎಂಟು ದಿವಸ ವಿಚಾರಮಾಡಿ, ಸಾರ್ವಜನಿಕ ಸೇವೆಗೆ ನಿಂತವನಿಗೆ ಮನೆತನದ ಈ ಒಣ ಅಭಿಮಾನ ತಕ್ಕುದಲ್ಲವೆಂದು ನಿಶ್ಚಯಿಸಿ, ಆಗಲೇ ಮಾರುವ ಪ್ರಸಂಗ ಇಲ್ಲದಿದ್ದರೂ ನನ್ನ ಅಹಂಕಾರ

ಖಂಡನಮಾಡಿಕೊಳ್ಳುವುದಕ್ಕಾಗಿ, ಕರ್ಮವೀರದಲ್ಲಿ (ಆಗ ನಾನು ಅವರ ಸಂಪಾದಕನಿದ್ದೆ) "ನನಗೆ ಹೀಗೆ ಸಾಲವಿದೆ, ಆಸ್ತಿಮಾರುವೆ, ಕೊಳ್ಳುವವರು ಕೊಳ್ಳಿರಿ" ಎಂದು ಜಾಹೀರಾತು ಕೊಟ್ಟುಬಿಟ್ಟೆ. ಆಗ ನನ್ನ ಮನಸ್ಸಿಗೆ ಸಮಾಧಾನವಾಯಿತು!

**ಆಪ್ತೇಷ್ಟರ ಮತ್ತು ಜಗತ್ತಿನ ಪರೀಕ್ಷೆ.** ಮೇಲೆ ಹೇಳಿದಂತೆ, ಸಾಮಾನ್ಯತಃ ಸುಸ್ಥಿತಿಯಿದ್ದರೂ, ನನ್ನ ಪರೀಕ್ಷೆಯ ಕಾಲ ಬಾರದೆ ಹೋಗಲಿಲ್ಲವೆಂಬುದು ನನ್ನ ಸ್ಮೃತಿಗಳಲ್ಲಿ ಅಲ್ಲಲ್ಲಿ ಬಂದೇ ಇರುವದು. ಆ ಬಗ್ಗೆ ಬೇರೆ ಹೇಳುವ ಕಾರಣವಿಲ್ಲ. ಆದರೆ, **ಸಾರ್ವಜನಿಕ ಜೀವನವು ನಮ್ಮನ್ನು ಪರೀಕ್ಷಿಸುವಂತೆ, ಆಪ್ತ-ಮಿತ್ರರನ್ನೂ ಜಗತ್ತನ್ನೂ ಕೂಡ ಪರೀಕ್ಷಿಸುತ್ತದೆ.** ನಾನು ಸ್ವಾರ್ಥತ್ಯಾಗಮಾಡಿದ ಕಾಲದಲ್ಲಿ, ಇಂಥ ಜೀವನದ ಮಹತ್ವವು ಜನರಿಗೆ ಸಾಕಷ್ಟು ತಿಳಿದೇ ಇರಲಿಲ್ಲ. ಆದಕಾರಣ, ಜನರಿಂದ ಯಾವ ಬಗೆಯ ಸಹಾಯವನ್ನೂ ಅಪೇಕ್ಷಿಸಲೇ ಇಲ್ಲ. ನನ್ನ ಸಾಂಪತ್ತಿಕಸ್ಥಿತಿ ಚೆನ್ನಾಗಿ ಇದ್ದಕಾರಣ, ಮಿತ್ರರಿಂದಲೂ ಸಹಾಯ ಅಪೇಕ್ಷಿಸಲಿಲ್ಲ. ಸ್ವಾರ್ಥತ್ಯಾಗಿಗಳಾದ ಜೀವಿಗಳ ಅನುಭವ ವಿಲಕ್ಷಣ! ನಮ್ಮಂಥ ಸಾರ್ವಜನಿಕ ಜೀವಿಗಳು ಸಹಜ ಮಾತಾಡಲಿಕ್ಕೆ ಹೋದರೂ ಅವರು ಎಲ್ಲಿ ಬೇಡಲಿಕ್ಕೆ ಬಂದಿರುವರೋ ಎಂಬ ಹೆದರಿಕೆಯಿಂದ, ನಮಗಿಂತ ಮುಂಚೆ, ತಮ್ಮ ಅಡಚಣಿಗಳ ಪುರಾಣವನ್ನು ಬಿಚ್ಚುಹತ್ತುವವರನ್ನು ನೋಡಿ ನಮ್ಮಂಥವರಿಗೆ ನಗೆ ಬರುತ್ತದೆ! ನೂರಾರು ರೂಪಾಯಿ ಕೊಡುವ ಯೋಗ್ಯತೆಯುಳ್ಳವರು, ಒಂದೆರಡು ರೂಪಾಯಿ ಎಸೆದೋ, ಒಂದೆರಡು ಪುಸ್ತಕಗಳನ್ನು ಕೊಂಡೋ, ಕಾಟ ತಪ್ಪಿಸಿಕೊಳ್ಳುವುದಕ್ಕೆ

ಪ್ರಯತ್ನಿಸುವವರನ್ನು ಕಂಡು ಅನುಕಂಪ ಹುಟ್ಟುತ್ತದೆ! ಕೆಲವರಂತೂ, ಕೇಳುವ ಮುಂಚೆಯೇ ಅವರ ಮೇಲೋ ಅವರು ಕೈಕೊಂಡ ಕಾರ್ಯಗಳ ಮೇಲೋ ಹರಿಹಾಯ್ದು, ಅವರು ಬಾಯಿಯನ್ನೇ ಎತ್ತದಂತೆ ಮಾಡಿಬಿಡುತ್ತಾರೆ! ಈ ತರಹದ ವೃತ್ತಿಗಳೇ ಅವರ ಢಾಲುಗಳು. ಇಂಥ ಅನೇಕ ಉದಾಹರಣೆಗಳನ್ನು ಸಾರ್ವಜನಿಕ ಜೀವಿಗಳು ತಮ್ಮ ಆಯುಷ್ಯದಲ್ಲಿ ಕಂಡೇಕಾಣುತ್ತಾರೆ ನನಗೆ ಮಾತ್ರ ಅಂಥ ಪ್ರಸಂಗಗಳು ವಿಶೇಷ ಬರಲಿಲ್ಲ ನಾನು ಇಟ್ಟುಕೊಂಡ ಕೆಲವು ವಿಶೇಷ ತತ್ವಗಳೂ ನನ್ನ ಸ್ವಾಭಿಮಾನಸ್ವಭಾವವೂ ನನ್ನ ಗಂಭೀರವೃತ್ತಿಯೂ ಅದಕ್ಕೆ ಕಾರಣಗಳು ಆದರೂ ನನಗೂ ಅಲ್ಪಸ್ವಲ್ಪ ಅನುಭವ ಬಾರದೆ ಹೋಗಲಿಲ್ಲ ತೀರ ಬಡವನಲ್ಲದಿದ್ದರೂ ಬಡತನ ಅನುಭವಿಸಿದೆ, ಸಾಲ ತೆಗೆಯಬಾರದೆಂದು ಪಣತೊಟ್ಟಿದ್ದರೂ ಸಾಲ ತೆಗೆದಿದ್ದೆ ಹೊತ್ತಿಗೆ ಕಾಸು ಕೊಡದ ಆಪ್ತರನ್ನೂ ಕಂಡೆ ಶ್ರೀಮಂತಿಕೆಯ ಮತ್ತು ಸುದೈವದ ಮಬ್ಬು ತಲೆಗೇರಿದ ಮಿತ್ರರನ್ನೂ ಕಂಡೆ ಅವರಾರಿಗೂ ವಿಶೇಷ ಬಾಯಿ ತೆರೆಯಲಿಲ್ಲವಾದ್ದರಿಂದಲೇ ವಿಷಾದವೆನಿಸಲಿಲ್ಲ ಅಲ್ಲದೆ, ನಮ್ಮ ತಂದೆಯವರ ಒಂದು ಉಪದೇಶವು ನನ್ನನ್ನು ಎಚ್ಚರಗೊಳಿಸುತ್ತಿತ್ತು ಅದೇನೆಂದರೆ, **ಜಗತ್ತು ಹೇಗೇ ಇರಲಿ, ನಾವು ನಮ್ಮ ಹಾದೀ ಹಿಡಿಯಬೇಕು. ಜಗತ್ತಿನ ಬಗ್ಗೆ ಜಿಗುಪ್ಸೆ ಅಥವಾ ತಿರಸ್ಕಾರ ಬುದ್ಧಿ ತಾಳಮಾಡಬಾರದು** — ಎಂಬುದು. ಅವರ ಉಪದೇಶದಂತೆ ನಡೆಯಲು ಪ್ರಯತ್ನಿಸುತ್ತಿರುವೆ ಆದರೆ, ಅಷ್ಟು ಶಾಂತವೃತ್ತಿ ನನ್ನಲ್ಲಿ ಇನ್ನೂ ಬಂದಿಲ್ಲ. ನಾನು ವ್ಹಿಕ್ಟೋರಿಯಾ ಹಾಯಸ್ಕೂಲಿನಲ್ಲಿಯೋ ಇತಿಹಾಸ ಮಂಡಲ

ದಲ್ಲಿಯೋ ಆಜೀವ ಕಾರ್ಯಕರ್ತನಾಗಿದ್ದರೆ ನನ್ನಿಂದ ಈಗ ಮಾಡಿದಷ್ಟು ಕಾರ್ಯವಾಗುತ್ತಲೇ ಇರಲಿಲ್ಲ ಆದರೆ ಈಗ, ನಾನು ಸಾಹಿತಿಗಳಿಗೂ ದೂರನು ಸಂಶೋಧಕರಿಗೂ ದೂರನು. ಆದಕಾರಣ, ನನಗೆ ಅವರೇಕೆ ಸಹಾಯ ಮಾಡ ಬೇಕು? ಸಮಗ್ರದೃಷ್ಟಿಯ ಬೆಲೆ ತಿಳಿದವರು ಕಡಿಮೆ ಜನರು

**ಉಪಕಾರಸ್ಮರಣ** — ಈ ಪ್ರಸಂಗದಲ್ಲಿ, ಉಪಕಾರ ಮಾಡದಿದ್ದ ಮಿತ್ರರನ್ನು ನೆನಿಸಿ ವಿಷಾದಪಡುವುದಕ್ಕಿಂತಲೂ, ಉಪಕಾರ ಮಾಡಿದವರನ್ನು ನೆನಿಸಿ ಆನಂದ ಪಡುವುದೇ ಒಳಿತಲ್ಲವೆ? ಘಾಟಕ ಗುರುನಾಥರಾಯರು ನನಗೆ ಒಮ್ಮೆ ೫೦೦ ರೂಪಾಯಿಗಳನ್ನು ಕೊಟ್ಟ ವಿಷಯವನ್ನು ಉಲ್ಲೇಖಿಸಿಯೇ ಇರುವೆ (ಭಾ ೨, ಪು ೫೯) ನನಗೆ ಸ್ವಲ್ಪ ಅಡಚಣಿ ಆದೆಂಬುದು ಕಿವಿಗೆ ಬಿದ್ದಕೂಡಲೆ, ತನ್ನ ಶಕ್ತಿಮೀರಿ ಮೂರು ನೂರು ರೂಪಾಯಿ ಕಳಿಸಿಕೊಟ್ಟು ನೆರವಾದ ಮನಸೂರ ರಂಗನನ್ನು ಮರೆಯುವದೆಂತು? ನನ್ನ ಸಾರ್ವಜನಿಕ ಕಾರ್ಯಕ್ಕಾಗಿ ಒಬ್ಬೊಬ್ಬರೂ ನೂರಾರು ರೂಪಾಯಿ ಸಲ್ಲಿಸಿದ ಮಂಗಸೂಳಿ ರಾಮರಾಯರನ್ನೂ ಮಹಿಷಿ ಅಶ್ವತ್ಥರಾಯರನ್ನೂ ಸ್ಮರಿಸದೆ ಇರುವುದಾದೀತೆ? ಮುವನೇಡಿಕರ ವೆಂಕಟರಾಯರು ನೂರಾರು ರೂಪಾಯಿ ಕೊಟ್ಟದ್ದು ಆಶ್ಚರ್ಯವಲ್ಲ ಬೇವೂರ ಗುರುರಾಯರು, ಲೋ ಕೂ ರ ನಾರಾಯಣರಾಯರು, ಅಡವಿ ವಿಷ್ಣುತೀರ್ಥರು, ಜೋಗ ವಿಶ್ವನಾಥರಾಯರು, ಸವಣೂರ ಹನುಮಂತರಾಯರು, ದೇಶಪಾಂಡೆ ರುಕ್ಮಾಂಗದ ರಾಯರು ಇವರು ಒಬ್ಬೊಬ್ಬರು ನೂರಿನ್ನೂರು ರೂಪಾಯಿಗಳಂತೆ ಕೊಡದಿದ್ದರೆ, ನನ್ನ ಗ್ರಂಥಗಳು ಹೊರಡುತ್ತಲೇ ಇರಲಿಲ್ಲ. ಅಸುಂಡಿ ರಂಗರಾಯರೇ ಮುಂತಾದ ಅನೇಕರು ಪೋಷಕರಾಗಿ

ಪ್ರೋತ್ಸಾಹಿಸಿರುವರು. ಕೃಷ್ಣರಾವ ದೀಕ್ಷಿತ ಇವರು ನನ್ನ ಹಿರಿಯ,
ಮಗನಿಗೆ ತಿಂಗಳ ೧೫ ರೂ ಲೋನ ಸ್ಕಾಲರಶಿಪ್ಪು ಕೊಟ್ಟು
ನನ್ನ ಹಿರೇಮಗನು ಬಿ ಎಸ್ ಸಿ ಆಗಿ ಗಳಿಸಿದ ಕರಂದೀಕರ
ಸ್ಕಾಲರಶಿಪ್ಪಿಗೆ ಪುಷ್ಟಿ ಕೊಟ್ಟಿರುವುದರಿಂದ, ಈಗ ನನ್ನ ಮಗ
ನಿಗೆ ಬನಾರಸ ಯುನಿವ್ಹರ್ಸಿಟಿಯಲ್ಲಿ ಹೆಚ್ಚಿನ ಶಿಕ್ಷಣ ಪಡೆ
ಯಲಿಕ್ಕೆ ಪುಷ್ಟಿ ದೊರೆತಿದೆ ಡಾ| ಕಿರ್ಲೋಸ್ಕರರಂತೂ
ಮೊದಲಿನಿಂದಲೂ ತಮ್ಮ ಮನೆಗೂ ನಮ್ಮ ಮನೆಗೂ
ಏನೂ ಭೇದ ಭಾವ ಮಾಡದೆ 'ಔಷಧೋಪಚಾರ
ಮಾಡುತ್ತಲೇ ಇರುವರು. ನನ್ನ ಜಡ್ಡಿನಲ್ಲಿ ಪಂಡಿತ
ತಾರಾನಾಥರು ಮುದ್ದಾಂ ಬೆಂಗಳೂರಿನಿಂದ ಬರುವವರಿದ್ದರು
ಹಾಗೆ ಮಾಡಲಿಕ್ಕೆ ಕಾರಣವಿಲ್ಲವೆಂದು ಹೇಳಿದಾಗ ತಮ್ಮ
ಆಶ್ರಮದ ಕುಲಕರ್ಣಿಯವರನ್ನು ಕಳಿಸಿದ್ದಲ್ಲದೆ, ಸ್ವತಃ
ಅನೇಕ ತಿಂಗಳು ಪುಕ್ಕಟೆ ಔಷಧ ಕೊಟ್ಟರು ಹನುಮಂತ
ರಾವ ಸವಣೂರ ಇವರೂ ಅದೇ ಪ್ರಕಾರ ಮಾಡಿದರು
ಬುರ್ಲಿ ಮಧ್ವಾಚಾರ್ಯರು ನನ್ನ ಸಲುವಾಗಿ ಆಗ ತಕ್ಕೊಂಡ
ಶ್ರಮವನ್ನು ನಾನು ನೆನಿಸಬೇಡವೆ? ಹೀಗೆ, ನನ್ನ ಅನೇಕ
ಮಿತ್ರರು ಕೇವಲ ನನ್ನ ಮೇಲಿನ ಪ್ರೇಮದಿಂದ ಸದ್ದಿಲ್ಲದೆ
ನನ್ನ ಮೇಲೆ ಉಪಕಾರ ಮಾಡಿರುವರು—ಮಾಡುತ್ತಿರು
ವರು. ಅಷ್ಟೇಕೆ, ಕರ್ನಾಟಕದಲ್ಲಿ ಗುಣಗ್ರಾಹಕತೆಯಿಲ್ಲ
ವೆಂದು ಅನೇಕರ ತಿಳುವಳಿಕೆಯಿತ್ತು ನನ್ನದೂ
ಹಾಗೆಯೇ ಇತ್ತು. ನಿಷ್ಕಾಮಕರ್ಮಕ್ಕೆ ಅದು ಯೋಗ್ಯ
ಭೂಮಿ ಆದರೆ ಹೋದ ವರುಷ, ನನ್ನ ೬೧ ನೆಯ
ಹುಟ್ಟಿದ ಹಬ್ಬದ ಸಂಭ್ರಮವನ್ನು ನೋಡಿದವರಿಗೆ, ಕರ್ನಾ
ಟಕದಲ್ಲಿ ಗುಣಗ್ರಾಹಕತಯಿಲ್ಲವೆನ್ನಲು ಬಾಯಿ ಬರುವುದೆ?

ಗೆಹಾ ಗುಣಜ್ಞತೆಯಿಲ್ಲದಿದ್ದರೆ, ನನ್ನಂಥ ಪಾಮರನ ಉತ್ಸವವು ನನಗೆ ಗೊತ್ತಿದ್ದಂತೆ ೧೦೦-೧೫೦ ಊರುಗಳಲ್ಲಿ ಆಗುತ್ತಿತ್ತೇ? ನಿಜವಾಗಿ ಇದು ಮರುಭೂಮಿಯುಲ್ಲವಷ್ಟೆ ಅಲ್ಲ, ಇಲ್ಲಿ ಮನುಷ್ಯನಿಗೆ ಆತನ ಯೋಗ್ಯತೆಗಿಂತ ಹೆಚ್ಚಿನ ಮಾನ ದೊರೆಯುತ್ತದೆಂದು ನನ್ನ ಅನುಭವ. ಕನ್ನಡಿಗರ ಕಣ್ಣುಗಳು ರಾಪುಗಣ್ಣುಗಳು ಅಂತೇ ಅವರಿಗೆ ನನ್ನಂಥ ಅಲ್ಪನೂ ಕೂಡ ದೊಡ್ಡವನಾಗಿ ಕಂಡನು ಪ್ರತಿಯೊಬ್ಬನೂ ತನಗೆ ದೇವರು ಕೊಟ್ಟ ಅನುಕೂಲತೆಗಳಿಗಾಗಿ ಆತನನ್ನು ಸ್ಮರಿಸಬೇಕಲ್ಲದೆ, ಕೊಡದಿದ್ದವುಗಳಿಗಾಗಿ ದೇವರನ್ನು ಹಳಿಯುವುದು ಒಳಿತಲ್ಲ.

**ಸಾಧನಕೇರಿಯ ಕಲ್ಪನೆ**—ಸಾಧನಕೇರಿಯಲ್ಲಿ ನಾನು ಒಕ್ಕಲು ಮಾಡಿದ್ದೊಂದು ನನ್ನ ಚಿಕ್ಕ ಸ್ವತಂತ್ರ ಕಲ್ಪನೆ ನನ್ನ ಬಂಗ್ಲೆಯನ್ನು ಕಟ್ಟಲಿಕ್ಕೆ ಆ ಜಾಗೆಯನ್ನು ಆರಿಸಿದ್ದು ಒಂದು ವಿಶಿಷ್ಟ ಉದ್ದೇಶದಿಂದ ೧೯೧೬ ರ ಸುಮಾರಕ್ಕೆ ನಾವು ಸ್ಟೇಶನ್ನದ ಹತ್ತರ ಬಂಗ್ಲೆಯಲ್ಲಿ ಇರುತ್ತಿದ್ದೆವು ಎಂದಿನಂತೆ ಧಾರವಾಡದಲ್ಲಿ ನೀರಿನ ಅರಬು, ಪ್ಲೇಗಿನ ಹಾವಳಿ ಆಗ, ಸ್ವಲ್ಪ ದೂರವಾದರೂ ಚಿಂತೆಯಿಲ್ಲ, ನೀರಿನ ಅನುಕೂಲತೆಯಿದ್ದ ಜಾಗೆ ಆರಿಸಬೇಕೆಂದೆನಿಸಿತು. ಈಗಿದ್ದ 'ಸಾಧನಕೇರಿ' ಆಗ ಅಡವಿ. ಆದರೆ, ಅದಕ್ಕೆ ಪೋಲೀಸ ಹೆಡ್‌ಕ್ವಾರ್ಟರ್ಸಿನ ಉಲುವು, ನೀರಿನ ಅನುಕೂಲತೆ ಹೆಚ್ಚು ಊರ ಹೊರಗೆ ನಾಲ್ಕೈದೇ ಫರ್ಲಾಂಗು. ಆದ ಕಾರಣ, ಸ್ವತಂತ್ರ ವಿಚಾರ ಮಾಡಿ, ಈ ಉತ್ತಮ ಹವೆಯ ಮತ್ತು ನೀರಿನ ಅನುಕೂಲತೆಯ ಬೈಲು ಪ್ರದೇಶ ಆರಿಸಿದೆ ನಮ್ಮ ತಂದೆಯವರಿಗೂ ಪ್ರಶಾಂತ ಸ್ಥಳದ ಮೇಲೆ ಪ್ರೀತಿ. ಅವರೊಪ್ಪಿದರು. ಅಲ್ಲಿ

ಒಬ್ಬನೇ ಬಂಗ್ಲೆ ಕಟ್ಟಿದೆ  ಇತ್ತ ಹಳ್ಳಿಯ ಊರು ನಮ್ಮಂಥ
ವರಿಗೆ ಉಪಯೋಗದ್ದಲ್ಲ, ಇತ್ತ ಶಹರವೂ ಸರಿಯಲ್ಲ. ಎರ
ಡೂಗಳ ಲಾಭಗಳು ನಾನು ಈಗಿದ್ದ ಸ್ಥಳದಲ್ಲಿ ಸ್ವಾವಲಂಬ
ನಕ್ಕಾಗಿಯೂ ಸಾಧನಕ್ಕಾಗಿಯೂ, ವಕೀಲಿ ಬಿಟ್ಟ ಬಳಿಕ
ಕೆಲವು ವಿದ್ಯಾರ್ಥಿಗಳನ್ನಿಟ್ಟುಕೊಂಡಿದ್ದೆ "ಆಶ್ರಮ' ವೆಂಬ
ಹೆಸರು ಬಲುದೊಡ್ಡದೆಂದೆನಿಸಿದ್ದರಿಂದ ಇದಕ್ಕೆ "**ಸಾಧನಕೇರಿ**'
ಯೆಂದು ಹೆಸರಿಟ್ಟೆ ಇಲ್ಲಿಯ ಪೋಸ್ಟ ಆಫೀಸಿಗೂ ಅವೇ
ಹೆಸರು ಕೊಡಲ್ಪಟ್ಟಿತು.

**ನನ್ನ ವಕೀಲಿಯ ಜೀವನ ಮತ್ತು ಮುದವೇಡಿಕೆರರೊಡನೆ ಪಾಲುಗಾರಿಕೆ.**—ನಾನೇನೂ ದೊಡ್ಡ ವಕೀಲ
ನೆಂದು ಅಷ್ಟು ಪ್ರಸಿದ್ಧನಲ್ಲ ಸತತ ವಕೀಲಿ ಮಾಡಿದ್ದೇ ೭-೮
ವರುಷ. ಆದರಲ್ಲಿ ಯಥೇಚ್ಛ ಹಣ ದೊರೆತದ್ದು ನನ್ನ ಪುಣ್ಯ
ದಿಂದ ಮತ್ತು ಕಾಲ ಮಹಿಮೆಯಿಂದ ಆದಕಾರಣ ನನ್ನ
ವಕೀಲಿಯ ಆ ಜೀವನದ ಸ್ಮೃತಿ ಕೊಡುವ ಕಾರಣ
ವಿಲ್ಲ. ಆದರೆ, ನನ್ನ ವಕೀಲಿ ಜೀವನದ ಒಂದು ವೈಶಿಷ್ಟ್ಯ
ವನ್ನು ಮಾತ್ರವೇ ಹೇಳುವೆ. ಅದಾವುದೆಂದರೆ, ನನ್ನ
ಪಾಲುಗಾರಿಕೆ ನಾನು ೧೯೦೬ ರಲ್ಲಿ ವಕೀಲಿ ಬಿಟ್ಟಾಗ, ನನ್ನ
ದಪ್ತರನ್ನು ವೆಂಕಟರಾವ ಮುದವೇಡಕರ ಇವರಿಗೆ ಒಪ್ಪಿಸಿದ್ದೆ.
ತಿರುಗಿ ೧೯೧೧ ರಲ್ಲಿ ವಕೀಲಿಗೆ ಬಂದಾಗ, ನಾವಿಬ್ಬರೂ ಪಾಲಿ
ನಿಂದ ವಕೀಲಿ ಮಾಡಬೇಕೆಂಬ ವಿಚಾರ ಹೊರಟಿತು. ಇಬ್ಬ
ರಿಗೂ ಸಾಲುವಷ್ಟು ಹಣ ಸಿಗಬಹುದೋ ಇಲ್ಲವೋ ಎಂದು
ಸಂದೇಹ. ಇಬ್ಬರೂ ಸಂತುಷ್ಟ ಜೀವಿಗಳು, ಇಬ್ಬರೂ ಸಾರ್ವ
ಜನಿಕ ಮನೋವೃತ್ತಿಯವರು. ಒಬ್ಬೊಬ್ಬರಿಗೆ ಸುಮಾರು
೧೦೦—೧೫೦ ರೂಪಾಯಿ ತಿಂಗಳಿಗೆ ಬಿದ್ದರೆ ಸಾಕು. ಪಾಲು

ನಡಿಸಬೇಕು, ಇಲ್ಲದಿದ್ದರೆ ಬಿಡಬೇಕೆಂದು ಗೊತ್ತು ಮಾಡಿ ಕೊಂಡೆವು. ಆದರೆ, ಮೊದಲಿನ ವರ್ಷವೇ ೨೦೦ ಕ್ಕಿಂತ ಹೆಚ್ಚಿಗೆ ಬಿದ್ದ ಕಾರಣ ಕಡೆತನಕ ಕೂಡಿ ನಡಿಸಿದೆವು. ಅವರು ವಕೀಲಿಯ ಬಹುಭಾರ ತಾವೇ ಹೊತ್ತು, ನನ್ನನ್ನು ಸಾರ್ವ ಜನಿಕ ಕಾರ್ಯಕ್ಕೆ ಮೀಸಲು ಬಿಟ್ಟಿದ್ದರು ೧೯೨೦ ರಲ್ಲಿ ಆ ಪಾಲುಗಾರಿಕೆ ಮುಗಿಯುವ ವರೆಗೆ ಪಾಲಿನಿಂದಲೇ ವಕೀಲಿ ಮಾಡಿದೆವು, ಒಳ್ಳೇ ಏರಿಕೆಯ ಕಾಲದಲ್ಲಿ, ೧೯೨೦ ರಲ್ಲಿ ಅಸ ಹಕಾರದ ನಲುವಾಗಿ ನಾನು ವಕೀಲಿ ಬಿಟ್ಟೆ. ಮುಂದೆ, ಗೋಳಿ ಬಾರಿನ ಪ್ರಕರಣದಲ್ಲಿ ಅವರಿಗೆ ಮೂರು ವರ್ಷ ಶಿಕ್ಷೆಯಾಗಿ ಅವರ ಸನದು ಅನೇಕ ವರ್ಷ ಹೋಗಿತ್ತು (ಇತ್ತೀಚೆಗೆ ಅದು ಸಿಕ್ಕಿದೆ) ನಮ್ಮ ಅಪೇಕ್ಷೆ ಮೀರಿ, ಒಬ್ಬೊಬ್ಬರಿಗೆ ಮೂರುನಾಲ್ಕು ಪಟ್ಟು ಹೆಚ್ಚು ಹಣ ಸಿಗಹತ್ತಿದ್ದರಿಂದ, ನಾವು ಅಸಂತುಷ್ಟ ರಾಗುವ ಪ್ರಸಂಗವೇ ಬರಲಿಲ್ಲ. ಅಲ್ಲದೆ, ತಮ್ಮನ ಮಕ್ಕಳಿಗ ಪಾಲಿಗಿಂತ ೫ ಸಾವಿರ ರೂಪಾಯಿ ಹೆಚ್ಚು ಕೊಡುವ ವಚನ ತಂದೆಯವರಿಗೆ ಕೊಟ್ಟು, ಆ ಪ್ರಕಾರ ಮುಂದೆ ಮುಟ್ಟಿಸಿದೆ. ನನ್ನ ನೋಡಿಕೆಯಲ್ಲಿ, ಪಾಲಿನಿಂದ ವಕೀಲಿ ನಡೆದು, ಮನ ಸ್ತಾಪದಿಂದ ಅದು ಮುರಿಯದೆ ಇದ್ದ ಒಂದೂ ಪಾಲುಗಾರಿ ಕೆಯ ಉದಾಹರಣೆ ಇಲ್ಲ ಇದೇ ನಮ್ಮ ಪಾಲುಗಾರಿಕೆಯ ವಿಶೇಷ.

**ನನ್ನ ಜೀವನವೂ ಸಂಸ್ಥೆಗಳೂ:—** ಪ್ರತಿಯೊಂದು ಕ್ಷೇತ್ರದಲ್ಲಿ ನಾನು ಅಖಿಲಕರ್ನಾಟಕದ ದೃಷ್ಟಿಯಿಂದ ಯಾವ ವಿಧದ ಸಂಸ್ಥೆ ಇರಬೇಕೆಂಬುದನ್ನು ಸ್ವತಂತ್ರವಾಗಿ ನಿರ್ಣಯಿಸಿ ಆ ಪ್ರಕಾರ ಅನೇಕ ಸಂಸ್ಥೆಗಳನ್ನು ಹುಟ್ಟಿಸಿರುವೆ. ಅಲ್ಲಿ ಇರುವ ವರೆಗೆ ಸಂಪೂರ್ಣವಾಗಿ ಮನಸ್ಸು ಹಾಕಿ ಕೆಲಸಮಾಡಿರುವ.

ಆದರೆ ಯಾವುದೊಂದೇ ಸಂಸ್ಥೆಗೆ ಆಯುಷ್ಯವನ್ನು ಅರ್ಪಿಸ ಲಿಲ್ಲ. ಇದಕ್ಕೆ ಕಾರಣವೆಂದರೆ, ಕರ್ನಾಟಕವಲ್ಲಿ ಶಾಶ್ವತ ವಾದ ಮತ್ತು ಸ್ವತಂತ್ರವಾದ ಸಂಸ್ಥೆಗಳು ಬಾಳುವ ಸ್ಥಿತಿಯು ಆಗ ಇದ್ದಿಲ್ಲ. ಆ ಕಾಲವು ಆಗ ಬಂದಿದ್ದಿಲ್ಲ ಈಗಲೂ ಆ ಕಾಲವೂ ಆ ಸ್ಥಿತಿಯೂ ಬಂದಿಲ್ಲ ಕರ್ನಾಟಕದ ಜಾಗ್ರತಿಯು ಪ್ರಾರಂಭವಾಗಿ ೩೦ ವರ್ಷಗಳಾಗಿ ಹೋಗಿದ್ದರೂ ಇನ್ನೂವರೆಗೆ ಇಲ್ಲಿ ಒಂದೂ ಶಾಶ್ವತವಾದ ಮತ್ತು ಸರಕಾರದ ಸಹಾಯವಿಲ್ಲದ ಭವ್ಯಸಂಸ್ಥೆ ಹುಟ್ಟಿಲ್ಲವೆಂಬುದನ್ನು ನೋಡಿದರೆ, ನಾನು ಹಿಡಿದ ಧೋರಣವೇ ನನ್ನ ಉದ್ದೇಶಕ್ಕೆ ಸರಿಯಾಗಿತ್ತೆಂಬುದು ಮನ ವರಿಕೆಯಾಗದಿರದು ಆ ಉದ್ದೇಶವೆಂದರೆ, ಕರ್ನಾಟಕತ್ವದ ಭಾವ ನೆಯ ಬೀಜಗಳನ್ನು ಪ್ರತಿಯೊಂದು ಕ್ಷೇತ್ರದಲ್ಲಿ ಬಿತ್ತುವುದು. ನಾನು ಸಾರ್ವಜನಿಕ ಜೀವನವನ್ನು ಕೈಕೊಂಡ ಕಾಲ ಕಾಳ ಗತ್ತಲೆಯ ಕಾಲ. ಮುಂಬಯಿಗೆ ಹೋಗುವಾಗ ಕಲ್ಲುಗವಿಗಳೊಳ ಳಗಿಂದ ಉಗಿಬಂಡಿ ಹಾಯ್ದುಹೋಗುವಂತೆ ನನ್ನ ಅವಸ್ಥೆ. ಎಲ್ಲಿಯೋ, ಒಡಕುಗಳೊಳಗಿಂದ ಮೇಲಿನಿಂದ ಬರುತ್ತಿರುವ ಬೆಳಕೇ ಬೆಳಕು. ಅಲ್ಲದೆ, ನಾನು ಅಲ್ಪಯೋಗ್ಯತೆಯವ. ನಾನೇನೂ ಟಿಳಕ ಗಾಂಧಿಯವರಂತೆ ಅವತಾರಿಕ ಪುರುಷನಲ್ಲ ಮೇಲಾಗಿ ಬೇಡುವ ಸ್ವಭಾವ ನನ್ನದು ಅಲ್ಲ. ಅನ್ಯರ ಕಷ್ಟಾ ರ್ಜಿತವನ್ನು ಕೇಳಲಿಕ್ಕೆ ನಮಗೆ ಏನು ಹಕ್ಕು ಅದೆ? ಅವರು ಕೊಟ್ಟರೆ ಅದು ಅವರ ಪುಣ್ಯ. ನಾನು ಬೇಡಿ, ಕೊಡುವುದಿಲ್ಲ ವೆಂದು ಯಾರಾದರೂ ಅಂದರೆ ನನ್ನ ತಲೆಯ ಮೇಲೆ ಹೊಡೆ ದಂತಾಗುತ್ತದೆ. ಆದಕಾರಣ, ಅಂಥವರನ್ನು ಬೇಡಲು ನಾನು ಬಹುಶಃ ಹೋಗುವುದಿಲ್ಲ. ಹಣವಿಲ್ಲದೆ ಸಂಸ್ಥೆ ನಡೆ ಯುವುದಿಲ್ಲ. ಇದಲ್ಲದೆ, ನನ್ನ ಕರ್ನಾಟಕತ್ವದ ಭಾವನೆ ತೀರ

ಹೊಸಭಾವನೆ ಅದನ್ನು ಪ್ರಸ್ಥಾಪಿಸುವುದಕ್ಕಾಗಿ ಬಹುಶಃ ನನಗೆ ಮುಖಂಡರೆನ್ನಿಸಿಕೊಳ್ಳುವವರೆಲ್ಲರನ್ನು ವಿರೋಧಿಸುವ ಪ್ರಸಂಗ ಬಂದಿತು ದೊಡ್ಡವರಿಗೆ ಮತ್ತು ಶ್ರೀಮಂತರಿಗೆ ವಿರೋಧವು ಸಹನವಾಗುವುದಿಲ್ಲ ಹಣಕೊಟ್ಟು ಬೇಕಾದಾಗ ಸಂಸ್ಥೆಗಳನ್ನು ಗುತ್ತಿಗೆ ಹಿಡಿಯುವ ಧೈರ್ಯ ಅವರಿಗೆ ಆದ ಕಾರಣ ಅವರು ನನ್ನನ್ನು ಏಕೆ ಲಕ್ಷಿಸಬೇಕು? ನಾನು **ಧ್ಯೇಯವಾದಿಯೂ ಅಲ್ಲ ಕೇವಲ ವ್ಯವಹಾರವಾದಿಯೂ ಅಲ್ಲ ಧ್ಯೇಯನಿಷ್ಠ ವ್ಯವಹಾರವಾದಿ ನಾನು.** ಆದುದರಿಂದಲೇ, ಇದ್ದ ಸ್ಥಿತಿಯಲ್ಲಿಯೇ ಶಕ್ಯವಾದಷ್ಟು ಸಂಸ್ಥೆಗಳನ್ನು ಹುಟ್ಟಿಸಿದೆ. ನಡಿಸಿದ ಧ್ಯೇಯಸಾಧನೆಗಾಗಿ ಇದುರಿಸುವ ಪ್ರಸಂಗ ಬಂದಾಗ ಧಾರ್ಮಿಕ ಮಠದ ಶ್ರೀ ಶ್ರೀಗಳವರನ್ನೂ ಲಕ್ಷಿಸಲಿಲ್ಲ, ವಾಙ್ಮಯ ಮಠದ ಶ್ರೀ ಶ್ರೀಗಳವರನ್ನೂ ಲಕ್ಷಿಸಲಿಲ್ಲ, ರಾಜಕಾರಣ ಮಠದ ಶ್ರೀ ಶ್ರೀಗಳವರನ್ನೂ ಲಕ್ಷಿಸಲಿಲ್ಲ ಡಾ| ಕೇತಕರ ಇವರು ತಮ್ಮ ಮರಾಠೀ ವಿಶ್ವಕೋಶವನ್ನು ನಾನು ೧೦-೮ ಪದವೀಧರರನ್ನು ನೇಮಿಸಿಕೊಂಡು (ಅವರ ಸಂಬಳ ಬೇರೆ) ನಾನು ಭಾಷಾಂತರಿಸಬೇಕೆಂದೂ ಆದಕ್ಕಾಗಿ ನನಗೆ ತಿಂಗಳಿಗೆ ೨೫೦ ರೂ ಸಂಬಳವನ್ನೂ ದಿನಕ್ಕೆ ೩ ರೂ ಭತ್ತೆಯನ್ನೂ ಕೊಡುತ್ತೇವೆಂದು ಹೇಳಿದರು ಆದರ ಕೇವಲ ಭಾಷಾಂತರ ಮಾಡುವುದು ನನ್ನ ಮನಸ್ಸಿಗೆ ಒಗ್ಗಲಿಲ್ಲ ಆದಕಾರಣ, ಅವರ ಒತ್ತಾಯಕ್ಕೆ ನಾನು ಒಳಗಾಗಲಿಲ್ಲ. ಸಂಬಳದ ಆಶೆಗೆ ಮಾಡಿದನೆಂದು ಎಲ್ಲಿ ಜನರು ಅನ್ನುವರೋ ಎಂದು ಎನಿಸಿತು !

ನಾನು ಹುಟ್ಟಿಸಿದ ಯಾವ ಸಂಸ್ಥೆಯೂ, ಯಾವ ಕಾರ್ಯವೂ ನಿಜವಾಗಿ ನಿಂತುಹೋಗಿರುವುದಿಲ್ಲ. ಅವಕ್ಕೆ ಕಾಲಕಾಲಕೆ

ತಕ್ಕಂತೆ ಭಿನ್ನಭಿನ್ನ ರೂಪ ಕೊಟ್ಟಿರುವೆ. ವಾಙ್ಮಯಕ್ಷೇತ್ರ ತಕ್ಕೊಳ್ಳಿರಿ ಮುಂಚೆ, ಪತ್ರಿಕೆ ಸಂಪಾದಕ, ಆಬಳಿಕ ಮಾಸ ಪತ್ರಿಕೆ ಸಂಪಾದಕ, ಆಬಳಿಕ ಗ್ರಂಥಮಾಲೆಗಳ ಸಂಪಾದಕ ರೂಪಗಳು ಭಿನ್ನವಾದರೂ ಕಾರ್ಯವೊಂದೇ ಅದೇಂದರೆ ಲೇಖನ ಮತ್ತು ಪ್ರಕಾಶನ ಅದು ಇಂದಿಗೂ ಸತತವಾಗಿ ನಡೆದೇ ಇದೆ ಕರ್ನಾಟಕ ಗ್ರಂಥಪ್ರಸಾರಕ ಮಂಡಲ ತೆಗೆದೆ, ಅದಕ್ಕೇನೋ ನವಜೀವನಗ್ರಂಥಭಾಂಡಾರದ ರೂಪ ಕೊಟ್ಟೆ ಅದನ್ನೇ ಬೆಳಿಸಿ ಗೀತಾಕುಸುಮಮಂಜರಿ ಗ್ರಂಥ ಮಾಲೆ ಮಾಡಿದೆ. ಅವೆಲ್ಲವೂ ನಿಜವಾಗಿ ಒಂದೇ ವಿಚಾರದ ಹೆಚ್ಚುಹೆಚ್ಚಿನ ರೂಪಗಳು. ಕರ್ನಾಟಕ ಗ್ರಂಥಕರ್ತರ ಸಮ್ಮೇಲನ ಕೂಡಿಸಿದೆ. ಅದನ್ನೇ ವಿಸ್ತೃತಗೊಳಿಸಿ ಕರ್ನಾಟಕ ಸಾಹಿತ್ಯಸಮ್ಮೇಲನ ಮಾಡಿದೆ. ಅವೂ ಅವ್ಯಾಹತವಾಗಿ ಕೂಡುತ್ತಲಿವೆ. ವಿದ್ಯಾವರ್ಧಕಸಂಘದಲ್ಲಿ ಕಾರ್ಯಮಾಡಿದೆ ಅದರ ಕ್ಷೇತ್ರವನ್ನು ವ್ಯಾಪಕಗೊಳಿಸಿ, ಕರ್ನಾಟಕ ಸಾಹಿತ್ಯ ಪರಿಷತ್ತು ಸ್ಥಾಪಿಸಿದೆ. ಅವೆರಡೂ ಸಂಸ್ಥೆಗಳಲ್ಲಿ ಕೆಲಸ ಮಾಡಿದೆ. ಅವೆರಡೂ ನಡೆದಿರುವವು.

ಇತಿಹಾಸಕ್ಷೇತ್ರದಲ್ಲಿ ಕರ್ನಾಟಕ ಇತಿಹಾಸಮಂಡಲವೆಂಬ ಸ್ವತಂತ್ರ ಸಂಸ್ಥೆ ತೆಗೆದೆ. ಅದು ಈಗಲೂ ದಕ್ಷತೆಯಿಂದ ಕೆಲಸ ನಡೆಸಿರುವುದು ಹೇಳಿದಾಗ ಅಧ್ಯಕ್ಷಪದ ಬಿಟ್ಟು ಕೊಟ್ಟೆ. ಕೇಳಿದಾಗ ಅಂದರೆ ಆ ಮಂಡಲವು ಆಜ್ಞೆ ಕೊಟ್ಟಾಗ ಅದರ ವತಿಯಿಂದ '**ಪ್ರಾಚೀನ ಕರ್ನಾಟಕ**'ವೆಂಬ **ಪತ್ರಿಕೆಗೆ ಸಂಪಾದಕ**ನಾಗಿ ಅದನ್ನು ಅವರು ನಿಲ್ಲಿಸುವವರೆಗೆ ನಡಿಸಿದೆ. ವಿದ್ಯಾರಣ್ಯ ಉತ್ಸವ ಮುಂತಾದವುಗಳು ನಡೆದೇ ಇವೆ. ವಿಜಯನಗರ ಮಹಾ ಉತ್ಸವವನ್ನು ಕೂಡಿ ಅದನ್ನು ಯಶಸ್ವಿ

ಯಾಗಿ ಪೂರ್ಣಗೊಳಿಸಿದೆ ಕರ್ನಾಟಕಕ್ಕಾಗಿ ಒಂದು ಲಕ್ಷ ರೂಪಾಯಿ ಈ ಸಂದರ್ಭದಲ್ಲಿ ಕೂಡಿಸಬೇಕೆಂದು ಬಹಳ ಹಾತೊರೆದೆ. ಅಷ್ಟು ಹಣ ಸಹಜ ಕೂಡಬಹುದೆಂದು ಆತ್ಮ ವಿಶ್ವಾಸವಿತ್ತು. ಆದರೆ, ನನಗೆ ಕನ್ನಡಿಗರ ಬೆಂಬಲ ಬೇಕಾಗಿತ್ತು ಅದು ಸಿಗಲಿಲ್ಲ ಏನೂ ವಿಶೇಷ ಪ್ರಯತ್ನಮಾಡದೆ, ೨-೩ ತಿಂಗಳಲ್ಲಿ ಸುಮಾರು ೨೦-೨೫ ಸಾವಿರ ರೂಪಾಯಿ ಕೂಡಿದ್ದನ್ನು ನೋಡಿದರೆ, ೨-೩ ವರ್ಷಗಳಲ್ಲಿ ೧ ಲಕ್ಷ ಕೂಡೇಕೂಡುತ್ತಿತ್ತೆಂಬುದು ಗೊತ್ತಾಗುವುದು ಕವಜಲಗಿ ಹನುಮಂತರಾಯರಿಗೆ, ಆಗ ಹೇಳಿದಂತೆ "I can only give a push but cannot alone pull it on" ಎಂಬುದೇ ನಿಜ ರಾಜಕಾರಣವು ಯಾವಾಗಲೂ ಚಂಚಲಕ್ಷೇತ್ರ ಅಲ್ಲಿ ರೂಪ ಬದಲಾಯಿಸಲೇಬೇಕಾಗುತ್ತದೆ ಸ್ವದೇಶಿ ಚಳವಳಿಯಲ್ಲಿ ಕೆಲಸ ಮಾಡಿದೆ ಅದೇ ಮುಂದೆ ಹೋಮುರೂಲ ಲೀಗಿನ ರೂಪ ತಾಳಿತು ಅಲ್ಲಿಯೂ ಕೆಲಸಮಾಡಿದೆ ಮುಂದೆ ಅದೇ ಪ್ರಾಂತಿಕ ಕಾಂಗ್ರೆಸ್ ಕಮಿಟಿಯಾಗಿ ಪರಿಣಮಿಸಿತು; ಮತಭೇದದ ಮೂಲಕ ರಾಜಕಾರಣ ಬಿಡುವವರೆಗೆ, ಸತತ ಕೆಲಸ ಮಾಡಿರುವೆ ನಾನು ಹೂಡಿದ ಯಾವ ಪರಿಷತ್ತೂ ಸಮ್ಮೇಲನವೂ ಅಯಶಸ್ವಿಯಾಗಿಲ್ಲ ಸಾರಾಂಶ, ಹೆಚ್ಚು ಹೆಚ್ಚಿನ ಕಾರ್ಯ ಕೈಕೊಳ್ಳುವುದು ನನ್ನ ಪದ್ಧತಿ, ನನ್ನ ಸ್ವಭಾವ. ಅದಕ್ಕೆ Excelsior ಅಂದರೆ ಆರೋಹಣಪದ್ಧತಿ ಅಥವಾ ಸೋಪಾನಾರೋಹಣ ನ್ಯಾಯವೆನ್ನಬಹುದು.

ಕರ್ನಾಟಕ ಕ್ಷೇತ್ರದಲ್ಲಿ, ಕರ್ನಾಟಕಸಭೆ ತೆಗೆದೆ ಅದಕ್ಕೇನೇ ಕನ್ನಡಿಗರಸಂಘದ ರೂಪವು ಪ್ರಾಪ್ತವಾಗಿದೆ. ಅದು ಇನ್ನೂ ನನ್ನ ಅಧ್ಯಕ್ಷತೆಯಲ್ಲಿ ಅಸ್ತಿತ್ವದಲ್ಲಿ ಇದೆ. ಶಾಂತೇಶ

ವಾಚನಾಲಯಕ್ಕೆ ನಾನು ಅಧ್ಯಕ್ಷನಾಗಿ ಅನೇಕವರ್ಷ ನಡಿ
ಸಿದೆ ಇತ್ತೀಚೆಗೆ, ಅದು ವಿದ್ಯಾವರ್ಧಕಸಂಘದಲ್ಲಿ ಸೇರ್ಪಡೆ
ಯಾಗಿ ಕೆಲಸ ನಡಿಸಿರುವುದು ನಾಡಹಬ್ಬಗಳು ನಡೆದೇ
ಇವೆ.

ಧಾರ್ಮಿಕಕ್ಷೇತ್ರದಲ್ಲಿ ಶ್ರೀಶಂಕರಾಚಾರ್ಯರ ಪಾಠಶಾಲೆಗೆ
ಚೇಅರಮನ್ನನಾಗಿ ಅನೇಕವರ್ಷ ಸಾಗಿಸಿದೆ ಆ ಸಂಸ್ಥೆಯು
ಈಗಲೂ ನಡೆದಿದೆ

ಆದರೆ ಒಂದು ಮಾತು ನಿಜ ನಾನು ತೆಗೆದ ಅಥವಾ
ಕಾರ್ಯಮಾಡಿದ ಯಾವ ಸಂಸ್ಥೆಯೂ ಭರಭರಾಟೆಯಿಂದ
ನಡೆದಿರುವುದಿಲ್ಲ ಎಲ್ಲವೂ ಟುಕುಟುಕು ಜೀವ ಹಿಡಿದಿವೆ.
ಹೀಗಾಗಲಿಕ್ಕೆ ನನ್ನ ಅಲ್ಪಯೋಗ್ಯತೆಯೂ ಕಾರಣವೆಂಬುದನ್ನು
ಒಪ್ಪಲೇಬೇಕು ಅದಕ್ಕೆ ನಾನೇನು ಮಾಡಲಿ? ಕರ್ನಾಟಕದ
ಪರಿಸ್ಥಿತಿಯೂ ಅದಕ್ಕೆ ಕಾರಣವೆಂಬುದನ್ನು ಮಾತ್ರ ಮರೆಯ
ಲಾಗದು ಶಾಶ್ವತವಾದ ಮತ್ತು ಸ್ವತಂತ್ರವಾದ ಸಂಸ್ಥೆಗಳು
ನಡೆಯುವ ಕಾಲವೇ ಇನ್ನೂ ಕರ್ನಾಟಕಕ್ಕೆ ಬಂದಿಲ್ಲ. ಸರ
ಕಾರೀ ಅರಸರಕಾರೀ ಸಂಸ್ಥೆಗಳು ನಡೆದರೆ ಆಶ್ಚರ್ಯವಲ್ಲ.
ಹಾಗೆಯೇ, ಹಿಂದುಸ್ಥಾನದ ಮುಖಂಡರ ಪುಣ್ಯದಿಂದಲೂ
ಕೆಲವು ಸಂಸ್ಥೆಗಳು ನಡೆಯಬಹುದು — ನಡೆದಿರುತ್ತವೆ
**ಆದರೆ, ಸರಕಾರದ ಸಹಾಯವನ್ನು ತಕ್ಕೊಳ್ಳದೆ,
ಕೇವಲ ಕರ್ನಾಟಕದ ಜನತೆಯ ಮೇಲೆ ಅವಲಂಬಿಸಿ
ಭರಭರಾಟೆಯಿಂದ ನಡೆದ ಒಂದು ಸಂಸ್ಥೆಯು ಈಗಲೂ
ಕೂಡ ಇರುವುದಿಲ್ಲ.** ಸರಕಾರದ ವಿರೋಧವಿದ್ದರಂತೂ
ಕೇಳುವುದೇನು? ನನ್ನ ರಾಷ್ಟ್ರೀಯ ಶಾಲೆ ನಿಂತಿತು; ದೇಸಾಯಿ
ದಿವಾಕರರು ತೆಗೆದ ರಾಷ್ಟ್ರೀಯ ಶಾಲೆಯೂ ಹಳ್ಳಗೂಡಿತು.

ಕಾಂಗ್ರೆಸ್ಸಿನಿಂದ ೨-೩ ಸಾವಿರ ಹಣ ಪಡೆದು ದಿವಾಕರರ ವಶದಲ್ಲಿದ್ದ ರಾಷ್ಟ್ರೀಯ ಶಿಕ್ಷಣಸಮಿತಿಯಿಂದ ಎಷ್ಟು ಗ್ರಂಥಗಳು ಹೊರಟಿವೆ? ಕಡಪಾ ನಾನೂ ಕೂಡಿಸಿದ ಕರ್ನಾಟಕ ನಿಧಿಯು ದಿವಾಕರರ ಹತ್ತರ ಮಲಗಿಲ್ಲವೆ? ರಂಗರಾಯರ ಹತ್ತರ ಇರುವ ನಾನು ಕೂಡಿಸಿದ ಟಿಳಕ ಫಂಡು ಊರ್ಜಿತಾವಸ್ಥೆಯಲ್ಲಿರುವುದೇನು? ಜಯಕರ್ನಾಟಕದ ತರುವಾಯ ಅಂಥ ಎಷ್ಟು ಮಾಸಪತ್ರಿಕೆಗಳು ಹೊರಟಿವೆ? ಕರ್ನಾಟಕ ಸಾಹಿತ್ಯ ಪರಿಷತ್ತಿಗೆ ಮೈಸೂರ ಸರಕಾರದ ಬೆಂಬಲವಿಲ್ಲದಿದ್ದರೆ, ಅದು ಎಂದೋ ಗುಡಚಾಪಿ ಕಟ್ಟುತ್ತಿತ್ತು! ಸಂಯುಕ್ತಕರ್ನಾಟಕವು ಯುದ್ಧವು ಬಾರದಿದ್ದರೆ ನಿಂತು ಹೋಗುವ ಪ್ರಸಂಗ ಬಂದಿತ್ತು. ಮೋಹರೆ, ಪುರೋಹಿತ, ಕಲ್ಯ ಮುಂತಾದ ಅನೇಕರ ಸ್ವಾರ್ಥ ತ್ಯಾಗದ ಮೂಲಕವೂ ದಿವಾಕರರ ಪ್ರಯತ್ನದ ಮೂಲಕವೂ ಅದು ಶಾಶ್ವತವಾಗಿ ಬಾಳುವ ಆಶೆ ಇದೆ ಅದು ಹಾಗೆ ಚಿರಂಯುವಾಗಲಿ ಎಂದು ಆಶೀರ್ವದಿಸುತ್ತೇನೆ ಸಾರಾಂಶ ದೇಶದಲ್ಲಿ ಪೂರ್ಣವಾಗಿ ಜಾಗ್ರತಿಯಾಗುವವರೆಗೆ ಈ ಸ್ಥಿತಿ ಇರತಕ್ಕದೇ ಅದಕ್ಕೆ ಉಪಾಯವಿಲ್ಲ.

**ನನ್ನ ಒಟ್ಟುಜೀವನದ ಒಟ್ಟು ನೋಟ** — ನನಗೆ ಹೊಟ್ಟೆಗೆ ತಾಪತ್ರಯವಿಲ್ಲದ ಸ್ಥಿತಿಯಲ್ಲಿ ನಾನು ಸ್ವಾರ್ಥತ್ಯಾಗ ಮಾಡಿದವ ನನ್ನ ಸ್ವಾರ್ಥತ್ಯಾಗದ ಕಲ್ಪನೆಯೂ ಮರ್ಯಾದಿತ. ನಮ್ಮ ತಂದೆಗೆ ಕೊಟ್ಟ ಅಭಿವಚನದಂತೆ (ಪು.೪೦', ನಾನೂ ಅದಕ್ಕೆ ಮಿತಿ ಇಟ್ಟುಕೊಂಡಿದ್ದೆ. **ನಾನು ಗಳಿಸಿದ್ದು ಉಳಿಯಬಾರದು, ತಂದೆ ಗಳಿಸಿದ್ದು ಕಳೆಯಬಾರದು;** ಎಂಬುದೇ ಆ ಮಿತಿ. ಆದಕಾರಣ, **ನನ್ನ ಸ್ವಾರ್ಥ ತ್ಯಾಗಕ್ಕೆ, ಇಲ್ಲದ ಬೆಲೆ ಕೊಡುವ ಕಾರಣವಿಲ್ಲ. ಮುಂದೆ**

ದೇವರು ಪರೀಕ್ಷೆಯ ಕಾಲತಂದ; ಆತನೇ ಧೈರ್ಯಕೊಟ್ಟ ಆ ಮಾತು ಬೇರೆ ನನ್ನ ಜೀವನಕಾರ್ಯದ ಸಂಬಂಧವಾಗಿ ನಾನು ದಿವಾಕರ ರಂಗರಾಯರಿಗೆ ೯-೧೦-೧೯೩೪ನೆಯ ದಿವಸ ಬರೆದ ಪತ್ರದಲ್ಲಿ ಹೀಗೆ ಸ್ಪಷ್ಟಗೊಳಿಸಿರುವೆ "೧೯೦೬ನೆಯ ಇಸ್ವಿಯಲ್ಲಿ, ನಾನು ನನ್ನ ಮನಸ್ಸಿನಲ್ಲಿ ನಿಶ್ಚಿತಮಾಡಿಕೊಂಡ ಕಾರ್ಯಕ್ರಮವನ್ನು ಕಾಲಮಾನಕ್ಕೆ ಮತ್ತು ಪ್ರಸಂಗಕ್ಕೆ ತಕ್ಕಂತೆ ಇಂದಿಗೂ ಅನುಸರಿಸುತ್ತ ಬಂದಿರುವೆ **ರಾಷ್ಟ್ರೀಯ ಶಿಕ್ಷಣ, ರಾಜಕಾರಣ, ಭಾಷೆ, ಇತಿಹಾಸ, ಏಕೀಕರಣ, ಸಂಸ್ಕೃತಿ, ಧರ್ಮ ಇವೇ ಮುಂತಾದ ವಿಷಯಗಳಲ್ಲಿ, ಕೆಲವು ಮೂಲಭೂತವಾದ ತತ್ವಗಳಿಗನುಸರಿಸಿ ಕರ್ನಾಟಕಕ್ಕೆ ಹೊಸ ಮಾರ್ಗವನ್ನು ಹಿಡಿಸಬೇಕೆಂಬುದೇ ನನ್ನ ಉದ್ದೇಶ.**" ನನ್ನ ಜೀವನಸ್ಮೃತಿಗಳನ್ನೋದಿದರೆ ಈ ಮಾತು ಮನವರಿಕೆಯಾಗುವುದು **ಸುಸ್ವಾತಂತ್ರ್ಯ ಮತ್ತು ಸಂಯಮನ ಇವೇ ನನ್ನ ಮುಖ್ಯಸಾಧನಗಳು. ಸ್ವಾತ್ಮ ವಿಕಾಸವೇ ಮುಖ್ಯಸಾಧ್ಯ.** ಯಾರ ಹಂಗಿನಲ್ಲಿಯೂ ಇರದೆ, ನನ್ನಿಂದ ಎಷ್ಟು ಕಾರ್ಯಮಾಡುವುದು ಸಾಧ್ಯವೋ ಅಷ್ಟು ಮಾಡಿರುವೆ ಆದಕಾರಣ, ನಾನು ಕಾರ್ಯಮಾಡದಿದ್ದರೆ, ಏಕೆ ಮಾಡಲಿಲ್ಲವೆಂದು ಕೇಳಲಿಕ್ಕೆ ಜನತೆಗೆ ಹಕ್ಕು ಇಲ್ಲ. ಆಗಿದ್ದರೆ ನನ್ನಿಂದ ಲಾಭವೇ ಆಗಿರುತ್ತದಲ್ಲದೆ, ಹಾನಿಯಂತೂ ಆಗಿಲ್ಲ. ಫಂಡನ್ನು ಕೂಡಿಸಿದೆ; ಅನ್ಯರಿಗೆ ಕೊಟ್ಟೆ ಸಂಸ್ಥೆ ಸ್ಥಾಪಿಸಿದೆ, ಅನ್ಯರಿಗೆ ಕೊಟ್ಟೆ ಅನ್ಯರನ್ನು ತಮ್ಮ ಕೆಲಸಕ್ಕೆ ಹೂಡಿಸಿಕೊಳ್ಳುವ ಕಲೆ ಏನೋ ಅನೇಕರಿಗೆ ಗೊತ್ತಿದೆ ಆದರೆ, ತಮ್ಮನ್ನು ಅನ್ಯರ ಕೆಲಸಕ್ಕೆ ಹೂಡಿಕೊಳ್ಳುವವರು ಕಡಿಮೆ. ನಾನು ಆ ಸಂಪ್ರದಾಯ ಇಟ್ಟೆ. ಅಂದರೆ ಅನ್ಯರು ಮಾಡದೆ ಬಿಟ್ಟ

ಈ ಬಟ್ಟೀ ಕೆಲಸಗಳನ್ನು ಮಾಡುವುದರಲ್ಲಿ ಸಂತೋಷಪಟ್ಟ ಅಧಿಕಾರವು ಎಲ್ಲಿದ್ದರೂ ಮನುಷ್ಯನನ್ನು ಕೆಡಿಸುತ್ತದೆಂದು ನನ್ನ ಮತ. ಸಾರ್ವಜನಿಕ ಸಂಸ್ಥೆಗಳಲ್ಲಿಯೂ ಇದೇ ಹಣೆಬರಹ. ಸ್ಪಷ್ಟವಾಗಿ ಹಣತಕ್ಕೊಂಡು ಕೆಲಸಮಾಡಿದರೆ ಮುಂದಿ ಮೋಸ ಹೋಗುವುದಿಲ್ಲ ಆದೇ, ಕೀರ್ತಿ, ಮಾನ ಇವನ್ನು ಮುಂದೆ ಮಾಡಿ, ಯಾವುದೇ ತರಹದ ಸ್ವಾರ್ಥ ಸಾಧಿಸುವವರಿಗೆ ಜಗತ್ತು ಬಲಿಬೀಳುತ್ತದೆ ಪ್ರತಿಯೊಂದರಲ್ಲಿ ಸ್ವತಃ ನಾನು ನಾಲ್ಕು ಹೆಜ್ಜೆ ಇಟ್ಟ ಬಳಿಕವೇ ಅನ್ಯರಿಗೆ ಬರಲು ಕೈಮಾಡಿರುವೆನು. ಅಂದರೆ, ಪ್ರತಿಯೊಂದು ಕ್ಷೇತ್ರದಲ್ಲಿ ಸ್ವತಃ ಕೆಲಸ ಮಾಡಿ ತೋರಿಸಿಯೇ ಅನ್ಯರನ್ನು ಕರದಿರುವೆನು ನಾನು ದಂಡೆಯ ಮೇಲೆ ಕುಳಿತು ಅನ್ಯರನ್ನು ನೂಕಿಸಿಕೊಟ್ಟಿಲ್ಲ. ಮತ್ತು, ನನ್ನ ಒಲವಿನಂತ ಉಪದೇಶಮಾಡಲಿಕ್ಕೆ ಹೋಗದೆ, ಅವರ ಒಲವು ನೋಡಿಕೊಂಡು ಉಪದೇಶ ಮಾಡುವುದು ನನ್ನ ಪದ್ಧತಿ. ಇರಲಿ. ನನ್ನೀ ಸಾರ್ವಜನಿಕ ಧೋರಣವು ಸರಿಯೋ ಅಲ್ಲವೋ ನಾನು ಹೇಳಲಾರೆ, ನನಗೆ ಮಾತ್ರ ಅದರಲ್ಲಿ ವಿಶ್ವಾಸ. ಆದರೆ, ನಾನು ಏನು ಮಾಡಿದೆನೆಂಬ ಪ್ರಶ್ನೆ ಈಗ ಗೌಣ. ನಾನು ಮಾಡಿದ್ದರೂ ಆಯಿತು, ಮಾಡದಿದ್ದರೂ ಆಯಿತು. ನಾನುಮಾಡದೆ ಬಿಟ್ಟದ್ದನ್ನು ಜನರು ಮಾಡಿ ತೋರಿಸಿದರೆ ನನಗೆ ಅದರಲ್ಲಿಯೇ ಆನಂದ ಹೆಚ್ಚು ನನ್ನ ಸ್ಮೃತಿಗಳನ್ನೋದಿದರೆ, **ನಾನು ಮಾಡಿದ ಸಂಕಲ್ಪ ಗುಡ್ಡದಷ್ಟು; ಕೊನೆಗಾಣಿಸಿದ ಕಾರ್ಯ ಕಾಳಿನಷ್ಟು** ಎಂಬುದು ಗೊತ್ತೇ ಆಗುವುದು. ಆದಕಾರಣ, ನನಗೆ ಅಹಂಕಾರಕ್ಕೆ ಆಸ್ಪದವೇ ಇರಲಿಲ್ಲ. ಈ ಜೀವನಸ್ಮೃತಿಗಳನ್ನು ನಾನು ೪೦೦ ಪುಟಗಳವರೆಗೆ ಬೆಳೆಸಿದ್ದೇನೋ ನಿಜ. ಆದರೆ ನಾನು ಇಂತಿಂಥವುಗಳನ್ನು

ಮಾಡಿರುವೆ ಎಂಬುದನ್ನು ಹೇಳಲಿಕ್ಕೆ ಅನೇಕ ಪುಟಗಳು ಹಿಡಿಯುತ್ತವೆ ಆದೇ, ಏನುಮಾಡಿಲ್ಲವೆಂಬುದನ್ನು ಹೇಳಲಿಕ್ಕೆ "ಮಾಡಿಲ್ಲ" ಎಂಬ ಮೂರಕ್ಕರಗಳೇಸಾಕು. ನಾನು ಏನು ಏನು ಮಾಡಿಲ್ಲವೆಂಬುದೂ ನನ್ನ ಸ್ಮೃತಿಗಳಲ್ಲಿ ಒಡೆದೇ ಕಾಣು ತ್ತದೆ ನಾನು ಯಾವ ಕ್ಷೇತ್ರದಲ್ಲಿಯೂ ಹೇಳತಕ್ಕಷ್ಟು ಮುಂದೆ ಬಂದಿರುವದಿಲ್ಲ ಸಾಹಿತಿಯಾಗಿ ಸಾಹಿತ್ಯಕಂಠಾಭರಣನೆನಿಸಿ ಕೊಳ್ಳಲಿಲ್ಲ; ಸೂಕ್ಷ್ಮಸಂಶೋಧಕನಾಗಿ ಪ್ರಾಚ್ಯವಸ್ತುಪ್ರವೀಣ ನೆಂಬ ಪದವಿ ಪಡೆಯಲಿಲ್ಲ ಉದ್ದಾಮ ಕವಿಯಾಗಿ ಕವಿ ತಿಲಕನೆಂದು ಕೀರ್ತಿ ಪಡೆಯಲಿಲ್ಲ ವೀರ ಧರ್ಮ ಮಾರ್ತಂ ಡನೂ ನಾನಲ್ಲ ಅತುಲಸ್ವಾರ್ಥತ್ಯಾಗಮಾಡಿದ ರಾಜಕಾರಣ ಧುರಂಧರನೆಂದೂ ನಾನು ಹೆಸರು ವಾಸಿಯಾಗಲಿಲ್ಲ, ಅಪ್ರತಿಮ ವಾದ ಪ್ರತಿಭೆ ನನ್ನಲ್ಲಿ ಇಲ್ಲ, ಪ್ರಚಂಡವಾದ ಕರ್ತೃತ್ವಶಕ್ತಿಯು ಳ್ಳವನು ನಾನಲ್ಲ, ಪ್ರಖರವಾದ ತೇಜಸ್ಸನ್ನು ನನ್ನಲ್ಲಿ ಕಾಣ ಲಾರಿರಿ ಸಾರಾಂಶ, ನನ್ನ ಸ್ಮೃತಿಗಳ ಮುಖ್ಯ ಫಲಿತಾಂಶ ವೆಂದರೆ ಅಜಜಯ! ನಾನು ಕರ್ನಾಟಕ ದೇವಿಯ ಮಂದಿರದಲ್ಲಿ ಮಂದನಾಗಿ ಉರಿಯುತ್ತಿರುವ ಹೂಬತ್ತಿ!

**ನನ್ನ ಜೀವನಸ್ಮೃತಿಗಳ ಸಂದೇಶ** - ಹೀಗಿದ್ದರೂ ನನ್ನ ಸ್ಮೃತಿಗಳು ಒಂದು ಸಂದೇಶವನ್ನು ಕೊಡುತ್ತವೆ. ಅದಾವುದೆಂದರೆ '**ಕರ್ನಾಟಕತ್ವ**' ಮನುಷ್ಯನು ಹುಟ್ಟು **ವುದು ಬಹುಶಃ ಒಂದೇ ಒಂದು ಸಂದೇಶ ಕೊಡುವು ದಕ್ಕಾಗಿ.** ಒಂದೇ ಒಂದು ಬಾಣ ಬಿಡುವುದಕ್ಕಾಗಿ **ಕರ್ನಾಟ ಕತ್ವದ** ಬೀಜಗಳನ್ನು ಬಿತ್ತುವುದಕ್ಕಾಗಿ **ಮಾತ್ರವೇ ದೇವರು ನನ್ನನ್ನು ಹುಟ್ಟಿಸಿದ್ದನೆಂದೂ ಆ ಕಾರ್ಯ ಮುಗಿದ ಕೂಡಲೆ ಹಿಂದಕ್ಕೆ ಸರಿಸಿದನೆಂದೂ ನಾನು**

ತಿಳಿಯುತ್ತೇನೆ. ನಮ್ಮಿಂದ ಯಾವ ಕಾರ್ಯವು ಆಗತಕ್ಕ ದ್ದೆಂಬುದು ನಮಗಿಂತ ದೇವರಿಗೆ ಹೆಚ್ಚಿಗೆ ಗೊತ್ತು. ಅಷ್ಟೇ ಕೆಲಸ ಆತನು ನಮ್ಮಿಂದ ಮಾಡಿಸಿಕೊಳ್ಳುತ್ತಾನೆ. ಈಗ ನಾನು ಇಷ್ಟು ಮಾತ್ರ ಹೇಳಬಲ್ಲೆ ಏನೆಂದರೆ ನಾನು ತೋರಿಸಿಕೊಟ್ಟ ಮಾರ್ಗದಿಂದ ಹೋದರೆ ಮಾತ್ರ ಕರ್ನಾಟ ಕಕ್ಕೆ ಉದ್ಧಾರ ನಾನು ಪೂಜಿಸಿದ್ದು ಕರ್ನಾಟಕ ದೇವಿಯ ಒಡವೂಡಿದ ಸದ್ಭಾವಮುದ್ರಾ ಮೂರ್ತಿ ನಾನು ಸ್ನಾನ ಮಾಡಿದ್ದು ಉಗಮದಲ್ಲಿ, ಹರಿದ್ವಾರದ ಗಂಗೆಯಲ್ಲಿ; ಕರ್ನಾಟ ಕದೇವಿಯ ಮಂದಿರದ ಮಹಾದ್ವಾರದಲ್ಲಿ ಮಾತ್ರವೇ ನನ್ನ ಪ್ರವೇಶವಾಗಿದೆ. ಅದರ ಪ್ರಾಕಾರವನ್ನು ದಾಂಟಿ, ಒಳಗುಡಿ ಯಲ್ಲಿ ಅವಳ ಸುಂದರ ಮೂರ್ತಿಯ ದರ್ಶನ ತಕ್ಕೊಳ್ಳುವ ಪುಣ್ಯ ಮುಂದಿನವರದು ಕರ್ನಾಟಕ ಗತವೈಭವದ ಪ್ರಸ್ತಾ ವನೆಯಲ್ಲಿ ನಾನೊಂದು ಕೈಕಂಬವೆಂದು ಬರೆದಿರುವೆ ಬಹಳವಾ ದರೆ, ನನಗೆ ಹಾದಿಬೀದಿಗಳ ಕೂಟದಲ್ಲಿ ನಿಂತುಕೊಂಡು, ದಾರಿಕಾರರಿಗೆ ದಾರೀ ತೋರಿಸುವ ಶಿಪಾಯಿ ಎನ್ನ ಬಹುದು; ಅಥವಾ ಉಗಿಬಂಡಿಯನ್ನು ಒಂದು ಹಳಿಯಿಂದ ಮತ್ತೊಂದು ಹಳಿಗೆ ತಿರುಗಿಸುವ 'ಪೋರ್ಟರ'ನೆನ್ನ ಬಹುದು.

ನನ್ನ ಕರ್ನಾಟಕತ್ವದ ವಿಶಾಲತ್ವ— ಆದರೆ ಪುನಃ ಹೇಳುತ್ತೇನೆ—ನನ್ನ ಕರ್ನಾಟಕತ್ವದಲ್ಲಿ ರಾಷ್ಟ್ರೀಯತ್ವವೂ ವಿಶ್ವ ಬಂಧುತ್ವವೂ ಸೇರ್ಪಡೆಯಾಗುತ್ತವೆಂದು. ಕರ್ನಾಟಕವು ಒಂದು ಕಾರ್ಯಕ್ಷೇತ್ರ ಮಾತ್ರ. ಆದು ದೇಹ ಒಂದು ತೃಣದಲ್ಲಿ ಕೂಡ, ಪರಮಾತ್ಮನ ಸಂಪೂರ್ಣ ಸಾನ್ನಿಧ್ಯವಿರುತ್ತದೆ. ಅದಿಲ್ಲದಿದ್ದರೆ, ಆ ಹುಲ್ಲು ಕೂಡ ಅಗಳಾಡಲಾರದು. ಅಂದಬಳಿಕ, ನನ

'ಕರ್ನಾಟಕತ್ವ'ದಲ್ಲಿ ರಾಷ್ಟ್ರೀಯತ್ವ, ವಿಶ್ವಬಂಧುತ್ವಗಳು ಅಡಕ ವಾಗುವವೆಂದು ಹೇಳಿದರೆ ಆಶ್ಚರ್ಯವೇನು? ಆ ದೃಷ್ಟಿ ಯಿಂದಲೇ ನಾನು "ಕರ್ನಾಟಕ ಗತವೈಭವ''ವನ್ನು ಕರ್ನಾಟ ಕಾಂತರ್ಗತ ಭಾರತಾಂಬೆಗೆ ಸಮರ್ಪಿಸಿರುವೆ ಜಯಕರ್ನಾ ಟಕದ ಮೊದಲನೆಯ ಸಂಚಿಕೆಯ ಮೊದಲನೆಯ ಲೇಖದಲ್ಲಿ ನನ್ನೀ ಧ್ಯೇಯವನ್ನು ಹೀಗೆ ಸ್ಪಷ್ಟಗೊಳಿಸಿರುವೆ

"ಹೀಗೆ ನಮ್ಮ ಕಾರ್ಯಕ್ಷೇತ್ರವು ಕರ್ನಾಟಕವಾದರೂ ಭರತಭೂಮಿಯೇ ಧರ್ಮಕ್ಷೇತ್ರವು. ಕನ್ನಡ ನುಡಿಯೂ ನಾಡೂ ನಮ್ಮ ನಡು-ಮನೆಯಾದರೂ, ವಿಶ್ವವೆಂಬೀ ಪಗಡೀ ಪಟದಲ್ಲಿ, ಭರತಭೂಮಿಯೇ ನಮ್ಮ ಕಟ್ಟೆಯ ಮನೆಯೆಂಬು ದನ್ನು ನಾವು ಮರೆತಿಲ್ಲ ...ಭಾರತಭೂಮಿಯೆಂದರೆ ಇಡೀವಿಶ್ವದ ಉತ್ಸವಮೂರ್ತಿಯು .... ರಾಸಕ್ರೀಡೆಯಲ್ಲಿ, ಬೇರೆ ಬೇರೆ ಗೋಪಿಕಾಸ್ತ್ರೀಯರು ಕೋಲಾಟವನ್ನಾಡುವಾಗ, ಹೇಗೆ ಒಬ್ಬನೇ ಕೃಷ್ಣನನ್ನು ತಮ್ಮ ಹತ್ತಿರ ಕಾಣುತ್ತಿದ್ದರೋ ಹಾಗೆ, ವಿವಿಧ ಪ್ರಾಂತಗಳು ವಿಶಿಷ್ಟ ಮಾರ್ಗದಿಂದ ತಮ್ಮ ಉನ್ನತಿ ಮಾಡಿಕೊಳ್ಳುವಾಗ ರಾಷ್ಟ್ರೀಯತ್ವವನ್ನು ಹತ್ತರವೇ ಕಾಣ ಬೇಕು .... ಭಾರತಾಂಬೆಯ "ಜಯಕರ್ನಾಟಕ''ವೆಂಬೀ ಕೊಳಲಿನಲ್ಲಿ ಕನ್ನಡಿಗರು ಸಪ್ತಸ್ವರಗಳನ್ನು ನುಡಿಸಿ ವೇಣು ವಾದನಂಗೈಯಬೇಕೆಂಬದೇ ನಮ್ಮ ಕೊನೆಯ ಪ್ರಾರ್ಥನೆ.''

**ನನ್ನ ಕೊನೆಯ ಸಲಹೆ ಮತ್ತು ಮಂಗಳಾಚರಣೆ**:— ನಾನು ಹಿಡಿದ ಮಾರ್ಗದ ವಿವರಗಳನ್ನೇ ಎಲ್ಲರೂ ಅನುಸರಿಸ ಬೇಕೆಂದು ನಾನು ಹೇಳುವುದಿಲ್ಲ. ಕರ್ನಾಟಕಕ್ಕಿಂತ ಹೆಚ್ಚಿನ ಕ್ಷೇತ್ರವನ್ನು ತಕ್ಕೊಂಡರೆ ಮತ್ತಿಷ್ಟು ಸಂತೋಷ. ಆದರೆ, ಈಗಿನಂತೆ, ಕರ್ನಾಟಕದ ಬುದ್ಧಿಮತ್ತೆಯ ಪ್ರವಾಹವು ಹೊರಗೆ

ಹರಿದು ಹೋಗಿ, ಕರ್ನಾಟಕವನ್ನು ಬಂಜಿಯಾಗಿ ಉಳಿಸು ವಂತೆ ವರ್ತಿಸಬಾರದೆಂಬುದೇ ನನ್ನ ಮನೀಷೆ ಅಲ್ಲದೆ ನನ್ನಂತೆ ಅನೇಕ ವಿಷಯಗಳನ್ನು ಒಬ್ಬರೇ ಹೊತ್ತುಕೊಳ್ಳಲಿಕ್ಕೂ ಈಗ ಕಾರಣ ಉಳಿದಿರುವುದಿಲ್ಲ ಅದು ಆಗಿನ ಯುಗಧರ್ಮ. ದೃಷ್ಟಿ ಮಾತ್ರ ಸಮಗ್ರ ಇರಲಿ ಒಟ್ಟಿಗೆ, **ಕರ್ನಾಟಕದ ಬಾಳೆಯ ಗಿಡಕ್ಕೆ ಈಗ ಗೊನೆಬಿಟ್ಟಂತಾಗಿದೆ. ಅದರೊಳಗಿನ ಕಾಯಿಗಳನ್ನು ಪಕ್ವಮಾಡಿಕೊಂಡು ಉಣ್ಣುವ ಕೆಲಸ ಮುಂದಿನವರದು.** ಗೊನೆ ಬಿಟ್ಟ ಬಳಿಕ ಬಾಳೆಯ ಗಿಡ ಉಳಿದರೇನು, ಅಳಿದರೇನು? ತೀವ್ರವೇ ಅದು ಕಡಿದು ಹೋಗ ತಕ್ಕದ್ದೇ.

ಕೊನೆಗೆ ಉಪನಿಷತ್ಕಾರರ ವಾಕ್ಯದಿಂದ ಮಂಗಳಾಚರಣೆ ಮಾಡಿ ಮುಗಿಸುತ್ತೇನೆ.

**"ಯಾನ್ಯವದ್ಯಾನಿ ಕರ್ಮಾಣಿ ತಾನಿ ಸೇವಿತವ್ಯಾನಿ ॥ ನೋ ಇತರಾಣಿ ॥ ಯಾನ್ಯಸ್ಮಾಕಂ ಸುಚರಿತಾನಿ ತಾನಿ ತ್ವಯೋಪಾಸ್ಯಾನಿ ॥ ನೋ ಇತರಾಣಿ ॥**

**॥ ಶಂ ನೋ ವಿಷ್ಣುರುರುಕ್ರಮಃ ॥**



# ಹೆಸರುಗಳ ಅಕ್ಷರಾನುಕ್ರಮಣಿಕೆ



( ಪೂರ್ವರಂಗ 1 ಮತ್ತು ಉತ್ತರರಂಗ 2 ಹೀಗೆ ಇವೆರಡೂ ಭಾಗಗಳಲ್ಲಿ ಬಂದಿರುವ ವ್ಯಕ್ತಿಗಳ ಹೆಸರು ಕೊಡಲ್ಪಟ್ಟಿವೆ ಬಹುಶಃ ಅಡ್ಡಹೆಸರು ಮುಂಚೆ ಬಂದಿದೆ )

# V

